ಸೆಪ್ಟೆಂಬರ್ 1997

ರೂ. 10

ಮನೆಯಲ್ಲಿ
ಎಲ್ಲರಿಗೂ
ಇಷ್ಟವಾಗುವ
ವಿಶಿಷ್ಟ ಮಾಸಿಕ

# ಬಿಸಿಲ ಬದುಕು

• ವಾಣಿಜ್ಯ • ವಿಕಾಸ • ಮಾಹಿತಿ • ಸಂಪರ್ಕ



ಉಚಿತ ಪುಸ್ತಕ

**ಕರ್ನಾಟಕದಲ್ಲಿ ಕಂಪ್ಯೂಟರ್ ಶಿಕ್ಷಣ**

**ಶ್ವ ಸುಂದರಿಯರು ನು ಮಾಡುತ್ತಿದ್ದಾರೆ?**

- ಲೋಕಾಯುಕ್ತ ಜನರಿಗೆಷ್ಟು ಆಪ್ತ?
- ನಿಮ್ಮ ಮಗುವಿನ ಆರೋಗ್ಯ
- ಮನೆಯೊಳಗಿನ ಮಾಲಿನ್ಯ
- ಹಾಲಿ'ವುಡ್' ನಟ ಸುರೇಶ್ ಹೆಬ್ಳಿಕರ್
- ಶಿರಸಿ ತಂತ್ರ ವಿದ್ಯಾನಿದರ್ಶಿನಿ
- ಮೇವೂ ಪ್ರಸಾದ್ ಯಾದವ್!

**ದ್ಯೆ-ಉದ್ಯೋಗ**

ಲ್ಲಾಧಿಕಾರಿಯಾಗುವ ಬಗೆ
ಂಗಾಪೂರದಲ್ಲಿ ಶಿಕ್ಷಣ
ತ್ರಿಕೋದ್ಯಮ
.ಎ. ಅರ್ಜಿ ಹಾಕಿ

ಗೌರವ ಪ್ರತಿ

ಸೆಪ್ಟೆಂಬರ್ ೧೯೯೭ ಸಂಪುಟ ೧ ಸಂಚಿಕೆ ೩

# ಬಿಸಿಲ ಬದುಕು

• ವಾಣಿಜ್ಯ • ವಿಕಾಸ • ಮಾಹಿತಿ • ಸಂಪರ್ಕ







ಸ್ಥಿರ ಶೀರ್ಷಿಕೆಗಳು




ಸಂಪಾದಕ
ಚಂದ್ರಕಾಂತ ವಡ್ಡು

ನಿರ್ವಹಣೆ
ಸಿ.ಪಿ. ಸುರೇಶ್

ಪ್ರಸಾರ
ವೈ.ಬಿ. ವಿಜಯಕುಮಾರ

ಅಕ್ಷರ ಜೋಡಣೆ
ಜಿ. ಸುರೇಶ್

ಲೇಖಕರು :
ಉಷಾ ನವರತ್ನರಾಮ್
ಡಾ. ನಾರಾಯಣ್ ಮಹಿಪಿ
ಎನ್.ಕೆ. ಕುಲಕರ್ಣಿ
ಡಾ. ಎಸ್.ಸಿ. ಶರ್ಮಾ
ಕೋ. ಚೆನ್ನಬಸಪ್ಪ
ಗೋಪಾಲಕೃಷ್ಣ ವಂಡ್ಸೆ
ಎಂ.ಎಸ್. ನರಸಿಂಹಮೂರ್ತಿ
ಐ.ಎಂ. ವಿಠಲಮೂರ್ತಿ
ಡಾ. ವಸುಂಧರಾ ಭೂಪತಿ
ಹೇಮಲತಾ ದೇಸಾಯಿ
ಡಾ. ಆರತಿ ವೆಂಕಟೇಶ್
ದೀಪಾ ರವೀಂದ್ರ
ಆರೂರು ಲಕ್ಷ್ಮಣ್ ಶೇಟ್
ನಾರಾಯಣ ಎಂ. ಭಟ್
ಕೆ. ಶಾಂತಕುಮಾರಿ
ಎಸ್.ಎಸ್. ಹಿರೇಮಠ
ಪ್ರೀತಿಯ ಜನಾರ್ದನ
ಕೇಶವ ನಾಡಕರ್ಣಿ

ರಕ್ಷಾ ಪುಟ
ಐಶ್ವರ್ಯ ರೈ

ಒಳಪುಟ ವಿನ್ಯಾಸ
ಎಂ. ವಿಶ್ವನಾಥ

ಮುಖ ಪುಟ ವಿನ್ಯಾಸ
ಚಂದ್ರಶೇಖರ ಗುಬ್ಬಿ



ವಿಳಾಸ
ಬಿಸಿಲ ಬದುಕು ಮಾಸ ಪತ್ರಿಕೆ
ಅಂಕುರ ಪ್ರಕಾಶನ, ಅಂಚೆ ಪೆಟ್ಟಿಗೆ : 7951
ಬಸವೇಶ್ವರ ನಗರ, ಬೆಂಗಳೂರು- 560 079



Edited, Printed, Published and Owned by CHANDRAKANTA VADDU
473, I Cross, I Block, III Stage, Near Water Tank Bus Stop, Basaveshwaranagar,
BANGALORE - 560 079. Tel : 080 3358198 Fax : 080 5091136

ಪತ್ರಿಕೆ ತುಂಬಾ ಉಪಯುಕ್ತವಾಗಿದೆ. ಚಿಕ್ಕವರಿಂದ ದೊಡ್ಡವರವರೆಗೆ ಎಲ್ಲರೂ ಓದಲೇಬೇಕಾದ ಪತ್ರಿಕೆಯಿದು.

**- ಮಾಧುರಿ ನಾಗೇಶಮೂರ್ತಿ, ಹೈದರಾಬಾದ್**

♦

ತಿಂಗಳ ಮೊದಲ ವಾರದಲ್ಲಿ ಮಾತ್ರ ಒಂದಿಷ್ಟು ಕೆಲಸ. ಓದಿಗೇನೂ ಆತಂಕವಿಲ್ಲ. ಪ್ರತಿಯಾಗಿ ವಿದ್ಯಾರ್ಜನೆಗೆ ಪ್ರಯೋಜನಕಾರಿ. ಹೊಸ ಹೊಸ ಜನರ ಪರಿಚಯ. ಪತ್ರಿಕೋದ್ಯಮದ ಒಂದು ಹಂತದ ಅಧ್ಯಯನವಾದಂತೆ. ಕೈಗೆಟುಕುವ, ಹೆಚ್ಚು ಶ್ರಮವಿಲ್ಲದ ಈ ಸರಳ ವೃತ್ತಿಯಿಂದ ನನ್ನಂಥ ನೂರಾರು ಜನ ಅಸಹಾಯಕ ತರುಣ-ತರುಣಿಯರು ತಮ್ಮ ಬದುಕಿಗೆ ಒಂದು ದಾರಿಯನ್ನು ಖಂಡಿತವಾಗಿ ಕಂಡುಕೊಳ್ಳ ಬಹುದು. ಬಿಡುವಿನ ಸಮಯದಲ್ಲಿ ಇದೊಂದು ಸಾಹಿತ್ಯಿಕ ಸಾಂಸ್ಕೃತಿಕ ಚಟುವಟಿಕೆಯೆಂದಾದರೂ ಕೈಕೊಳ್ಳಲು ಅಡ್ಡಿಯಿಲ್ಲ. ಬರುವ ಸಂಪಾದನೆಯಿಂದ ವಿದ್ಯಾಭ್ಯಾಸಕ್ಕೂ ಅನುಕೂಲ. ಇದು ನನ್ನ ಅನಿಸಿಕೆ.

**-ಮನೋಜ ಆನಿಗೋಳ, ಪತ್ರಿಕಾ ಏಜೆಂಟ್, ಬೆಳಗಾವಿ**

♦

ನಾನು, ಅಂದರೆ ಜೆ.ಎಸ್. ಮೆಹಬೂಬ, ಅನೇಕ ಇತರ ಪುಸ್ತಕಗಳನ್ನು ಓದುತ್ತಿದ್ದೆ. ನಮ್ಮ ಅಪ್ಪ ''ಬಿಸಿಲ ಬದುಕು'' ತಂದು ಕೊಟ್ಟರು. ಅದು ನನಗೆ ತುಂಬಾ ಹಿಡಿಸಿದೆ.

**- ಜೆ.ಎಸ್.ಮೆಹಬೂಬ, ಕುರುಗೋಡು**






ಈ ತಿಂಗಳ ಬಿಸಿಲ ಬದುಕು ಚೆನ್ನಾಗಿ ಮೂಡಿ ಬಂದಿರುತ್ತದೆ. ಶಿಕ್ಷಣ ಕ್ಷೇತ್ರದ ಭಕ್ಷಕರು ಓದಿ ತುಂಬಾ ಬೇಸರವಾಯಿತು. ಬಳ್ಳಾರಿ ಜಿಲ್ಲೆಯಲ್ಲಿ ಇಂಥ ದುಷ್ಟ ಶಿಕ್ಷಣಾಧಿಕಾರಿಗಳು ಇದ್ದಾರೆ ಎಂಬುದು ಗೊತ್ತಿರಲಿಲ್ಲ. ದಕ್ಷಿಣಾಮೂರ್ತಿಯ ದುಷ್ಟ ಚಟುವಟಿಕೆಗಳ ಬಗ್ಗೆ ಚೆನ್ನಾಗಿ ವಿವರಿಸಿದ್ದೀರಿ. ಏನೇ ಆಗಲಿ ಈ ಪತ್ರಿಕೆ ವಿದ್ಯಾರ್ಥಿಗಳಿಗೆ ದಾರಿದೀಪವಾಗುತ್ತದೆ. ಬೆಲೆಯಲ್ಲಿ ಯಾವುದೇ ವ್ಯತ್ಯಾಸ ಬೇಡ.

**- ಟಿ. ತೇಜಾನಂದ, ಕೊಟ್ಟೂರು**

ರಾಣೇಬೆನ್ನೂರು-ಹೈಬ್ರಿಡ್ ಬೀಜೋತ್ಪಾದನೆಯ ತವರು ಈ ಲೇಖನವು ಅತ್ಯಂತ ಸ್ವಾರಸ್ಯಕರವಾಗಿ ಮೂಡಿಬಂತು. ಇದನ್ನು ಓದಿ ನಮಗೆ ಒಕ್ಕಲುತನದ ಬಗ್ಗೆ ಬಹಳ ಮಾಹಿತಿ ಸಿಕ್ಕಿತು. ಇದಕ್ಕಾಗಿ ತಮಗೆ ಬಿನ್ನವಿಸುವುದೇನೆಂದರೆ ಇಂಥ ಹಲವಾರು ಲೇಖನಗಳನ್ನು ಪ್ರಕಟಿಸುವಿರೆಂದು ನಂಬಿರುವೆನು. ಡಾ. ಎಸ್.ಸಿ.ಶರ್ಮಾರವರ ಉತ್ತರಗಳು ನಮಗೆ ಮಾರ್ಗದರ್ಶಿಯಾಗಿದ್ದವು.

**- ವೀರನಗೌಡ, ರೋಣ**

## ಹೀಗೊಂದು ಪತ್ರ ವ್ಯವಹಾರ

*ಪ್ರೀತಿಯ ಚಂದ್ರಕಾಂತ,*

*''ಬಿಸಿಲ ಬದುಕು'' ಎರಡನೇ ಸಂಚಿಕೆ ನೋಡಿದೆ. ಚೆನ್ನಾಗಿದೆ. ಇನ್ನೂ ಚೆನ್ನಾಗಬೇಕು. ಚೆನ್ನಾಗುವ ಭರವಸೆ ನನಗಿದೆ. ಇರಲಿ. ಒಂದು ಲೇಖನ ಮತ್ತು ಅದಕ್ಕೆ ಸಂಬಂಧಿಸಿದ ಒಂದು ಫೋಟೋ ಇಲ್ಲಿದೆ. ಪ್ರಕಟಿಸಬೇಕೆಂದು ಕೋರುವೆ. ನಿಮ್ಮ ಪ್ರೀತಿ ವಿಶ್ವಾಸವನ್ನು ಕಳೆದುಕೊಳ್ಳಬಾರದೆಂಬ ಕಾರಣಕ್ಕಾದರೂ ಏನನ್ನಾದರೂ ಬರೆಯಬೇಕೆಂದು ಬರೆದಿರುವೆ. ಹಾಗಂತ ಕಾರಣಾಂತರದಿಂದ ಈ ಲೇಖನ ಪ್ರಕಟಿಸಲು ನಿಮಗೆ ಸಾಧ್ಯವಾಗದಿದ್ದರೆ ನನಗೆ ಬೇಸರವೇನೂ ಇಲ್ಲ. ಸಂಪಾದಕರಾಗಿ ಒಂದು ಪತ್ರಿಕೆಯ ಗುಣಮಟ್ಟ ಕಾಪಾಡುವ ಹೊಣೆ ನಿಮಗಿದ್ದೇ ಇದೆ. ಅದರಲ್ಲಿ ನನ್ನಂಥವನ ಆಹವಾಲುಗಳು ಕ.ಬು. ಸೇರಿದರೆ ತಪ್ಪೇನಿದೆ?! ಅಂದ್ಹಾಂಗ ನಿಮ್ಮ ಪತ್ರಿಕೆಗೆ ಸಂಪಾದಕೀಯವೇ ಇಲ್ವಲ್ರೀ ಮಾರಾಯ್ರೆ.*

**- ಹುರುಕಡ್ಲಿ ಶಿವಕುಮಾರ, ಬಾಚಿಗೊಂಡನಹಳ್ಳಿ**

*ಪ್ರಿಯ ಶ್ರೀ ಶಿವಕುಮಾರ,*

''ನಿಮ್ಮ ಪ್ರೀತಿ ವಿಶ್ವಾಸವನ್ನು ಕಳೆದುಕೊಳ್ಳಬಾರದೆಂಬ ಕಾರಣಕ್ಕಾದರೂ ಏನನ್ನಾದರೂ ಬರೆಯಬೇಕೆಂದು ಬರೆದಿರುವೆ'' ಎಂಬ ಒಕ್ಕಣೆಯೊಂದಿಗೆ ನೀವು ರವಾನಿಸಿದ ಬರಹ ತಲುಪಿದೆ. ನೀವು ಬರೆಯುವುದಕ್ಕೂ ನನ್ನೊಂದಿಗೆ ವಿಶ್ವಾಸ ಉಳಿಸಿಕೊಳ್ಳುವುದಕ್ಕೂ ಸಂಬಂಧವೇ ಇಲ್ಲ. ಇದೇ ಕಾರಣಕ್ಕಾಗಿ ಈ ಲೇಖನ ಹಿಂದಿರುಗಿಸುತ್ತಿರುವೆ!

**- ಚಂದ್ರಕಾಂತ ವಡ್ಡು, ಬೆಂಗಳೂರು.**

## ಟಪಾಲು

ಸಂಚಿಕೆಯಿಂದ ಸಂಚಿಕೆಗೆ ಮೈದುಂಬಿಕೊಂಡು ಬರುತ್ತಿರುವ 'ಬಿಸಿಲ ಬದುಕು' ಸಮಗ್ರ ಕುಟುಂಬಕ್ಕೆ ಸಮೃದ್ಧ ಮಾಸಿಕವಾಗುವುದರಲ್ಲಿ ಸಂದೇಹವಿಲ್ಲ.

**- ಅಮೃತ ಕುಂಬಾರ, ನಿರ್ಣಾ**

ಎಲ್ಲಾ ಲೇಖನಗಳೂ ಮನನೀಯವಾಗಿದ್ದವು.

**- ವಿರೂಪಾಕ್ಷಿ, ಪೂಜಾರಹಳ್ಳಿ**

ನಾನು ಇದುವರೆಗೆ ಇಂತಹ ಮಾಸಿಕ-ಶೈಕ್ಷಣಿಕ ಪತ್ರಿಕೆಯನ್ನು ನೋಡಿರಲೇ ಇಲ್ಲ.

**- ಅನ್ನಪೂರ್ಣ ಕಠಾರಿ, ಸುರೇಬಾನ**

ತಮ್ಮ ಪತ್ರಿಕೆ ಈ ಭಾಗದ ಜನತೆಯನ್ನು ಬಹುವಿಧವಾಗಿ ಆಕರ್ಷಿಸಿದೆ.

**- ಹಂಸಗೀತೆ, ಮುಧೋಳ**

ಎರಡನೇ ಸಂಚಿಕೆ ಓದಿ ತುಂಬಾ ಸಂತೋಷವಾಯಿತು. ನಿಮ್ಮ ಪತ್ರಿಕೆ ನಮ್ಮಂತಹ ನೂರಾರು ಯುವ ವಿದ್ಯಾರ್ಥಿಗಳಿಗೆ ಉಪಯುಕ್ತವಾಗಿದೆ.

**- ಸದಾಶಿವ ದೊಡಮನಿ, ಹುಲಕೋಟಿ**

'ಬಿಸಿಲ ಬದುಕು' ನಿಜಕ್ಕೂ ಭರವಸೆ ಮೂಡಿಸಿದೆ. ಏಕೆಂದರೆ ಇದು ಎಲ್ಲಾ ಜನರಿಗೂ ಅನುಕೂಲವಾಗುವ ಹಾಗೂ ವಿದ್ಯಾರ್ಥಿಗಳಿಗೆ ಹೆಚ್ಚು ಉಪಯೋಗವಾಗುವ ಒಂದು ಕನ್ನಡ ಮಾಸ ಪತ್ರಿಕೆ.

**- ದಿನೇಶ್ ಎಂ. ಸಿಗ್ಗ, ಸೊರಬ**

ನಿಮ್ಮ ಪತ್ರಿಕೆಯಲ್ಲಿ ಪ್ರತಿ ತಿಂಗಳು ''ಸ್ವಯಂ ಉದ್ಯೋಗ''ದ ಬಗ್ಗೆ ವಿವರವಾದ ಮಾಹಿತಿ ನೀಡಿದರೆ ನಮ್ಮಂತಹ ಎಷ್ಟೋ ನಿರುದ್ಯೋಗಿಗಳಿಗೆ ಉಪಕಾರ ಮಾಡಿದಂತಾಗುತ್ತದೆ.

**- ಸುಬ್ರಾಯ, ನಾಗರಾಜ, ಈರಪ್ಪ, ಭಟ್ಕಳ**

ಈಗಿರುವ ಎಲ್ಲಾ ಪತ್ರಿಕೆಗಳಿಗೆ ಹೋಲಿಸಿ ನೋಡಿದರೆ 'ಬಿಸಿಲ ಬದುಕು' ತುಂಬಾ ಚೆನ್ನಾಗಿದೆ. ತಮ್ಮಲ್ಲಿ ವಿನಂತಿ ಮಾಡಿಕೊಳ್ಳುವುದೇನೆಂದರೆ ತಮ್ಮ ಪತ್ರಿಕೆಯಲ್ಲಿ ಕ್ರೀಡೆಯ ಬಗ್ಗೆ ಲೇಖನ ಪ್ರಕಟಿಸಿ.

**- ಮೆಹಬೂಬ ಗಡೇದ, ಹುನಗುಂದ**

ಪತ್ರಿಕೆ ನೋಡಿ ಬಹಳ ದಿನಗಳ ಹಿಂದೆಯೇ ಪ್ರಕಟಗೊಳ್ಳಬೇಕಿದ್ದ ಪತ್ರಿಕೆ ಈಗ ಹೊರಬಂತಲ್ಲಾ ಎಂದು ಸಂತೋಷವಾಯಿತು.

**- ಹಸ್ಸಾಯಿ ಬಾಷಾ, ಮೋರಟಗಿ**

ಪ್ರತಿ ತಿಂಗಳು ಕಾಯುವಂತೆ ಮಾಡುವ ಪತ್ರಿಕೆಯಿದು.

- ಈರಣ್ಣ ಶಿ. ಜಡಿ, ಮಾವನೂರು

ನಿಮ್ಮ ಮಾಸಪತ್ರಿಕೆ ನೋಡಿದೆ. ಸಂತೋಷವಾಯಿತು. ನನ್ನ ವಿಳಾಸಕ್ಕೆ ಪ್ರತಿ ತಿಂಗಳು ಕಳಿಸಿಕೊಡಿ.

- ಸಿ.ಎಂ.ವೀರಣ್ಣ, ಚಿತ್ರದುರ್ಗ

ಬಿಸಿಲಲ್ಲಿ ದಣಿದು ಬಂದು ಬಸ್‌ಸ್ಟಾಂಡ್ ಬುಕ್‌ಸ್ಟಾಲ್ ನಲ್ಲಿ ಕಣ್ಣಾಡಿಸುವಾಗ ಆಗಸ್ಟ್ ಸಂಚಿಕೆ ಕಾಣಿಸಿತು. ಅದರ ಬೆಲೆ ಸುಮಾರು ೧೦ ರೂಪಾಯಿ ಇದ್ದಿರಬಹುದೆಂದು ಕೈಗೆತ್ತಿಕೊಂಡಾಗ ಅದು ಕೇವಲ ಹತ್ತು ರೂಪಾಯಿ ಎಂದು ತಿಳಿದು ಸಂತೋಷವಾಯಿತು.

- ನಿಂಬೆಣ್ಣ, ಮಲ್ಲಾ(ಬಿ)

ಒಂದೆರಡು ಕಥೆ, ಧಾರಾವಾಹಿ ಸೇರಿಸಿ (ಎಲ್ಲರೂ ಮೆಚ್ಚುವುದಾದರೆ). ತಮ್ಮ ಪತ್ರಿಕೆಯನ್ನು ಓದುವ ನನಗೆ ಒಂದೇ ಒಂದು ನಿರಾಶೆಯೆಂದರೆ ಬುದ್ಧಿಗೆ ಕಸರತ್ತು ನೀಡುವ ಪದಬಂಧ ಇಲ್ಲದೇ ಇರುವುದು.

- ಸುನಂದಾ ರಾಜಶೇಖರ್, ಮಡಿಕೇರಿ

''ಸ್ವಾತಂತ್ರ್ಯ : ಯಾರಿಗೆ ಬಂತು? ಎಲ್ಲಿಗೆ ಬಂತು?'' ತುಂಬಾ ನೈಜವಾಗಿದೆ. ೫೦ ವರ್ಷಗಳಲ್ಲಿ ನಾವು ಮಾಡಿದ್ದೇನು? ಗಳಿಸಿದ್ದೇನು? ಎಂಬ ಪ್ರಶ್ನೆಗಳಿಗೆ ಉತ್ತರ ಸೊನ್ನೆ. ಏಕೆಂದರೆ ಸೊನ್ನೆಯನ್ನು ನೀಡಿದವರು ಭಾರತೀಯರೇ ಅಲ್ಲವೇ?!

- ಶಂಕರಗೌಡ ಪಾಟೀಲ, ಬಾದಾಮಿ

ತಮ್ಮ ಪತ್ರಿಕೆಯ 'ವಿದ್ಯೆ-ಉದ್ಯೋಗ' ವಿಶೇಷತೆಯನ್ನು ಕೈಬಿಟ್ಟು ''ಪ್ರಸ್ತುತ ವಿಚಾರ-ವಿಮರ್ಶೆ'' ವಿಶೇಷವನ್ನಾಗಿ ತನ್ನಿ. ಕನಿಷ್ಠಪಕ್ಷ ಎರಡು ಕಾದಂಬರಿಗಳನ್ನು ಆದರಲ್ಲೂ ಹೆಂಗಳೆಯರ ಮನಸ್ಸನ್ನು ಆಧರಿಸಿದ ಧಾರಾವಾಹಿಗಳನ್ನು ಕಥೆಗಳನ್ನು ಪ್ರಕಟಿಸಿ.

- ಹೆಚ್.ಎಂ.ವಾಮದೇವಯ್ಯ, ಅರಸೀಕೆರೆ

ಕೆ. ಶಾಂತಕುಮಾರಿಯವರ ಮುಖ್ಯ ಲೇಖನ ''ಸ್ವಾತಂತ್ರ್ಯ ಯಾರಿಗೆ ಬಂತು? ಎಲ್ಲಿಗೆ ಬಂತು?'' ಸೊಗಸಾಗಿ ಮೂಡಿದೆ. ಕೋ.ಚೆನ್ನಬಸಪ್ಪನವರ ''ಭ್ರಷ್ಟರ ರಕ್ಷಣೆಗಾಗಿ ಲೋಕಪಾಲ ಮಸೂದೆ'' ಹಾಗೂ ''ಕ್ಲಾಸ್ ರೂಂ'' ಅಷ್ಟೇ ಚೆನ್ನಾಗಿದ್ದವು.

- ರಾಮಯ್ಯ ಹಿರೇಮಠ, ಮುಗಳಖೋಡ

ಪತ್ರಿಕೆ ಬರೋ ಮೊದ್ಲು ಹೆಸರು ಕೇಳಿದಾಗನ ಬಾಳ ಖುಷಿಯಾತು. ಮತ್ತು ಎರ್ಡ್ನು ಸಂಚಿಕೆ ನೋಡಿದಮ್ಯಾಲ ಈ ಭಾಗದ ನಂ-ಗೆಳಿಯಾರ ಜೋಡಿ ನಾ ಕಂಡಂತಹ ಕನುಸು-ಖರೆ ಅನ್ನಿತು. ಏನಡ್ಡಿಯಿಲ್ಲಾ ಇಂಥ ವಿಭಿನ್ನತೆಯ ಪತ್ರಿಕೆ ಯೊಂದರ... ಅವಶ್ಯಕತಾ ಜರೂರು ಇತ್ತು. ಈಗೇನ್ ನೀವು ಹೊಂಟದಾರಿ ಚೋಲೋ ಐತಿ! ಎದುಕು ಹಿಮ್ಮತ್ ಬ್ಯಾಡ್ರಿ. ಹೆಸುರು ಮಾಡೋ ಖಾತ್ರಿ ನಮಗೂ ಐತಿ. ಬಿಸುಲು, ಚಳಿ, ಕುಗ್ಗೋದು ಬ್ಯಾಡ! ಹೂಂ ಹೊಡ್ರೀ ಗಾಡಿ!

- ಶರಣಪ್ಪ ವಡಿಗೇರಿ, ಕುಷ್ಟಗಿ.

ಬ್ಯಾಂಕಿಂಗ್ ನೇಮಕಾತಿ, ಐ.ಪಿ.ಎಸ್. ಮಾಡುವುದು ಹೇಗೆ?, ಪತ್ರಕರ್ತನಾಗುವುದು ಹೇಗೆ? ಎಲ್ಲವೂ ಮನಸ್ಸಿಗೆ ತೃಪ್ತಿಯಾಗುವಂತೆ ಇವೆ.

- ಅರವಿಂದ ಪಾಟೀಲ, ಯಲಬುರ್ಗಿ

## ಮೂಕವಿಸ್ಮಿತನಾಗಿ ನಾಲ್ಕು ಪ್ರತಿ ಕೊಂಡೆ !

ತಾವು ಹೊರಡಿಸಿದ 'ಬಿಸಿಲ ಬದುಕು' ವಿನೂತನ ಮಾಸಿಕ ಪತ್ರಿಕೆ ಕಂಡು ಮೂಕ ವಿಸ್ಮಿತನಾದೆ. ನನಗೆ ನಿಮ್ಮ ಮಾಸಪತ್ರಿಕೆ ಆಕಸ್ಮಿಕವಾಗಿ ಲಭಿಸಿತು. ನಾನು ನನ್ನ ಹುಟ್ಟೂರಾದ ಬಬಲೇಶ್ವರ ಗ್ರಾಮ (ಬಿಜಾಪುರ ಜಿಲ್ಲೆ)ಕ್ಕೆಂದು ಬಂದು ಶಿರಸಿಗೆ ಹೊರಟು ನಿಂತಾಗ ಬಸ್ ನಿಲ್ದಾಣದಲ್ಲಿ ಪತ್ರಿಕೆ ಮಾರುವ ಹುಡುಗ ಕೇವಲ 'ಬಿಸಿಲ ಬದುಕು' ಮಾಸ ಪತ್ರಿಕೆಗಳನ್ನು ಹಿಡಿದು ಓಡಾಡುತ್ತಿದ್ದ. ಪತ್ರಿಕೆ ತೆಗೆದುಕೊಳ್ಳುವಂತೆ ನನ್ನ ದುಂಬಾಲು ಬಿದ್ದ. ನಾನು ಎಷ್ಟು ಬೇಡವೆಂದರೂ ಆತ ಕೇಳಲಿಲ್ಲ. ನಿಮ್ಮಂಥವರೇ ಇಂಥ ಪತ್ರಿಕೆ ಓದದಿದ್ದರೆ ಹೇಗೆ ಸಾರ್? ಎಂದು ಅಳ್ಳುಹುರಿದಂತೆ ಪ್ರಶ್ನಿಸಿದ. ಚಿಕ್ಕ ಹುಡುಗನೇ ಪತ್ರಿಕೆ ಬಗ್ಗೆ ಹೇಳುವುದನ್ನು ಕಂಡು ತಮಾಷೆಗಾಗಿ, ವಿಧಿಯಿಲ್ಲದೇ ಹತ್ತು ರೂಪಾಯಿ ಕೊಟ್ಟು ತೆಗೆದುಕೊಂಡೆ. ನನ್ನ ಜೊತೆಗಿದ್ದ ಸಂಬಂಧಿಕರು, ''ಈ ಪುಸ್ತಕದಿಂದ ಏನು ಉಪಯೋಗ? ಐದು ನಿಮಿಷ ನೋಡಿ ವಾಪಸ್ ಕೊಟ್ಟ್ರಾಯ್ತು. ಇಷ್ಟಕ್ಕೆ ಯಾಕೆ ಹತ್ತು ರೂಪಾಯಿ ಖರ್ಚು ಮಾಡಬೇಕು'' ಅಂತ ಹೇಳಿದ್ರು. ಅವರು ಹೇಳಿದ್ದು ಸರಿ ಎನಿಸಿತು ಆ ಕ್ಷಣದಲ್ಲಿ. ಅವರು ಹೇಳಿದಂತೆ ಐದು ನಿಮಿಷ ಬೇಗ ಬೇಗನೆ ಪುಟ ತಿರುಗಿಸಿದೆ. ನಂತರದ ಕ್ಷಣಗಳಲ್ಲಿ ಆ ಹುಡುಗನನ್ನು ಕರೆದು ನಲ್ವತ್ತು ರೂಪಾಯಿ ಕೊಟ್ಟು ಮತ್ತೂ ನಾಲ್ಕು ಪತ್ರಿಕೆ ತೆಗೆದುಕೊಂಡು ಅವರಿಗೆ ಹಂಚಿದೆ. ಅವರೆಲ್ಲ ಹೌಹಾರಿದರು. ಓದಿದರು. ಪತ್ರಿಕೆ ಬಗ್ಗೆ ತುಂಬಾ ಮೆಚ್ಚುಗೆ ವ್ಯಕ್ತಪಡಿಸಿದರು. ನನಗಂತೂ ಈ ಪತ್ರಿಕೆಯ ಭೇಟಿ ವಿನೂತನ ಘಟನೆ ಆಗಿದೆ.

- ಚಂದ್ರಶೇಖರ ವಿ. ಜಾಧವ,
ವಕೀಲರು, ಶಿರಸಿ.

ಈ ಪತ್ರಿಕೆ ಮನೆ ಮಂದಿಗೆಲ್ಲಾ ಮೆಚ್ಚುಗೆಯಾಗುವಂತಹದ್ದು. ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ವಿದ್ಯಾರ್ಥಿಗಳಂತೂ ಈ ಪತ್ರಿಕೆಯನ್ನು ಕೊಂಡು ಓದಲೇಬೇಕು.

- ಅದೃಶ ಬಿ. ದಿಬ್ಬದ,
ಅಂಬಡಗಟ್ಟಿ

♦

ನಿಮ್ಮ ಮಾಸಪತ್ರಿಕೆ 'ಬಿಸಿಲ ಬದುಕ'ನ್ನು ನೋಡಿ ಬೇಸಿಗೆಯಲ್ಲಿ ತಣ್ಣೀರು ಕುಡಿದಷ್ಟು ಆನಂದವಾಯಿತು. ಸಾಮಾನ್ಯವಾಗಿ ನಾ ಇತರ ವಾರ ಪತ್ರಿಕೆ, ಮಾಸಪತ್ರಿಕೆಗಳನ್ನು ಓದುವುದಿರಲ್ಲಿ ನೋಡುವುದನ್ನೇ ಬಿಟ್ಟಿದ್ದವನು. ಆದರೆ ಯುವಕರಿಗೆ ಮಾರ್ಗದರ್ಶಿಯಾಗಿ ಎಲ್ಲರೂ ಮೆಚ್ಚಿ ಓದುವಂತಹ ಪತ್ರಿಕೆಯಾಗಿ ಹೊರ ಹೊಮ್ಮಿದೆ ನಿಮ್ಮ ಪತ್ರಿಕೆ. ನಿಮ್ಮ ಪತ್ರಿಕೆಯ ಮುಖ ಪುಟದಲ್ಲಿ ಮಕ್ಕಳ ಚಿತ್ರದ ಜೊತೆ, ಪರಿಸರದ ಪ್ರಕೃತಿಯ ಚಿತ್ರಣಗಳು ಮೂಡಿ ಬಂದರೆ ಇನ್ನು ಬಹು ಚೆನ್ನಾಗಿರುತ್ತದೆ, ಆಕರ್ಷಕವಾಗಿರುತ್ತದೆಂದು ನನ್ನ ವೈಯಕ್ತಿಕ ಭಾವನೆ.

- ಜಿ. ಸತೀಶ ಶ್ರೀವತ್ಸ,
ಬೆಂಗಳೂರು

♦

ಪತ್ರಿಕೆ ನವೀನ ವಿನ್ಯಾಸದಿಂದ ವಿಶಿಷ್ಟವಾಗಿ ಮೂಡಿ ಬರುತ್ತಿದೆ. ಬಿಸಿಲ ಜೊತೆಗೆ ಬೆಳದಿಂಗಳ ತಂಪನ್ನು ಮಡಿಲಲ್ಲಡಗಿಸಿಕೊಂಡು ಓದುಗರ ಎದೆಯಾಳದಲ್ಲಿ ನೆಲೆಯೂರಲಿ.

- ತುರವೀಹಾಳ ಚಂದ್ರು,
ಧಾರವಾಡ

# ಲೋಕಾಯುಕ್ತ : ಜನರಿಗೆಷ್ಟು ಆಪ್ತ?



**ಕಚೇರಿಯಲ್ಲಿ ಆತ ಲಂಚಕ್ಕೆ ಕೈ ಚಾಚುತ್ತಾನೆ. ಅಧಿಕಾರ ಪಡೆದ ಈತ ಹಲವು ಅಕ್ರಮ ಮಾರ್ಗಗಳಿಂದ ಹಣ ಬಾಚುತ್ತಾನೆ. ಎಲ್ಲ ನಿಮ್ಮ ಕಣ್ಣೆದುರಿಗೇ ನಡೆಯುತ್ತದೆ. ನೀವು ಅಸಹಾಯಕತೆಯಿಂದ ನೊಂದು ನಿಟ್ಟುಸಿರುಬಿಟ್ಟು ಸುಮ್ಮನಾಗುವಿರಾ? ಹಾಗಾದರೆ ಲಂಚ ನಿಗ್ರಹಕ್ಕೆಂದೇ ಇರುವ ಲೋಕಾಯುಕ್ತದ ಬಗ್ಗೆ ನೀವು ತಿಳಿದುಕೊಳ್ಳಲೇಬೇಕು.**

**○ ದೀಪಾ ರವೀಂದ್ರ**



**ಭಾ**ರತದಲ್ಲಿ ಏನಿಲ್ಲ ಹೇಳಿ? ಅದ್ಭುತವಾದ ಸಂವಿಧಾನವಿದೆ. ಉತ್ತಮ ಪ್ರಜಾಪ್ರಭುತ್ವ ವ್ಯವಸ್ಥೆ ಇದೆ. ಆಡಳಿತ ವ್ಯವಸ್ಥೆ ಇದೆ. ಒಳ್ಳೆಯ ಕಾನೂನುಗಳಿವೆ. ಎಲ್ಲ ಇದೆ. ಆದರೆ ಕೊರತೆ ಎಂದರೆ ನಾಗರಿಕರ ಜಾಗೃತಿ ಮಾತ್ರ.

ಸರ್ಕಾರಿ ನೌಕರ ಇರುವುದೇ ಲಂಚ ಪಡೆಯಲು ಎಂಬ ಮನುಷ್ಯರಿದ್ದಾರೆ. ಅಧಿಕಾರ ಇರುವಷ್ಟು ದಿನ ಕೈಲಾದಷ್ಟು ಮಾಡಿಕೊಂಡು ಬಿಡಬೇಕೆಂಬ ಭಾವನೆಯ ಜನರಿದ್ದಾರೆ. ಪೊಲೀಸ್ ಠಾಣೆ, ತಾಲ್ಲೂಕು ಕಚೇರಿ, ಸಬ್‌ರಿಜಿಸ್ಟ್ರಾರ್ ಕಚೇರಿ, ಜಿಲ್ಲಾಧಿಕಾರಿಗಳ ಕಚೇರಿ ಎಲ್ಲಿ ಹೋದರೂ ನೌಕರನ ಕೈ ಬಿಸಿ ಮಾಡದೇ ಕೆಲಸವೇ ನಡೆಯುವುದಿಲ್ಲ. ಇವೆಲ್ಲಾ ಸಾಮಾನ್ಯ ಎಂದುಕೊಂಡ ನಾಗರಿಕರಿದ್ದಾರೆ. "ಏನಾದರೂ ಆಗಲಿ, ಹಣ ಕೊಟ್ಟರೆ ಆತ ಕೆಲಸ ಮಾಡಿಕೊಡುತ್ತಾನಪ್ಪ" ಎಂದು ಸುಮ್ಮನಿರುವ ಪ್ರವೃತ್ತಿಯೇ ಬೆಳೆದುಬಿಟ್ಟಿದೆ.

ಆದರೆ ಈ ಸರ್ಕಾರಿ ಕಚೇರಿಗಳಲ್ಲಿ ತಾಂಡವವಾಡುತ್ತಿರುವ ಲಂಚಗುಳಿತನವನ್ನು ನಿಯಂತ್ರಿಸಲೆಂದೇ ೧೯೮೪ರಲ್ಲಿ ಲೋಕಾಯುಕ್ತ ಕಾಯ್ದೆಯನ್ನು ಜಾರಿಗೊಳಿಸಲಾಯಿತು.

ದೇಶದಲ್ಲಿ ಭ್ರಷ್ಟಾಚಾರ ಹೆಚ್ಚಾಗುತ್ತಿದೆ ಎಂಬ ಕೂಗು ಕೇಳಿ ಬರುತ್ತಿದ್ದ ಸಂದರ್ಭದಲ್ಲಿ ಲೋಕಪಾಲ್ ಮಸೂದೆ ಜಾರಿಗೊಳಿಸಬೇಕು ಎಂದು ಕೇಂದ್ರ ಸರ್ಕಾರ ಆಲೋಚಿಸುತ್ತಿರುವಾಗ ಆಗ ಕರ್ನಾಟಕದಲ್ಲಿ ಅಧಿಕಾರದಲ್ಲಿದ್ದ ಜನತಾಪಕ್ಷ ಸರ್ಕಾರ ರಾಜ್ಯದಲ್ಲಿ ಲೋಕಾಯುಕ್ತ ಕಾಯ್ದೆಯನ್ನು ಜಾರಿಗೊಳಿಸಿತು.

ಭ್ರಷ್ಟಾಚಾರ ನಿಯಂತ್ರಣ ಕಾಯ್ದೆ. ಜಾರಿಯಲ್ಲಿದ್ದರೂ ಅದರಿಂದ ಸರ್ಕಾರಿ ಕಚೇರಿಗಳಲ್ಲಿ ದಿನನಿತ್ಯ ನಡೆಯುವ ಲಂಚಾವತಾರವನ್ನು ತಡೆಯುವುದು ಸಾಧ್ಯವಿಲ್ಲ ಎಂಬ ಕಾರಣಕ್ಕಾಗಿ ಈ ಕಾನೂನು ಜಾರಿಗೊಳಿಸಲಾಯಿತು. ಸರ್ಕಾರಿ ನೌಕರರು ಲಂಚ ಪಡೆಯುವುದನ್ನು ತಪ್ಪಿಸಲು, ಅಕ್ರಮ ಸಂಪತ್ತು ಮಾಡಿಕೊಳ್ಳದಂತೆ ತಡೆಯಲು, ನಿರ್ದಿಷ್ಟ ಯೋಜನೆಗೆ ಮೀಸಲಿಟ್ಟ ಹಣವನ್ನು ಆ ಯೋಜನೆಗೇ ಖರ್ಚು ಮಾಡುವಂತೆ ಮಾಡಲು ಈ ಕಾಯ್ದೆಗೆ ೧೯೮೫ರಲ್ಲಿ ನಿಯಮಗಳನ್ನು ರೂಪಿಸಲಾಯಿತು.

ಲೋಕಾಯುಕ್ತದಲ್ಲಿ ಎರಡು ವಿಭಾಗಗಳಿವೆ. ಒಂದು ನ್ಯಾಯಾಂಗ ವಿಭಾಗ, ಇನ್ನೊಂದು ತನಿಖಾ ವಿಭಾಗ.

ಲೋಕಾಯುಕ್ತ ಮತ್ತು ಉಪಲೋಕಾ. ಯುಕ್ತರು ಸಾಧಾರಣವಾಗಿ ನ್ಯಾಯಾಧೀಶರಾಗಿರುತ್ತಾರೆ. ಲೋಕಾಯುಕ್ತರನ್ನಾಗಿ ಸುಪ್ರೀಂ ಕೋರ್ಟ್ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸಿದವರನ್ನು ಅಥವಾ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಾಗಿದ್ದವರನ್ನು ಮುಖ್ಯಮಂತ್ರಿಗಳ ಸಲಹೆ ಮೇರೆಗೆ ರಾಜ್ಯಪಾಲರು ಲೋಕಾಯುಕ್ತರನ್ನಾಗಿ ನೇಮಿಸಿದರೆ ಹೈಕೋರ್ಟ್ ನ್ಯಾಯಾಧೀಶರು ಉಪಲೋಕಾಯುಕ್ತರಾಗಿ ನೇಮಕವಾಗುತ್ತಾರೆ.

ತನಿಖಾ ವಿಭಾಗದಲ್ಲಿ ಪೊಲೀಸ್ ಅಧಿಕಾರಿಗಳಿರುತ್ತಾರೆ. ಪ್ರತಿ ಪೊಲೀಸ್ ವಲಯದಲ್ಲಿಯೂ ಲೋಕಾಯುಕ್ತ ಡಿಐಜಿ, ಎಸ್.ಪಿ., ಡಿ.ಎಸ್.ಪಿ.ಗಳಿರುತ್ತಾರೆ. ಪ್ರತಿ ಜಿಲ್ಲೆಯಲ್ಲಿಯೂ ಲೋಕಾಯುಕ್ತ ಕಚೇರಿಗಳಿವೆ. ಅಲ್ಲಿ ಕನಿಷ್ಠ ಇನ್ಸ್‌ಪೆಕ್ಟರ್ ದರ್ಜೆ ಅಧಿಕಾರಿಗಳಿರುತ್ತಾರೆ.

ಲೋಕಾಯುಕ್ತ ಕಾಯ್ದೆ ಪ್ರಕಾರ ತನಿಖಾ ವಿಭಾಗ ಸ್ವತಂತ್ರವಾಗಿ ಕೆಲಸ ಮಾಡುತ್ತದೆ. ಯಾವುದೇ ಸರ್ಕಾರಿ ಅಧಿಕಾರಿಗಳ ವಿರುದ್ಧ ಲೋಕಾಯುಕ್ತಕ್ಕೆ ದೂರು ನೀಡಿದರೆ ಲೋಕಾಯುಕ್ತರು ಆ ದೂರಿನ ತನಿಖೆಯನ್ನು ತನಿಖಾ ವಿಭಾಗಕ್ಕೆ ಒಪ್ಪಿಸುತ್ತಾರೆ. ಭ್ರಷ್ಟಾಚಾರ ನಿಯಂತ್ರಣ ಕಾಯ್ದೆ ಪ್ರಕಾರ ತನಿಖೆ ನಡೆಸಿ ತಪ್ಪಿತಸ್ಥರ ವಿರುದ್ಧ ಕ್ರಮ ಕೈಗೊಳ್ಳಲಾಗುತ್ತದೆ.

ಯಾವುದೇ ಸರ್ಕಾರಿ ನೌಕರ ಲಂಚ ಪಡೆಯುತ್ತಾನೆ ಎಂದು ನಿರ್ದಿಷ್ಟ ಪ್ರಕರಣದಲ್ಲಿ ನಾಗರಿಕನೊಬ್ಬ ದೂರು ನೀಡಿದರೆ, ದೂರು ನೀಡಿದವರ ಸಹಾಯದೊಂದಿಗೆ ಆರೋಪಿಯನ್ನು ಸಾಕ್ಷ್ಯಾಧಾರಗಳಿಂದ ಹಿಡಿಯುವುದಕ್ಕೆ 'ಟ್ರಾಪ್' ಎನ್ನುತ್ತಾರೆ.

ಯಾವುದೇ ನೌಕರ ಆದಾಯಕ್ಕಿಂತ ಹೆಚ್ಚು ಆಸ್ತಿ ಹೊಂದಿದ್ದಾನೆ ಎಂಬ ದೂರು ಬಂದರೆ ಆತನ ವಿರುದ್ಧ ತನಿಖೆ ನಡೆಸಿ ಸಾಕಷ್ಟು ಮಾಹಿತಿ ಲಭ್ಯವಾದ ಮೇಲೆ ಮುಖ್ಯ ಕಛೇರಿಯಿಂದ ಅನುಮತಿ ಪಡೆದು ನೌಕರನ ಕಚೇರಿ ಮತ್ತು ನಿವಾಸದ ಮೇಲೆ ದಾಳಿ ನಡೆಸಲಾಗುತ್ತದೆ. ಈ ಸಂದರ್ಭದಲ್ಲಿ ಆರೋಪಿಗೆ ತನ್ನ ಆದಾಯದ ಮೂಲ ಮತ್ತು ವೆಚ್ಚದ ಬಗ್ಗೆ ಹೇಳಿಕೆ ನೀಡಲು ಅವಕಾಶವಿರುತ್ತದೆ. ಆತನ ಹೇಳಿಕೆ ಮತ್ತು ತನಿಖಾಧಿಕಾರಿಗಳು ಸಂಗ್ರಹಿಸಿದ ಮಾಹಿತಿಯನ್ನು ತುಲನೆ ಮಾಡಿದಾಗ ನೌಕರನ ಆಸ್ತಿ ಶೇ. ೧೦ಕ್ಕಿಂತ ಹೆಚ್ಚಾಗಿದ್ದರೆ ಆತನನ್ನು ಬಂಧಿಸಿ ಆತನನ್ನು ಅಮಾನತಿನಲ್ಲಿಡಲು ಶಿಫಾರಸ್ಸು

ಮಾಡಲಾಗುತ್ತದೆ. ಇದಕ್ಕೆ ಕಾಯ್ದೆ ಭಾಷೆಯಲ್ಲಿ "ರೈಡ್" ಎಂದು ಹೆಸರು.

ಟ್ರಾಪ್ ಮತ್ತು ರೈಡ್‌ನಲ್ಲಿ ಆರೋಪ ದೃಢಪಟ್ಟರೆ ಆರೋಪಿಗೆ ಕನಿಷ್ಠ ಮೂರು ವರ್ಷದ ಶಿಕ್ಷೆಯಾಗುತ್ತದೆ. ಇದಕ್ಕೆ ನಿರ್ದಿಷ್ಟ ವಿಧಿವಿಧಾನಗಳನ್ನು ಕಾಯ್ದೆಯಲ್ಲಿ ಸೂಚಿಸಲಾಗಿದೆ.

ಸರ್ಕಾರಿ ಅಧಿಕಾರಿಯೊಬ್ಬ ಆದಾಯಕ್ಕಿಂತ ಹೆಚ್ಚಿಗೆ ಆಸ್ತಿ ಹೊಂದಿದ್ದಾನೆ ಎಂದಾಗ ಆತನ ವಿರುದ್ಧ ದೂರು ಇರಲೇಬೇಕು ಎಂದೇನೂ ಇಲ್ಲ. ಸ್ವತಂತ್ರವಾಗಿಯೇ ಲೋಕಾಯುಕ್ತ ಆತನ ವಿರುದ್ಧ ತನಿಖೆ ನಡೆಸಿ ಕ್ರಮಕೈಗೊಳ್ಳಬಹುದಾಗಿದೆ.

ಕೇವಲ ಅಧಿಕಾರಿಯ ವಿರುದ್ಧ ಮಾತ್ರವಲ್ಲದೆ ಇಡೀ ಕಚೇರಿಯ ಮೇಲೂ ಲೋಕಾಯುಕ್ತ ದಾಳಿ ನಡೆಸಬಹುದು. ಕಳೆದ ವರ್ಷ ಬೆಂಗಳೂರಿನಲ್ಲಿ ಸಬ್‌ರಿಜಿಸ್ಟ್ರಾರ್ ಕಚೇರಿಯ ಮೇಲೆ ದಾಳಿ ನಡೆಸಿದಾಗ ಕಚೇರಿಯ ಕಿಟಕಿಗಳಿಂದ ಹಣವನ್ನು ಹೊರಕ್ಕೆ ಎಸೆದ ಉದಾಹರಣೆಯಿದೆ.

ವಾಹನ ಚೆಕ್‌ಪೋಸ್ಟ್, ವಾಣಿಜ್ಯ ಚೆಕ್‌ಪೋಸ್ಟ್‌ಗಳ ಮೇಲೆಯೂ ಲೋಕಾಯುಕ್ತ ಪೊಲೀಸರು ದಾಳಿ ನಡೆಸಿ ಅಕ್ರಮಗಳನ್ನು ಬಯಲಿಗೆಳೆದ ಉದಾಹರಣೆಗಳಿವೆ.

ಎಲ್ಲ ಸರ್ಕಾರಿ ಕಚೇರಿಗಳಲ್ಲಿಯೂ ಲಂಚ ಸರ್ವೇಸಾಮಾನ್ಯವಾಗಿದೆ. ಆದರೆ ನಮಗೆ ಬಂದಿರುವ ತೊಂದರೆ ಎಂದರೆ ನಾಗರಿಕರಿಂದ ದೂರುಬರದೇ ಇರುವುದು ಮತ್ತು ನ್ಯಾಯಾಲಯ ಒಪ್ಪಿಕೊಳ್ಳುವಂತಹ ಸಾಕ್ಷ್ಯ ಕ್ರೋಢೀಕರಿಸುವುದು ಎಂದು ಲೋಕಾಯುಕ್ತ ತನಿಖಾ ವಿಭಾಗದ ಮಹಾ ನಿರ್ದೇಶಕ ಕೆ.ಯು.ಶೆಟ್ಟಿ ಹೇಳುತ್ತಾರೆ.

ಅವರ ಪ್ರಕಾರ ಈಗೀಗ ನಾಗರಿಕರಲ್ಲೂ ಜಾಗೃತಿ ಮೂಡಿದೆ. ಲಂಚ ಕೇಳಿದ ಅಧಿಕಾರಿಗಳಿಗೆ ಬುದ್ಧಿ ಕಲಿಸಬೇಕೆಂಬ ಭಾವನೆ ಮೂಡಿದೆ. ಹಾಗಾಗಿ ಅವರು ಈಗ ಲೋಕಾಯುಕ್ತದ ನೆರವು ಪಡೆಯುತ್ತಿದ್ದಾರೆ. ಆದರೆ ಈ ಪ್ರಮಾಣ ಹೆಚ್ಚಬೇಕು ಎಂದೂ ಅವರು ಹೇಳುತ್ತಾರೆ.

ಲಂಚಗುಳಿತನ ತಡೆಗಟ್ಟುವ ಕಾನೂನು ನಮ್ಮಲ್ಲಿದೆ. ಅದನ್ನು ಬಳಸಿಕೊಳ್ಳುವ ನಿರ್ಧಾರವನ್ನು ಮಾತ್ರ ನಾಗರಿಕರು ಮಾಡಬೇಕಾಗಿದೆ.

## ಶಿಕ್ಷೆ ಏನು?

ಯಾವುದೇ ಸರ್ಕಾರಿ ನೌಕರ ಲಂಚ ಪಡೆದು ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದು ಆತನ ಅಪರಾದ ದೃಢವಾದರೆ ಆತನಿಗೆ ಯಾವ ಶಿಕ್ಷೆಕಾದಿದೆ?

ಈ ಬಗ್ಗೆ ಲೋಕಾಯುಕ್ತ ಕಾಯ್ದೆಯಲ್ಲಿ ನಿರ್ದಿಷ್ಟವಾಗಿ ಶಿಕ್ಷೆಯನ್ನು ಗುರುತಿಸಲಾಗಿದೆ.

ಯಾವುದೇ ಸರ್ಕಾರಿ ನೌಕರ ಕಾನೂನು ಬದ್ಧವಾಗಿ ಆತನಿಗೆ ದೊರಕಬೇಕಾದ ವೇತನ

# ಎಸ್.ಎಸ್.ರೋಣದ : ಸಾರ್ಥಕ ಸಾಧನೆ

ಧಾರವಾಡದ ಲೋಕಾಯುಕ್ತ ವಲಯದ ಡಿವೈಎಸ್‌ಪಿಯಾಗಿದ್ದ ಎಸ್.ಎಸ್.ರೋಣದ ಅವರು ಪ್ರಾಮಾಣಿಕ ಅಧಿಕಾರಿ. ಸರ್ಕಾರಿ ಕಚೇರಿಗಳಲ್ಲಿ ಲಂಚಗುಳಿತನವನ್ನು ಹೋಗಲಾಡಿಸಲು ತಮ್ಮ ಮಿತಿಯಲ್ಲಿಯೇ ಹೋರಾಡಿದವರು. ಲಂಚ ಪಡೆಯುವ ಹಲವಾರು ಸರ್ಕಾರಿ ನೌಕರರಿಗೆ ಪಾಠ ಕಲಿಸಿದವರು.

೧೯೯೪-೯೮ರಲ್ಲಿ ಧಾರವಾಡ ಮತ್ತು ಕಾರವಾರ ಜಿಲ್ಲೆ ಉಸ್ತುವಾರಿ ನೋಡಿಕೊಂಡ ರೋಣದ ಅವರು ತಾವು ಅಧಿಕಾರದಲ್ಲಿದ್ದ ಮುಕ್ಕಾಲು ವರ್ಷದ ಅವಧಿಯಲ್ಲಿ ೯೭ ಲಂಚದ ಪ್ರಕರಣಗಳನ್ನು ಬಯಲಿಗೆ ಎಳೆದದ್ದು ಸಾಧನೆ.

ಲೋಕೋಪಯೋಗಿ ಇಲಾಖೆ ಅಧಿಕಾರಿ ಮಾಳಿಗೇರ ಅವರ ನಿವಾಸದ ಮೇಲೆ ದಾಳಿ ಮಾಡಿ ಕೋಟ್ಯಾಂತರ ರೂ. ಆಸ್ತಿ ಪಾಸ್ತಿ ಪತ್ತೆ ಮಾಡಿದ್ದು ಹಾಗೂ ಹಾವೇರಿ ಜಿಲ್ಲಾ ಪರಿಷತ್ ಕಾರ್ಯನಿರ್ವಾಹಕ ಎಂಜನಿಯರ್ ಕೆ.ಎಲ್.ಆಂಜನರೆಡ್ಡಿ ಅವರ ಅಕ್ರಮ ಸಂಪತ್ತು ಬಯಲಿಗೆಳೆದದ್ದು ರೋಣದ ಅವರ ಕಾರ್ಯಕ್ಷಮತೆಗೆ ಸಾಕ್ಷಿ.

ಹಲವಾರು ಪ್ರಕರಣಗಳು ಬಯಲಿಗೆ ಬರುವಂತಾಗಲು ನಾಗರಿಕರನ್ನು ತಯಾರು ಮಾಡಿದ ರೋಣದ ಅವರು ತಮಗೆ ವಹಿಸಿದ ಕೆಲಸವನ್ನು ಸಮರ್ಥವಾಗಿ ನಿರ್ವಹಿಸುವವರು. ಈಗ ಅವರನ್ನು ಹುಬ್ಬಳ್ಳಿ ಕೆಇಬಿ ಜಾಗೃತ ದಳಕ್ಕೆ ಡಿವೈಎಸ್‌ಪಿಯನ್ನಾಗಿ ವರ್ಗಾವಣೆ ಮಾಡಲಾಗಿದೆ.

ಮೂಲತಃ ಧಾರವಾಡ ಜಿಲ್ಲೆಯ ರೋಣದವರಾದ ಇವರು ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಪದವಿ ವಿದ್ಯಾಭ್ಯಾಸ ಮುಗಿಸಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಅಪರಾಧಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ಹಿಡಿದ ಕೆಲಸವನ್ನು ಛಲದಿಂದ ಸಾಧಿಸುವ ಇಂತಹ ವ್ಯಕ್ತಿಗಳು ಎಲ್ಲಿದ್ದರೂ ಆ ಸ್ಥಾನಕ್ಕೊಂದು ಮರ್ಯಾದೆ ಬರುತ್ತದೆ.



ರಾಜಕೀಯ ಒತ್ತಡದಿಂದ ಎತ್ತಂಗಡಿ!

## ಲೋಕಾಯುಕ್ತ ಪೊಲೀಸರೇ ಲಂಚ ಕೇಳಿದರೆ?

ನಿಮಗೆ ಈ ಅನುಮಾನ ಬರುವುದು ಸಹಜ. ಯಾಕೆಂದರೆ ಲೋಕಾಯುಕ್ತ ಪೊಲೀಸರೂ ಸಹ ಸರ್ಕಾರಿ ನೌಕರರು. ಅವರಲ್ಲಿಯೂ ಲಂಚಗುಳಿತನ ಇರಬಹುದು. ಆದರೆ ಈ ಬಗ್ಗೆ ನೀವು ಚಿಂತಿಸುವ ಅಗತ್ಯವಿಲ್ಲ. ಲೋಕಾಯುಕ್ತದಲ್ಲಿ ಎರಡು ವಿಭಾಗಗಳಿರುತ್ತವೆ. ಒಂದು ತನಿಖಾ ವಿಭಾಗ, ಇನ್ನೊಂದು ನ್ಯಾಯಾಂಗ ವಿಭಾಗ. ನೀವು ಆಗ ನ್ಯಾಯಾಂಗ ವಿಭಾಗಕ್ಕೆ ದೂರು ನೀಡಬಹುದು. ಇಲ್ಲವೇ ಮೇಲಿನ ಅಧಿಕಾರಿಗಳಿಗೆ ದೂರು ನೀಡಬಹುದು.

ಮತ್ತು ಇತರ ಸೌಲಭ್ಯದ ಹೊರತಾಗಿ ಇತರ ಲಾಭ (ಲಂಚ) ಪಡೆದರೆ ಆತನಿಗೆ ಮೂರು ವರ್ಷ ಜೈಲು ಅಥವಾ ದಂಡ, ಅಥವಾ ಈ ಎರಡೂ (ಅಂದರೆ ಜೈಲು ಮತ್ತು ದಂಡ) ಈ ಅಪರಾಧಕ್ಕೆ ಜಾಮೀನು ಇಲ್ಲ.

ಸರ್ಕಾರ ನೌಕರರನ್ನು ಲಂಚದ ಮೂಲಕ ತನ್ನೆಡೆಗೆ ಒಲಿಸಿಕೊಳ್ಳುವ ವ್ಯಕ್ತಿಗೂ ಮೂರು ವರ್ಷದ ಶಿಕ್ಷೆ ಮತ್ತು ದಂಡ ಕಾದಿದೆ. ಈ ಶಿಕ್ಷೆಯನ್ನು ಮೊದಲ ದರ್ಜೆ ಮ್ಯಾಜಿಸ್ಟ್ರೇಟ್ ನ್ಯಾಯಾಲಯ ನೀಡುತ್ತದೆ.

ಸರ್ಕಾರಿ ನೌಕರನಿಗೆ ಶಿಫಾರಸು ಮಾಡಲು ನಾಗರಿಕರಿಂದ ಲಂಚ ಪಡೆದರೆ ಆತನಿಗೆ ಒಂದು ವರ್ಷ ಸಾದಾಶಿಕ್ಷೆ ಮತ್ತು ದಂಡ.

ಯಾವುದೇ ಸರ್ಕಾರಿ ನೌಕರ ಹಣದ ಬದಲಾಗಿ ಇತರ ಇನ್ನಾವುದೇ ಮೌಲ್ಯಭರಿತ ವಸ್ತುಗಳನ್ನು ಸ್ವೀಕರಿಸುವುದೂ ಅಪರಾಧ. ಅಂತಹ ಅಪರಾಧಕ್ಕೆ ಮೂರು ವರ್ಷ ಜೈಲು ಶಿಕ್ಷೆ ಮತ್ತು ದಂಡ.

ಕಾನೂನನ್ನು ನಿರ್ಲಕ್ಷಿಸುವ ನೌಕರನಿಗೂ ಒಂದು ವರ್ಷ ಸಾದಾ ಶಿಕ್ಷೆ ಮತ್ತು ದಂಡ.

ನಾಗರಿಕರಿಗೆ ಅನಾನುಕೂಲವಾಗುವಂತೆ ಅಕ್ರಮ ದಾಖಲೆ ಸೃಷ್ಟಿ ಮಾಡಿದ ನೌಕರನಿಗೆ ಮೂರು ವರ್ಷ ಸಜೆ.

ನೌಕರ ಅಕ್ರಮ ವ್ಯಾಪಾರದಲ್ಲಿ ತೊಡಗಿದರೆ ಒಂದು ವರ್ಷ ಸಾದಾ ಜೈಲು.

ಅಕ್ರಮ ಆಸ್ತಿ ಖರೀದಿಸಿದರೆ ಎರಡು ವರ್ಷ ಜೈಲು ಮತ್ತು ದಂಡ.

ಸರ್ಕಾರಿ ನೌಕರ ಪಕ್ಷಪಾತದ ಧೋರಣೆ ಅನುಸರಿಸಿದರೆ ಆತನಿಗೆ ಎರಡು ವರ್ಷ ಜೈಲು ಮತ್ತು ದಂಡ ಅಥವಾ ಈ ಎರಡೂ ಶಿಕ್ಷೆ ಕಾದಿದೆ. ಈ ಅಪರಾಧಕ್ಕೆ ಜಾಮೀನು ಸಹ ಲಭ್ಯವಾಗುವುದಿಲ್ಲ.

### ನಾಗರಿಕರು ಏನು ಮಾಡಬಹುದು?

ಸರ್ಕಾರಿ ನೌಕರಿ ಇರುವುದೇ ಲಂಚ ಪಡೆಯಲು ಎಂಬ ಭಾವನೆ ಬೆಳೆದಿರುವಾಗ ನಾಗರಿಕರು ಏನು ಮಾಡಬಹುದು?

ಪ್ರತಿ ಜಿಲ್ಲೆಯಲ್ಲಿಯೂ ಲೋಕಾಯುಕ್ತ ಪೊಲೀಸರಿದ್ದಾರೆ. ಅವರಿಗೆ ದೂರು ಕೊಡಿ. ಈ ಬಗ್ಗೆ ಯಾವುದೇ ಭಯ. ಹಿಂಜರಿಕೆ ಬೇಡ. ಯಾಕೆಂದರೆ ನೀವು ಕೊಟ್ಟ ದೂರಿನ ಅನ್ವಯ ಪೊಲೀಸರು ಪ್ರಥಮ ಮಾಹಿತಿ ವರದಿ (ಎಫ್‌ಐಆರ್) ಸಿದ್ಧಪಡಿಸುತ್ತಾರೆ. ಅದರ ಮೂಲಕ ತಮ್ಮ ಕಾರ್ಯಾಚರಣೆ ಆರಂಭಿಸುತ್ತಾರೆ. ಅಲ್ಲದೆ ಆರೋಪಿಯನ್ನು ಬಲೆಗೆ ಕೆಡಹುವುದು ಹೇಗೆಂದು ನಿಮಗೆ ತರಬೇತಿ ನೀಡುತ್ತಾರೆ.

ಯಾವುದೇ ಸರ್ಕಾರಿ ನೌಕರ ನಿಮ್ಮಿಂದ ಲಂಚ ಪಡೆಯಲು ಬಯಸುತ್ತಾನೆ ಎಂದಾದರೆ ಆತನ ವಿರುದ್ಧ ನೀವು ಲೋಕಾಯಕ್ತ ಪೊಲೀಸರಿಗೆ ನೀಡುವ ದೂರು ಪ್ರಥಮ ಮಾಹಿತಿ ವರದಿಯಾಗುತ್ತದೆ. ಇಬ್ಬರು ಸರ್ಕಾರಿ ನೌಕರ ಸಾಕ್ಷಿಗಳ ಎದುರು ಈ ವರದಿ ಸಿದ್ಧಪಡಿಸಲಾಗುತ್ತದೆ. ಅಲ್ಲದೆ ಪೊಲೀಸರು ನಿಮಗೆ ತರಬೇತಿ ನೀಡುವಾಗಲೂ ಸಾಕ್ಷಿಗಳು ಎದುರಿನಲ್ಲಿಯೇ ಇರುತ್ತಾರೆ.

ಲಂಚ ಕೇಳಿದ ನೌಕರನಿಗೆ ನೀಡಲು ರಾಸಾಯನಿಕ ಲೇಪಿತ ಹಣವನ್ನು ಪೊಲೀಸರು ನಿಮಗೆ ನೀಡುತ್ತಾರೆ. ಅದೇ ಹಣವನ್ನು ನೀವು ಪೊಲೀಸರು ಸೂಚಿಸಿದ ವೇಳೆಯಲ್ಲಿ ನೌಕರನಿಗೆ ನೀಡಿದರಾಯಿತು. ನಿಮ್ಮೊಂದಿಗೆ ಒಬ್ಬ ಸಾಕ್ಷಿಯೂ ಬಂದಿರುತ್ತಾನೆ. ನೀವು ನೌಕರನಿಗೆ ಹಣ ನೀಡಿದಾಗ ಆತ ಕಾರ್ಯಾಚರಣೆಗೆ ಸಿದ್ಧವಾಗಿ ಬಂದ ಪೊಲೀಸರಿಗೆ ಸಂಜ್ಞೆ ನೀಡುತ್ತಾನೆ. ತಕ್ಷಣ ಬಂದು ಅವರು ನೌಕರನನ್ನು ಬಂಧಿಸುತ್ತಾರೆ. ಹಣವನ್ನು ವಶಪಡಿಸಿಕೊಳ್ಳುತ್ತಾರೆ. ಅಲ್ಲದೆ ಹಣವನ್ನು ಇಟ್ಟ ಸ್ಥಳವನ್ನು ವಶಪಡಿಸಿಕೊಳ್ಳುತ್ತಾರೆ. ಮತ್ತೆ ಅಲ್ಲಿ ಇಬ್ಬರು ಸರ್ಕಾರಿ ನೌಕರರ ಎದುರು






ಪಂಚನಾಮೆ ಮಾಡುತ್ತಾರೆ.

ಈ ವೇಳೆಯಲ್ಲಿ ಆರೋಪಿ ಸರ್ಕಾರಿ ನೌಕರನಿಗೆ ಹೇಳಿಕೆ ನೀಡಲು ಅವಕಾಶವಿದೆ. ಆದರೆ ಆತ ಏನೇ ಹೇಳಿದರೂ ರಾಸಾಯನಿಕ ಲೇಪಿತ ಹಣ ಮಾತ್ರ ನಿಜವನ್ನೇ ಹೇಳುವುದರಿಂದ ಆತನ ಆರೋಪ ದೃಢಪಡುತ್ತದೆ. ಆತನನ್ನು ಬಂಧಿಸಿ ಅವನ ಅಮಾನತ್ತಿಗೆ ಮೇಲಿನ ಅಧಿಕಾರಿಗೆ ಶಿಫಾರಸು ಮಾಡಲಾಗುತ್ತದೆ.

ಈ ಕಾರ್ಯಾಚರಣೆಗೆ ಲೋಕಾಯುಕ್ತ ಕಾಯ್ದೆ ಭಾಷೆಯಲ್ಲಿ ''ಟ್ರಾಪ್'' ಎಂದು ಕರೆಯುತ್ತಾರೆ.

ಇದು ನಿಮ್ಮನ್ನು ಲಂಚ ಕೇಳಿದ ವ್ಯಕ್ತಿಯ ವಿರುದ್ಧ ನೀವು ಮಾಡಬಹುದಾದ ಕರ್ತವ್ಯ.

ಇನ್ನು ಯಾವುದೇ ಸರ್ಕಾರಿ ನೌಕರ ಆದಾಯಕ್ಕಿಂತ ಹೆಚ್ಚು ಆಸ್ತಿ ಹೊಂದಿದ್ದಾನೆ ಎಂಬ ಅನುಮಾನ ನಿಮಗೆ ಬಂದರೆ ಆ ವ್ಯಕ್ತಿಯ ವಿರುದ್ಧವೂ ನೀವು ದೂರು ನೀಡಬಹುದು.

ಈ ರೀತಿ ನೀವು ದೂರು ನೀಡಿದಾಗ ಲೋಕಾಯುಕ್ತ ಪೊಲೀಸರು ಆ ಅಧಿಕಾರಿ ವಿರುದ್ಧ ತನಿಖೆ ಆರಂಭಿಸುತ್ತಾರೆ. ತನಿಖೆಯಲ್ಲಿ ನೀವು ದೂರಿನಲ್ಲಿ ತಿಳಿಸಿದ ವಿಷಯ ಸತ್ಯ ಎನ್ನುವುದು ದೃಢವಾದರೆ ಆ ನೌಕರನ ನಿವಾಸ ಮತ್ತು ಕಚೇರಿ ಮೇಲೆ ದಾಳಿ ಮಾಡುತ್ತಾರೆ. ಈ ರೀತಿ ದಾಳಿಗೆ ಲೋಕಾಯುಕ್ತ ಮುಖ್ಯ ಕಚೇರಿಯ ಅನುಮತಿ ಬೇಕಾಗುತ್ತದೆ. ಅಲ್ಲದೆ 'ಸರ್ಚ್‌ವಾರಂಟ್' ಪಡೆಯಬೇಕಾಗುತ್ತದೆ.

ದಾಳಿ ಮಾಡಿದ ಪೊಲೀಸರು ಆರೋಪಿಯ ಮನೆಯನ್ನೆಲ್ಲಾ ಶೋಧಿಸುತ್ತಾರೆ. ಬ್ಯಾಂಕ್ ಲಾಕರ್, ಚಿನ್ನ, ಬೆಳ್ಳಿ, ಮನೆ, ತೋಟ ಎಲ್ಲದರ ಮೌಲ್ಯವನ್ನು ಲೆಕ್ಕ ಹಾಕುತ್ತಾರೆ. ನಂತರ ಅಧಿಕಾರಿಗೆ ಹೇಳಿಕೆ ನೀಡಲು ಅವಕಾಶ ನೀಡಲಾಗುತ್ತದೆ.

ಆರೋಪಿ ನೀಡಿದ ಹೇಳಿಕೆಗೂ ಮತ್ತು ಪೊಲೀಸರು ಸಂಗ್ರಹಿಸಿದ ಆಸ್ತಿ ಮೌಲ್ಯ ಶೇ. ೧೦ಕ್ಕಿಂತ ಜಾಸ್ತಿಯಾಗಿದ್ದರೆ ಆಗ ಆ ಅಧಿಕಾರಿಯನ್ನು ಬಂಧಿಸಲಾಗುತ್ತದೆ. ಅಲ್ಲದೆ ಆತನ ಅಮಾನತ್ತಿಗೆ ಶಿಫಾರಸು ಮಾಡಲಾಗುತ್ತದೆ.

ಈ ಕಾರ್ಯಾಚರಣೆಗೆ ಕಾಯ್ದೆ ಭಾಷೆಯಲ್ಲಿ 'ರೈಡ್' (ದಾಳಿ) ಎನ್ನುತ್ತಾರೆ. ಈ ಕಾರ್ಯಾಚರಣೆಯಲ್ಲಿಯೂ ನೀವು ನೀಡಿದ ದೂರಿನ ಅನ್ವಯ ಅಧಿಕಾರಿಯ ವಿರುದ್ಧ ಮೊಕದ್ದಮೆ ದಾಖಲಿಸಿಕೊಳ್ಳುತ್ತಾರೆ.

ಲೋಕಾಯುಕ್ತ ಮತ್ತು ಉಪಲೋಕಾಯುಕ್ತರು ನ್ಯಾಯಾಧೀಶರೇ ಆಗಿರುತ್ತಾರೆ. ನೀವು ನೀಡಿದ ದೂರಿನ ಬಗ್ಗೆ ತನಿಖೆ ನಡೆಸಲು ಅವರು ತನಿಖಾ ವಿಭಾಗಕ್ಕೆ ಶಿಫಾರಸು ಮಾಡುತ್ತಾರೆ.

ನೀವು ಕೇವಲ ಸರ್ಕಾರಿ ನೌಕರರು ಮತ್ತು ಅಧಿಕಾರಿಗಳ ವಿರುದ್ಧ ಮಾತ್ರ ದೂರು ನೀಡಬಹುದು ಎಂದು ಭಾವಿಸಿಕೊಳ್ಳಬೇಕಿಲ್ಲ. ಲಂಚ ಕೇಳುವ ಮಂತ್ರಿಗಳ ವಿರುದ್ಧವೂ ದೂರು ನೀಡಬಹುದು. ಮುಖ್ಯಮಂತ್ರಿ ಲಂಚ ಕೇಳಿದರೆ ಅವರ ವಿರುದ್ಧವೂ ದೂರು ನೀಡಬಹುದು. ಮಂತ್ರಿ ಅಥವಾ ಮುಖ್ಯಮಂತ್ರಿಗಳ ಪರವಾಗಿ ಹಣ ಕೇಳುವವರ ವಿರುದ್ಧವೂ ದೂರು ನೀಡಬಹುದು. ಯಾಕೆಂದರೆ ಲೋಕಾಯುಕ್ತ ಕಾನೂನಿನ ಅಡಿಯಲ್ಲಿ ಮುಖ್ಯಮಂತ್ರಿ ಮತ್ತು ಮಂತ್ರಿಗಳು, ಶಾಸಕರು ಸಹ ಬರುತ್ತಾರೆ.

ಲಂಚವನ್ನು ತಡೆಯಲು ಕಾನೂನು ಇದೆ. ಶಿಕ್ಷೆಯನ್ನೂ ನಿಗದಿಗೊಳಿಸಲಾಗಿದೆ. ನೀವು ದೂರು ನೀಡಬೇಕಷ್ಟೆ. ಯಾಕೆಂದರೆ. ಲೋಕಾಯುಕ್ತ ಸ್ವಯಂಸ್ಫೂರ್ತಿಯಿಂದ ತಾನೇ ತಾನಾಗಿ ಕೆಲಸ ಮಾಡುವುದಿಲ್ಲ. ದೂರು ಬಂದರೆ ತನಿಖೆ ನಡೆಸುತ್ತದೆ ಅಷ್ಟೆ. ಹಾಗಾಗಿ ನೀವು ನಿಮ್ಮನ್ನು ಶೋಷಿಸುವ ಅಧಿಕಾರಿಗಳ ವಿರುದ್ಧ ದೂರು ನೀಡಿ.

●

# ನಿಮ್ಮ ಮಗುವಿನ ಆರೋಗ್ಯ ನಿಮಗೆಷ್ಟು ಗೊತ್ತು?

**ನಿಮ್ಮ ಮಕ್ಕಳ ಬಗ್ಗೆ ನಿಮಗೆ ಎಲ್ಲಿಲ್ಲದ ಅಕ್ಕರೆ. ಅವರಿಗೆ ಅಂದ ಚೆಂದದ ಉಡಿಗೆ ತೊಡಿಸಿ ಆನಂದಿಸುತ್ತೀರಿ. ಬಗೆ ಬಗೆಯ ಆಟಿಕೆಗಳನ್ನು ಕೊಡಿಸಿ ಖುಷಿಪಡುತ್ತೀರಿ. ಆದರೆ, ಅವರ ಅಮೂಲ್ಯ ಆರೋಗ್ಯದ ಬಗ್ಗೆ ನಿಮಗೆಷ್ಟು ತಿಳಿದಿದೆ? ಈಗ ನೀವು ತೋರುತ್ತಿರುವ ಕಾಳಜಿ ಸಾಕೆ? ಈ ಬಗ್ಗೆ ಪ್ರತಿಯೊಬ್ಬ ತಂದೆ ತಾಯಂದಿರು ತಿಳಿದುಕೊಳ್ಳಲೇಬೇಕಾದ ಉಪಯುಕ್ತ ವೈದ್ಯಕೀಯ ಮಾಹಿತಿ ಇಲ್ಲಿದೆ.**

○ ಡಾ. ವಸುಂಧರಾ ಭೂಪತಿ ಚಿತ್ರಗಳು : ಎಂ.ವಿಶ್ವನಾಥ್

ಮಕ್ಕಳು ಬೆಳೆಯುವ ಹಂತದಲ್ಲಿರುವವರು. ಅವರು ಚೇತನದ ಚಿಲುಮೆಗಳಾಗಿರುತ್ತಾರೆ. ಅವರು ಆಡುತ್ತಾರೆ, ಓಡುತ್ತಾರೆ, ಅಳುತ್ತಾರೆ, ಜಗಳವಾಡುತ್ತಾರೆ. ಅಲ್ಲದೇ ಮಲಗಿರುವಾಗಲೂ ಹೃದಯ, ಶ್ವಾಸಕೋಶ, ಪಚನಾಂಗಗಳು ತಮ್ಮ ಕಾರ್ಯ ನಿರ್ವಹಿಸುತ್ತಲೇ ಇರುತ್ತವೆ ಇಷ್ಟಲ್ಲದೇ ದೇಹದಲ್ಲಿ ಕ್ಷಣಕ್ಷಣವೂ ಸವೆಯುತ್ತಿರುವ ಅಂಗಾಂಶಗಳ ದುರಸ್ತಿ ಕಾರ್ಯ ಸತತವಾಗಿ ನಡೆಯುತ್ತಿರುತ್ತದೆ. ಈ ಎಲ್ಲಾ ಕಾರ್ಯಗಳಿಗೂ ಆಹಾರದ ಪೋಷಕಾಂಶಗಳು ಶಕ್ತಿ ಒದಗಿಸುತ್ತವೆ. ಪೋಷಕಾಂಶಗಳಲ್ಲಿ ಮುಖ್ಯವಾದವು ಸಸಾರಜನಕ, ಪಿಷ್ಟ ಮತ್ತು ಕೊಬ್ಬು. ಈ ಅಂಶಗಳು ರಕ್ತಗತವಾಗಿ ಮಿಶ್ರಿತವಾಗಬೇಕಾದರೆ ಅವಕ್ಕೆ ವಿಟಮಿನ್ ಹಾಗೂ ಖನಿಜಗಳ ಸಹಾಯ ಬೇಕೇ ಬೇಕು. ಇವುಗಳಲ್ಲಿ ಯಾವುದಾದರೊಂದರ ನ್ಯೂನತೆಯುಂಟಾದರೂ ಮಕ್ಕಳ ಬೆಳವಣಿಗೆ

# ಮಕ್ಕಳ ಕಾಯಿಲೆಗಳಿಗೆ ಮನೆ ಔಷಧಿ

***ನೆಗಡಿಗೆ*** ಒಂದು ಚಮಚ ಈರುಳ್ಳಿಯ ರಸದಲ್ಲಿ ಅರ್ಧ ಚಮಚ ಜೇನುತುಪ್ಪ ಸೇರಿಸಿ ಬೆಳಿಗ್ಗೆ ಖಾಲಿ ಹೊಟ್ಟೆಯಲ್ಲಿ ಕೊಡಬೇಕು. ಅಜವಾನ (ಜಮ)ದ ಪುಡಿ ಒಂದು ಚಿಟಿಕೆಯಷ್ಟು ತೆಗೆದುಕೊಂಡು ಅದಕ್ಕೆ ಜೇನುಸೇರಿಸಿ ತಿನ್ನಿಸಬೇಕು.

***ಕೆಮ್ಮು ಬಂದರೆ*** ನಾಲ್ಕು ಚಿಟಿಕೆಯಷ್ಟು ಕಹಿಜೀರಿಗೆ ಪುಡಿಯನ್ನು ಜೇನುತುಪ್ಪದಲ್ಲಿ ನೆಕ್ಕಿಸಬೇಕು. ವೀಳ್ಯದೆಲೆಯ ರಸದಲ್ಲಿ ಕಸ್ತೂರಿ ಮಾತ್ರೆ ಹಾಗೂ ಜೇನುತುಪ್ಪ ಸೇರಿಸಿ ನೆಕ್ಕಿಸಬೇಕು. ಏಲಕ್ಕಿ, ಲವಂಗ, ಚಕ್ಕೆಗಳ ಸಮಪ್ರಮಾಣದ ನುಣ್ಣಗಿನ ಪುಡಿಯನ್ನು ಒಂದು ಚಿಟಿಕೆಯಷ್ಟು ಜೇನಿನಲ್ಲಿ ದಿನಕ್ಕೆರಡು ಬಾರಿ ಕೊಡಬೇಕು.

೧೦೦ ಮಿಲಿ ಆಕಳಹಾಲು, ೧೦೦ ಮಿಲಿ ನೀರು ಸೇರಿಸಿ ಅದಕ್ಕೆ ತುಂಬೆ ಹೂವು, ಈರುಳ್ಳಿ ಹಾಕಿ ಕಾಯಿಸಿ ನೀರಿನಂಶವೆಲ್ಲ ಹೋದ ಮೇಲೆ ಹಾಲನ್ನು ಸೋಸಿ ಸಕ್ಕರೆ ಬೆರೆಸಿ ಕುಡಿಯಲು ಕೊಡಬೇಕು. ಕಾಲು ಲೋಟ ಅಕ್ಕಿ ತೊಳೆದ ನೀರಿನಲ್ಲಿ ೫ ಗ್ರಾಂ ಕೊತ್ತಂಬರಿಯನ್ನು ಅರೆದು ಅದಕ್ಕೆ ಸ್ವಲ್ಪ ಸಕ್ಕರೆ ಸೇರಿಸಿ ಎರಡು ಹೊತ್ತು ಕುಡಿಯಲು ಕೊಡಬೇಕು.



***ಬಿಕ್ಕಳಿಕೆಗೆ*** ಎರಡು ಚಿಟಿಕೆ ಕೊಬ್ಬರಿತುರಿ (ಒಣ)ಯನ್ನು ಕಲ್ಲುಸಕ್ಕರೆಯೊಡನೆ ಸೇರಿಸಿ ತಿನ್ನಿಸಬೇಕು. ೨ ಗ್ರಾಂ ಕಟುಕರೋಹಿಣಿಯನ್ನು ಜೇನುತುಪ್ಪದಲ್ಲಿ ತೇಯ್ದು ಮೇಲಿಂದ ಮೇಲೆ ನೆಕ್ಕಿಸುವದರಿಂದ ಬಿಕ್ಕಳಿಕೆ ನಿಲ್ಲುತ್ತದೆ. ಸ್ವಲ್ಪ ಹಿಪ್ಪಲಿಯನ್ನು ಜೇನಿನಲ್ಲಿ ತೇದು ಕೊಡಬೇಕು.

**ವಾಂತಿಯಾಗುತ್ತಿದ್ದರೆ** ಅರ್ಧ ಚಮಚ ಬಡೇಸೋಪಿನ ನುಣ್ಣಗಿನ ಪುಡಿಯನ್ನು ಬಿಸಿನೀರಿನಲ್ಲಿ ಹಿಸುಕಿ ಇಟ್ಟು ಅದರ ತಿಳಿನೀರನ್ನು ಗಂಟೆಗೊಮ್ಮೆ ಒಂದು ಚಮಚದಷ್ಟು ಕುಡಿಸುತ್ತಿರಬೇಕು.

**ಭೇದಿಯಾಗುತ್ತಿದ್ದರೆ** ಜಾಯಿಕಾಯಿಯನ್ನು ಜೇನಿನಲ್ಲಿ ಇಲ್ಲವೇ ಎದೆಹಾಲಿನಲ್ಲಿ ತೇಯ್ದು ನೆಕ್ಕಿಸಬೇಕು. ದಾಳಿಂಬೆಯ ಮೊಗ್ಗು ೨, ಬೂರಗದ ಎಲೆ ೨, ತುಪ್ಪದಲ್ಲಿ ಹುರಿದ ಬಡೇಸೋಪು ೨ ಗ್ರಾಂ, ಮರದರಿಶಿಣ ೨ ಗ್ರಾಂ ಇವುಗಳನ್ನೆಲ್ಲ ಸೇರಿಸಿ ಪುಡಿ ಮಾಡಿಟ್ಟುಕೊಂಡು ಎರಡು ಚಿಟಿಕೆಯಷ್ಟನ್ನು ಪ್ರತಿದಿನ ಎದೆಹಾಲಿನಲ್ಲಿ ದಿನಕ್ಕೆರಡು ಸಲ ನೆಕ್ಕಿಸಬೇಕು. ಹುರಿದ ಬಡೇಸೋಪಿನ ನುಣ್ಣಗಿನ ಪುಡಿಯನ್ನು ಎರಡು ಚಿಟಿಕೆಯಷ್ಟು ಪ್ರತಿ ನಾಲ್ಕು ಗಂಟೆಗಳಿಗೊಮ್ಮೆ ಬಿಸಿನೀರಿನಲ್ಲಿ ಕೊಡಬೇಕು.

**ಜ್ವರಕ್ಕೆ** ೪ ಚಿಟಿಕೆ ಕಹಿ ಜೀರಿಗೆಯನ್ನು ಅರ್ಧ ಲೋಟ ನೀರಿಗೆ ಹಾಕಿ ಅದನ್ನು ಕಾಯಿಸಿ ಕಾಲು ಲೋಟಕ್ಕಿಳಿಸಿ ಸೋಸಿ ಅದಕ್ಕೆ ಕಲ್ಲುಸಕ್ಕರೆ ಸೇರಿಸಿ ದಿನಕ್ಕೆ ಎರಡು ಸಲ ಕೊಡಬೇಕು.

ಹಾಗೂ ಚಟುವಟಿಕೆಗಳು ಕುಂಠಿತಗೊಳ್ಳುತ್ತವೆ.

ಮಕ್ಕಳು ಆರೋಗ್ಯವಂತರಾಗಿ ಬೆಳೆಯ ಬೇಕೆಂದರೆ ಕಾಯಿಲೆಗಳು ಉದ್ಭವಿಸದಂತೆ ಎಚ್ಚರವಹಿಸಬೇಕು. ಧಾನ್ಯ, ತರಕಾರಿ, ಹಾಲು, ಹಣ್ಣು ಮುಂತಾದವುಗಳನ್ನ ಸರಿಯಾದ ರೀತಿಯಲ್ಲಿ ಬಳಸುವದರಿಂದ ನ್ಯೂನತೆಯ ಕಾಯಿಲೆಗಳು (defficiency) ಬಾರದಂತೆ ತಡೆಯಬಹುದು. ಆಹಾರದಲ್ಲಿ ಸಸಾರಜನಕ ಹಾಗೂ ವಿಟಮಿನ್‌ಗಳ ಅಭಾವವಾಗದಂತೆ ನೋಡಿಕೊಳ್ಳಬೇಕು.

ಸಸಾರಜನಕ ಎರಡು ಮೂಲಗಳಿಂದ ದೊರೆಯುತ್ತದೆ. ಪ್ರಾಣಿಮೂಲ ಹಾಗೂ ಸಸ್ಯ ಮೂಲದಿಂದ ದೊರೆಯುತ್ತದೆ. ಮೊದಲ ನೆಯದು ಹಾಲು, ಮೊಟ್ಟೆ, ಮಾಂಸಗಳಿಂದ ಹಾಗೂ ಎರಡನೆಯದೆಂದರೆ ತರಕಾರಿ, ದ್ವಿದಳ ಧಾನ್ಯಗಳಲ್ಲಿ ಸಸಾರಜನಕ ದೊರೆಯುತ್ತದೆ. ಮೊದಲನೆಯದರಲ್ಲಿನ ಅಮೈನೋ ಆಮ್ಲಗಳು ದೇಹದ ಜೀವಕಣಗಳ ಅಮೈನೋ ಆಮ್ಲವನ್ನು ಹೋಲುತ್ತವೆ.

ಆರ್ಥಿಕವಾಗಿ ಹಿಂದುಳಿದಂತಹ ನಮ್ಮ ದೇಶದಲ್ಲಿ ಬಹಳಷ್ಟು ಮಕ್ಕಳು ಸಸಾರಜನಕದ ಅಭಾವದಿಂದಲೇ ಸಾಯುತ್ತಾರೆ. ಬಡತನ



ದಿಂದ ಬಳಲುವ ಮಕ್ಕಳು ಸರಿಯಾದ ಆಹಾರ ಸಿಗದೇ ಸಸಾರಜನಕದ ನ್ಯೂನತೆಯಿಂದ ಬಳಲು ವದು ಹೆಚ್ಚು. ಈ ನ್ಯೂನತೆಯಿಂದ ಬಳಲುವ ಮಕ್ಕಳು ಬಿಳಿಚಿಕೊಂಡು, ಊದಿದ ಮುಖ, ಕೈ ಕಾಲು ಸಣ್ಣಗಿದ್ದು ಹೊಟ್ಟೆ ಉಬ್ಬಿರುತ್ತದೆ ಯಲ್ಲದೇ ಕಣ್ಣುಗಳಲ್ಲಿ ಕಾಂತಿಯಿಲ್ಲದೇ, ಶಕ್ತಿಯಿಲ್ಲದೇ ಸದಾ ಮಲಗಿಕೊಂಡಿರುತ್ತದೆ. ಮಧ್ಯಮ ವರ್ಗದ ಮಕ್ಕಳಲ್ಲೂ ಸಸಾರಜನಕದ ನ್ಯೂನತೆ ಉಂಟಾಗಬಹುದು. ಮನೆಯಲ್ಲಿ ಎಲ್ಲ ಪದಾರ್ಥಗಳಿದ್ದರೂ ಮಕ್ಕಳು ಕರಿದ ತಿಂಡಿ, ಚಾಕೋಲೇಟ್ ಹೆಚ್ಚಾಗಿ ಸೇವಿಸಿ ಉಳಿದ ಆಹಾರ ಸಾಕಷ್ಟು ತೆಗೆದುಕೊಳ್ಳುವದಿಲ್ಲ.

ನ್ಯೂನತೆಯಿರುವ ಮಕ್ಕಳು ಆರೋಗ್ಯವಂತ ಮಕ್ಕಳಿಗಿಂತ ಕಡಿಮೆ ತೂಕ ಇರುತ್ತಾರೆ, ಬೇಗ ಆಯಾಸಗೊಳ್ಳುತ್ತಾರೆ. ಮಾತು ಮಾತಿಗೆ ಸಿಡುಕುತ್ತಾರೆ, ಶಾಲೆಯ ಪಾಠಗಳತ್ತ ಹೆಚ್ಚು ಗಮನ ಕೊಡುವುದಿಲ್ಲ. ರೋಗನಿರೋಧಕ ಶಕ್ತಿ

---

ಹುರಿದ ಕಟುಕರೋಹಿಣಿಯ ನುಣ್ಣಗಿನ ಪುಡಿ ಮಾಡಿ ೩ ಚಿಟಕೆಯಷ್ಟು ಎದೆಹಾಲಿನಲ್ಲಿ ಕಲೆಸಿ ದಿನಕ್ಕೆರಡು ಸಲ ನೆಕ್ಕಿಸಬೇಕು.

ಉತ್ತರಾಣಿಯ ಬೇರಿನ ತೊಗಟೆಯನ್ನು ಚೆನ್ನಾಗಿ ತೊಳೆದು ಅದರ ಸಮಪ್ರಮಾಣ ಮೆಣಸು ಸೇರಿಸಿ ಎದೆಹಾಲಿನಲ್ಲಿ ಅರೆದು ಮಾತ್ರೆ ಮಾಡಿಟ್ಟುಕೊಂಡು ಬೆಳಿಗ್ಗೆ, ರಾತ್ರಿ ಒಂದೊಂದು ಮಾತ್ರೆ ಕೊಡಬೇಕು.

ಆಡಸೋಗೆಬೇರು, ಪರ್ಪಾಷ್ಟಕ, ಲಾವಂಚ, ಬೇವಿನಸೊಪ್ಪು, ನೆಲಬೇರು ಇವುಗಳನ್ನೆಲ್ಲ ಕುಟ್ಟಿ ನುಣ್ಣಗಿನ ಪುಡಿ ಮಾಡಿ ಅರ್ಧ ಚಮಚ ಪುಡಿ ಹಾಕಿ ಕಷಾಯ ಮಾಡಿ ದಿನಕ್ಕೆರಡು ವೇಳೆ ಕುಡಿಸಬೇಕು.

***ಮಕ್ಕಳಿಗೆ ಸ್ನಾನದ ನಂತರ ಲೇಪನಕ್ಕೆ*** ಆರತಿ ಕರ್ಪೂರ, ಶ್ರೀಗಂಧ, ಕುಂಕುಮಕೇಸರಿಗಳನ್ನು ಸೇರಿಸಿ ನುಣ್ಣಗಿನ ಪುಡಿ ಮಾಡಿಟ್ಟುಕೊಂಡು ಸ್ನಾನದ ನಂತರ ಮೃದುವಾಗಿ ಲೇಪಿಸಿದರೆ ಮೈಯ ಕಾಂತಿಯು ಹೆಚ್ಚುತ್ತದೆ.

***ಮಕ್ಕಳ ಹೊಟ್ಟೆಶೂಲಿಗೆ*** ಕುಪ್ಪೆಸೊಪ್ಪು ಒಂದು ಚಿಟಕೆ, ಮೆಣಸು ಅರ್ಧ ಚಿಟಕೆ, ಬೆಳ್ಳುಳ್ಳಿ ಅರ್ಧ ಚಿಟಕೆಯಷ್ಟನ್ನು ನುಣ್ಣಗೆ ಅರೆದು ಮೂರು ಚಮಚ ಹಾಲಿನಲ್ಲಿ ಸೇರಿಸಿ ಕುಡಿಸಬೇಕು.

***ಹೊಟ್ಟೆಯಲ್ಲಿನ ಜಂತು ಹುಳುವಿಗೆ*** ೫ ಗ್ರಾಂ ಕಹಿಜೀರಿಗೆಯನ್ನು ಒಂದು ಲೋಟ ನೀರಿಗೆ ಹಾಕಿ ಕುದಿಸಿ ಅರ್ಧಲೋಟಕ್ಕಿಳಿಸಿ ಅದಕ್ಕೆ ಕಲ್ಲುಸಕ್ಕರೆ ಪುಡಿ ಅಥವಾ ಜೇನುಸೇರಿಸಿ ಕುಡಿಸಬೇಕು.

***ಮೈಮೇಲಿನ ಗುಳ್ಳೆಗಳಿಗೆ*** ಜಾಜಿಯ ಮಲ್ಲಿಗೆ ಎಲೆಯ ರಸದಲ್ಲಿ ಕಸ್ತೂರಿ ಅರಿಶಿಣವನ್ನು ತೇದು ಹಚ್ಚಬೇಕು.

ಹಾಗಲಸೊಪ್ಪಿನ ರಸ ಆರು ಚಮಚೆಯಷ್ಟು ತೆಗೆದುಕೊಂಡು ಅದಕ್ಕೆ ಒಂದು ಚಿಟಕೆ ಅರಿಶಿಣ ಪುಡಿ ಸೇರಿಸಿ ಕುಡಿಸಬೇಕು.

ಭದ್ರಮುಷ್ಟಿ ಮತ್ತು ಬಜೆ ಸಮಪ್ರಮಾಣ ಸೇರಿಸಿ ಪುಡಿ ಮಾಡಿ ಕಷಾಯಮಾಡಿ ಅದರಿಂದ ಸ್ನಾನ ಮಾಡಿಸಬೇಕು.

***ಮಕ್ಕಳಲ್ಲಿ ಜೊಲ್ಲು ಸುರಿಯುತ್ತಿದ್ದರೆ*** ೫ ಗ್ರಾಂ ಇಲಿಕಿವಿ ಸೊಪ್ಪನ್ನು ತೆಗೆದುಕೊಂಡು ಕಷಾಯ ಮಾಡಿ ದಿನಕ್ಕೆರಡು ಸಲ ಕೊಡಬೇಕು.

***ಬಾಯಿಹುಣ್ಣಿಗೆ*** ಕೊತ್ತಂಬರಿ ಬೀಜವನ್ನು ನುಣ್ಣಗೆ ಅರೆದು ಆ ಪುಡಿಯನ್ನು ಸ್ವಲ್ಪ ಸ್ವಲ್ಪ ಜೇನುತುಪ್ಪದೊಂದಿಗೆ ಸೇರಿಸಿ ನೆಕ್ಕಿಸುವದರಿಂದ ಬಾಯಿ ಹುಣ್ಣು ಕಡಿಮೆಯಾಗುತ್ತದೆ.

***ಮಕ್ಕಳಿಗೆ ಅಭ್ಯಾಂಗ ತೈಲ*** ಕರಿತುಲಸಿಯ ರಸ, ಕಾಡಿಗ್ಗರುಗದ ರಸ, ಬಿಲ್ವ ಪತ್ರೆಯ ರಸ ಎಳ್ಳೆಣ್ಣೆ ಇವುಗಳನ್ನು ಸಮಭಾಗ ಸೇರಿಸಿ ಕಾಯಿಸಿ ಈ ತೈಲವನ್ನು ಮೈಗೆ, ತಲೆಗೆ ಅಭ್ಯಂಗಕ್ಕೆ ಉಪಯೋಗಿಸಿದರೆ ಶರೀರದ ಕಾಂತಿಯು ಹೆಚ್ಚುತ್ತದೆ.

ಗರಿಕೆರಸ, ಅಮೃತಬಳ್ಳಿಯ ರಸ, ಕೊಬ್ಬರಿ ಎಣ್ಣೆ, ಆಕಳಹಾಲು ಇವುಗಳೆಲ್ಲ ಸಮಪ್ರಮಾಣ ಸೇರಿಸಿ ತೈಲವನ್ನು ತಯಾರಿಸಿಕೊಂಡು ಇದರಿಂದ ಅಭ್ಯಂಗಸ್ನಾನ ಮಾಡಿಸಬೇಕು.

***ಮಕ್ಕಳ ಶಕ್ತಿಗೆ*** ೨೦೦ ಗ್ರಾಂ ಶುದ್ಧ ಅಶ್ವಗಂಧಿಯನ್ನು ಚೆನ್ನಾಗಿ ನೀರಿನಿಂದ ಅರೆದು ಅದರಲ್ಲಿ ೨೦೦ ಮಿಲಿ ಹಸುವಿನ ತುಪ್ಪವನ್ನು ಮತ್ತು ೪ ಲೀಟರ್ ಹಸುವಿನ ಹಾಲನ್ನು ಸೇರಿಸಿ ಒಲೆಯ ಮೇಲಿಟ್ಟು ಕಾಯಿಸಿ, ಘೃತಪಾಕ ಮಾಡಿ ಸೋಸಿ ತೆಗೆದಿಟ್ಟುಕೊಳ್ಳಬೇಕು. ಈ ತುಪ್ಪವನ್ನು ಮಕ್ಕಳ ವಯಸ್ಸಿಗನುಗುಣವಾಗಿ ೨ ಗ್ರಾಂ ನಿಂದ ೫ ಗ್ರಾಂನವರೆಗೂ ಹಾಲಿನ ಜೊತೆಗೆ ಕೊಡುವದರಿಂದ ಮಕ್ಕಳು ಆರೋಗ್ಯವಂತರಾಗಿ, ದಷ್ಟಪುಷ್ಟ ವಾಗಿಯೂ ಬೆಳೆಯುತ್ತಾರೆ. ಅಶ್ವಗಂಧಿಯ ಕೆಂಪು ಹಣ್ಣು ೨೦೦ ಗ್ರಾಂನಷ್ಟು ಹಸುವಿನ ಬೆಣ್ಣೆಯಲ್ಲಿ ಚೆನ್ನಾಗಿ ಹಿಸುಕಿ ೩ ಗಂಟೆಗಳ ಕಾಲ ಇಟ್ಟು ಅನಂತರ ಕಾಯಿಸಿ ತುಪ್ಪ ಮಾಡಿ ಇದನ್ನು ಮಕ್ಕಳ ವಯಸ್ಸಿಗನುಗುಣವಾಗಿ ಒಂದು ಗ್ರಾಂನಿಂದ ೩ ಗ್ರಾಂನವರೆಗೆ ಹಾಲಿನಲ್ಲಿ ಕೊಡುವದರಿಂದ ಮಕ್ಕಳು ಆರೋಗ್ಯವಂತರಾಗಿ ಬೆಳೆಯುತ್ತಾರೆ. ಚಿಕ್ಕಮಕ್ಕಳಲ್ಲಿ ಬರುವ ಅದರಲ್ಲೂ ತಾಯಿಯ ಹಾಲು ಕುಡಿಯುವ ಮಕ್ಕಳ ತಾಯಂದಿರು ಮಕ್ಕಳಿಗೆ ಕಾಯಿಲೆ ಬಂದಾಗ ಪಥ್ಯವನ್ನು ಮಾಡುವದು ಒಳ್ಳೆಯದು.

ಕಡಿಮೆ ಇರುವದರಿಂದ ಪದೇಪದೇ ಸೋಂಕು ರೋಗಗಳಿಗೆ ಗುರಿಯಾಗುತ್ತಾರೆ. ಇಂತಹ ಮಕ್ಕಳಿಗೆ ಹಾಲು, ತರಕಾರಿ, ಬೇಳೆ, ಮಾಂಸಗಳನ್ನು ಬಳಸಿ ಪುಷ್ಟಿಕರವಾಗಿ, ರುಚಿಕರವಾಗಿ ಬೇರೆ ಬೇರೆತರದ ಅಡುಗೆ ಮಾಡಿ ತಿನ್ನಲು ಕೊಡಬೇಕು. ಕಬ್ಬಿಣ, ವಿಟಮಿನ್‌ಗಳ ಟಾನಿಕ್‌ಗಳೊಂದಿಗೆ ಮಗುವಿಗೆ ಸಾಕಷ್ಟು ನಿದ್ದೆ ಅವಶ್ಯಕ. ಹೊರಗೆ ಗಾಳಿ ಬೆಳಕುಗಳಲ್ಲಿ ಆಡುವಂತೆಯೂ ಪ್ರೋತ್ಸಾಹಿಸಬೇಕು.

## ವಿಟಮಿನ್‌ಗಳು

ಇವು ಆಹಾರದಲ್ಲಿರುವ ಜೈವಿಕ ಸಂಯುಕ್ತ ವಸ್ತುಗಳು. ಮಕ್ಕಳ ದೇಹದ ಬೆಳವಣಿಗೆಗೆ ಇವು ಅವಶ್ಯಕವಾಗಿ ಬೇಕೇ ಬೇಕು. ವಿಟಮಿನ್‌ಗಳಲ್ಲಿ ಎ, ಬಿ, ಸಿ, ಡಿ, ಇ ಮತ್ತು ಕೆ ಪ್ರಮುಖವಾದವುಗಳಾಗಿವೆ. ಮಕ್ಕಳಿಗೆ ಮೊದಲಿನ ನಾಲ್ಕು ವಿಟಮಿನ್‌ಗಳು ಬೇಕೇ ಬೇಕು. ಇವು ಹಾಲು, ಬೆಣ್ಣೆ, ತರಕಾರಿ, ಕಾಳು, ಕಾಡ್‌ಲಿವರ್ ಎಣ್ಣೆಗಳಲ್ಲಿ ಹೇರಳವಾಗಿರುತ್ತವೆ. ಮಗು ಸಮತೋಲನ ಆಹಾರ ಸೇವಿಸದಿದ್ದಾಗ ವಿಟಮಿನ್ ಅಭಾವ ಉಂಟಾಗುತ್ತದೆ.

## ವಿಟಮಿನ್ 'ಎ'

ಇದು ಮಗುವಿನ ಚಟುವಟಿಕೆಗಳಿಗೆ ತುಂಬ ಆಗತ್ಯವಾದುದು. ಕಾಯಿಲೆಗಳಿಗೆ ನಿರೋಧಕ ಶಕ್ತಿಯನ್ನು ಬೆಳೆಸಿಕೊಳ್ಳಲು ಇದು ನೆರವು ನೀಡುತ್ತದೆ. ದೇಹದ ಮೇಲ್ಪರೆಯ ರಕ್ಷಣೆ ನೀಡುವದೇ ಇದರ ಪ್ರಮುಖ ಕಾರ್ಯ. ಕಣ್ಣುಗುಡ್ಡೆಯಿಂದ ಹಿಡಿದು ಶ್ವಾಸನಾಳ, ಜೀರ್ಣಾಂಗಗಳು, ಜನನಾಂಗಗಳು, ಇವುಗಳಲ್ಲಿ ಮೇಲ್ಪರೆಯ ಆವರಣವಿರುತ್ತದೆ.

ಈ ವಿಟಮಿನ್‌ನ ನ್ಯೂನತೆಯಿಂದ ಸಂಜೆ ಅಥವಾ ರಾತ್ರಿಯ ಹೊತ್ತು ದೃಷ್ಟಿ ಮಾಂದ್ಯ ಉಂಟಾಗುತ್ತದೆ. ಕಣ್ಣುಗುಡ್ಡೆಯ ಪೊರೆ ನೆರಿಗೆಗಟ್ಟುತ್ತದೆ. ಕಣ್ಣೀರ ಗ್ರಂಥಿಯ ಸ್ರಾವ ಕಡಿಮೆಯಾಗುವದರಿಂದ ಕಣ್ಣುಗುಡ್ಡೆ ಒಣಗುವ ಸಾಧ್ಯತೆಯೂ ಇರುತ್ತದೆ. ಅನಂತರ ಕಣ್ಣು-ಪೂರ್ತಿ ನಾಶವಾಗುತ್ತದೆ. ಇದಲ್ಲದೇ ಬಾಯಿ ಹುಣ್ಣು ಕೂಡ ಉಂಟಾಗುತ್ತದೆ. ಮಗು ಸೋಮಾರಿಯಾಗುತ್ತಾನೆ. ಅವನ ದೈಹಿಕ ಹಾಗೂ ಮಾನಸಿಕ ಬೆಳವಣಿಗೆಗಳು ಕುಂಠಿತಗೊಳ್ಳುತ್ತವೆ. ಮೈಚರ್ಮ ಒಣಗಿ ಬಿರುಕು ಬಿಡುತ್ತದೆ.

ಸಂಜೆ ಹೊತ್ತು ಕಣ್ಣು ಸರಿಯಾಗಿ ಕಾಣುವದಿಲ್ಲ ಎಂದು ಮಕ್ಕಳು ಹೇಳಿದೊಡನೆ ಚಿಕಿತ್ಸೆ ಆರಂಭಿಸಿದರೆ ಅವರ ಕಣ್ಣು ಉಳಿಸಬಹುದು. ಇಲ್ಲದಿದ್ದರೆ ಮಗು ಕುರುಡನಾಗುತ್ತಾನೆ.

ವಿಟಮಿನ್ 'ಎ' ಹನಿಗಳ (drops) ರೂಪದಲ್ಲಿ ದೊರೆಯುತ್ತದೆ. ನ್ಯೂನತೆಯಿಂದ ಬಳಲುವ ಮಕ್ಕಳಿಗೆ ಹನಿಗಳನ್ನ ಹೆಚ್ಚು ಪ್ರಮಾಣದಲ್ಲಿ ಕೊಡಬೇಕು. ಸಂಜೆ ಕುರುಡು, ಒಣಕಣ್ಣು ಇರುವ ಮಕ್ಕಳಿಗೆ ವಿಟಮಿನ್ 'ಎ'ಯನ್ನು ಚುಚ್ಚುಮದ್ದಿನ ರೂಪದಲ್ಲಿ ಕೊಡಬೇಕು.

ಗೆಣಸು, ಟೊಮೆಟೋ, ಕೋಸುಗಡ್ಡೆ, ಮಾವಿನಹಣ್ಣು, ಕಿತ್ತಳೆ, ಪಪ್ಪಾಯಿ ಹಣ್ಣು, ಕೊತ್ತಂಬರಿ ಸೊಪ್ಪು, ದಂಟಿನ ಸೊಪ್ಪು, ಹಾಲು,




ಬೆಣ್ಣೆ, ತರಕಾರಿ, ಕ್ಯಾರೆಟ್ ಇವುಗಳಲ್ಲಿ 'ಎ' ವಿಟಮಿನ್ ಪ್ರಮಾಣ ಹೆಚ್ಚಿರುವದರಿಂದ ಮಕ್ಕಳಿಗೆ ಸಾಕಷ್ಟು ಪ್ರಮಾಣದಲ್ಲಿ ಕೊಟ್ಟರೆ ಅವರಿಗೆ ವಿಟಮಿನ್ 'ಎ'ಯ ನ್ಯೂನತೆ ಉಂಟಾಗುವದಿಲ್ಲ.

## ವಿಟಮಿನ್ 'ಬಿ' ಕಾಂಪ್ಲೆಕ್ಸ್

ರೂಪ, ರಚನೆಗಳಲ್ಲಿ ಅಲ್ಪಸ್ವಲ್ಪವಾಗಿ ಒಂದನ್ನೊಂದು ಹೋಲುವ ಹತ್ತು ಹನ್ನೆರಡು ಸಂಯುಕ್ತಗಳು ಒಂದು ಮಿಶ್ರಣದಲ್ಲಿ ಸೇರಿ ಬಿ ಕಾಂಪ್ಲೆಕ್ಸ್ ಎನಿಸಿಕೊಂಡಿವೆ. ಇವು ದೇಹದ ರಾಸಾಯನಿಕ ಕಿಣ್ವಗಳ ಪ್ರಮುಖ ಘಟಕಗಳು. ರಕ್ತ ಕಣಗಳ ಉತ್ಪಾದನೆಯಲ್ಲಿಯೂ ಇವುಗಳ ಸಹಾಯ ಅಪಾರವಾಗಿರುತ್ತದೆ. ಬಿ೧, ಬಿ೨, ಬಿ೬, ಬಿ೧೨, ಫೋಲಿಕ್‌ಆಸಿಡ್ ಈ ಗುಂಪಿನಲ್ಲಿ ಮುಖ್ಯವಾದವುಗಳು.

ಬಿ ಕಾಂಪ್ಲೆಕ್ಸ್ ವಿಟಮಿನ್‌ಗಳು ಹಾಲು, ಧಾನ್ಯಗಳು, ದ್ವಿದಳಧಾನ್ಯಗಳು, ಕಾಳುಗಳು, ಲಿವರ್ ಮತ್ತು ಮಾಂಸಗಳಲ್ಲಿ ಅಧಿಕವಾಗಿರುತ್ತದೆ. ಧಾನ್ಯಗಳ ಹೊಟ್ಟಿನಲ್ಲಿ ಇವು ವಿಶೇಷವಾಗಿರುತ್ತವೆ. ಅಕ್ಕಿಯನ್ನು ಪಾಲಿಷ್ ಮಾಡುವದರಿಂದ ಬಿ ಕಾಂಪ್ಲೆಕ್ಸ್ ಸಾಕಷ್ಟು ಪ್ರಮಾಣದಲ್ಲಿ ನಷ್ಟವಾಗುತ್ತದೆ. ಅಲ್ಲದೇ ಅನ್ನ ಬೆಳ್ಳಗಾಗಲಿ ಎಂಬ ಉದ್ದೇಶದಿಂದ ಪದೇ ಪದೇ ಅಕ್ಕಿಯನ್ನು ತೊಳೆದು ನೀರನ್ನು ಚೆಲ್ಲುವದರಿಂದ ಅದರಲ್ಲಿನ ಬಿ ಕಾಂಪ್ಲೆಕ್ಸ್ ಅಂಶ ಇನ್ನೂ ನಷ್ಟವಾಗುತ್ತದೆ. ಈ ನೀರನ್ನು



# ಮಕ್ಕಳಲ್ಲಿ ರಕ್ತಹೀನತೆ ಉಂಟಾಗಲು ಕಾರಣಗಳು

○ ಪೌಷ್ಟಿಕ ಆಹಾರದ ಕೊರತೆ, ಕ್ಷಯ, ಸಿಹಿ ಮೂತ್ರರೋಗ, ಥೈರಾಯಿಡ್ ಕಾಯಿಲೆಗಳು, ಮಲೇರಿಯಾ, ಸೋಂಕು ರೋಗಗಳು, ಹೊಟ್ಟೆಯಲ್ಲಿನ ಜಂತು ಹುಳುಗಳು ಮಗುವಿಗೆ ರಕ್ತಹೀನತೆ ಉಂಟು ಮಾಡುತ್ತದೆ.

**ಲಕ್ಷಣಗಳು** : ಮುಖ ಬಿಳಿಚಿಕೊಂಡಿರುತ್ತದೆ, ಮುಖ, ಕೈಕಾಲು ಊದಿಕೊಳ್ಳುವದು, ಬಾಯಿಹುಣ್ಣು, ಹಸಿವೆಯಿಲ್ಲದಿರುವದು, ತಿಂದ ಆಹಾರವು ಜೀರ್ಣವಾಗದೇ ಭೇದಿಯಾಗುವದು, ಮಾತು ಮಾತಿಗೂ ಸುಸ್ತಾಗುತ್ತೆ ಎನ್ನುವದು, ಜೋರಾಗಿ ನಡೆದರೆ ಉಬ್ಬಸ ಬರುವದು ಮುಂತಾದ ಲಕ್ಷಣಗಳಿರುತ್ತವೆ.



○ ನಮ್ಮ ರಕ್ತದಲ್ಲಿ ಕೆಂಪು, ಬಿಳಿ ಮತ್ತು ಚಪ್ಪಟೆ ರಕ್ತ ಕಣಗಳಿರುತ್ತವೆ. ರಕ್ತ ಹೀನತೆಯಾದಾಗ ನಾವು ಕೆಂಪು ರಕ್ತಕಣಗಳನ್ನು ಗಮನಿಸಬೇಕು. ರಕ್ತ ಪರೀಕ್ಷೆ ಮಾಡಿಸಿದಾಗ ಕೆಂಪು ರಕ್ತಕಣಗಳ ಸಂಖ್ಯೆ ಕಡಿಮೆಯಾಗಿರಬಹುದು ಇಲ್ಲವೇ ಕೆಂಪು ರಕ್ತ ಕಣಗಳ ಒಳಗಿರುವ 'ಹಿಮೋಗ್ಲೋಬಿನ್', ಅಂದರೆ ಕೆಂಪು ರಕ್ತ ಕಣಗಳೊಳಗಿರುವ ಸಸಾರಜನಕ ಅಂಶದ ಪ್ರಮಾಣ ಕಡಿಮೆಯಾಗಿರಬಹುದು. ಹಿಮೋಗ್ಲೋಬಿನ್ ಬಣ್ಣ ಕೆಂಪಗಿರುವದರಿಂದ ರಕ್ತಕ್ಕೂ ಆ ಬಣ್ಣ ಬಂದಿದೆ. ಇದರ ಮುಖ್ಯ ಕೆಲಸವೆಂದರೆ, ಆಮ್ಲಜನಕವನ್ನು ದೇಹದ ಪ್ರತಿಯೊಂದು ಅಂಗ ಮತ್ತು ಅಂಗಾಂಶಗಳಿಗೆ ಒದಗಿಸುವದು. ನಾವು ಬದುಕಿ ಕಾರ್ಯ ನಿರ್ವಹಿಸಬೇಕಾದರೆ ಆಮ್ಲಜನಕ ಬೇಕೇ ಬೇಕು. ಆದ್ದರಿಂದಲೇ ಹಿಮೋಗ್ಲೋಬಿನ್ ಎಲ್ಲ ಚಟುವಟಿಕೆಗಳಿಗೆ ಮೂಲ ಆಧಾರವಾಗಿದೆ ಎಂದು ಹೇಳಬಹುದು.

○ ಹಿಮೋಗ್ಲೋಬಿನ್ ಉತ್ಪತ್ತಿಗೆ ಕಬ್ಬಿಣ, ಸಸಾರಜನಕ ಬೇಕಾಗುತ್ತದೆ. ಕೆಂಪು ರಕ್ತಕಣಗಳು ಉತ್ಪತ್ತಿಯಾಗಲು ಹಾಗೂ ಪಕ್ವವಾಗಲು ಆಹಾರದಲ್ಲಿರುವ ಹಲವು ವಿಟಮಿನ್‌ಗಳು ಅಗತ್ಯವಾಗಿ ಬೇಕಾಗುತ್ತವೆ. ರಕ್ತ ವೃದ್ಧಿಗೆ ಮುಖ್ಯವಾಗಿ ವಿಟಮಿನ್ ಸಿ, ಡಿ, ಬಿ೬, ಬಿ೧೨ ಮತ್ತು ಫೋಲಿಕ್ ಆಸಿಡ್ ಬೇಕಾಗುತ್ತವೆ. ಮೂಳೆಮಜ್ಜೆಯಲ್ಲಿ (*Bone marrow*) ಹುಟ್ಟುವ ರಕ್ತಕಣಗಳು ಪಕ್ವತೆ ಹೊಂದುವದಕ್ಕೆ ವಿಟಮಿನ್ 'ಸಿ' ಬೇಕಾಗುತ್ತದೆ. ಆಹಾರದಲ್ಲಿ ಇದರ ಕೊರತೆಯಾದಾಗ ಕೆಂಪು ರಕ್ತಕಣಗಳು ಪಕ್ವವಾಗದೇ ರಕ್ತಪರಿಚಲನೆಗೆ ಸೇರಿ, ಬೇಗ ನಾಶವಾಗಿ, ರಕ್ತಹೀನತೆ ತಲೆದೋರುತ್ತದೆ.

○ ವಿಟಮಿನ್ 'ಡಿ' ಕೊರತೆಯಿಂದಲೂ ರಕ್ತಹೀನತೆಯಾಗುತ್ತದೆ. ಮೂಳೆಮಜ್ಜೆಗಳಲ್ಲಿ ರಕ್ತಕಣಗಳು ಹುಟ್ಟುತ್ತವೆಯಾದ್ದರಿಂದ ಮೂಳೆಗಳು ಗಟ್ಟಿಯಾಗಿರಬೇಕಾಗುತ್ತದೆ. ಮೂಳೆಗಳು ಗಟ್ಟಿಯಾಗಬೇಕಾದರೆ ಕ್ಯಾಲ್ಸಿಯಂ ಹೆಚ್ಚು ಬೇಕಾಗುತ್ತದೆ. ಈ ಕೆಲಸಕ್ಕೆ ವಿಟಮಿನ್ 'ಡಿ' ಹೆಚ್ಚು ಸಹಾಯಮಾಡುತ್ತದೆ. ವಿಟಮಿನ್ 'ಬಿ' ಕಾಂಪ್ಲೆಕ್ಸ್‌ನ ಬಿ೬, ಬಿ೧೨ ಮತ್ತು ಫೋಲಿಕ್ ಆಸಿಡ್ ನ್ಯೂನತೆಯುಂಟಾದಾಗ ರಕ್ತಹೀನತೆಯುಂಟಾಗುತ್ತದೆ.

○ ಬಿ೬ನ ಕೊರತೆಯಾದಾಗ ಟ್ರಿಪ್ಟೋಫೇನ್ ಎಂಬ ಸಸಾರಜನಕದ ಜೀವ ವಸ್ತುಕರಣ ಸಲೀಸಾಗಿ ನಡೆಯುವದಿಲ್ಲ. ಈ ಸಸಾರಜನಕದ ಕೊರತೆಯಿಂದ ಹಿಮೋಗ್ಲೋಬಿನ್ ಪ್ರಮಾಣವೂ ಕಡಿಮೆಯಾಗುವದು. ಕೆಂಪು ರಕ್ತಕಣಗಳು ಮೂಳೆಮಜ್ಜೆಯಲ್ಲಿ ಹುಟ್ಟಿ ಪಕ್ವಗೊಳ್ಳಬೇಕಾದರೆ ಬಿ೧೨ ಬೇಕೇ ಬೇಕು. ಮಗುವಿಗೆ ಭೇದಿಯಾಗಿ ಬಿ೧೨ ಹೀರಲ್ಪಡದೇ ರಕ್ತಹೀನತೆ ಉಂಟಾಗುತ್ತದೆ. ಫೋಲಿಕ್ ಆಸಿಡ್ ಕೂಡ ರಕ್ತಕಣಗಳ ವೃದ್ಧಿಗೆ ಸಹಾಯಕಾರಿಯಾಗಿರುತ್ತದೆ.

○ ಕಬ್ಬಿಣದ ಅಂಶ ಕಡಿಮೆಯಾದಾಗಲೂ ರಕ್ತಹೀನತೆ ತಲೆದೋರುತ್ತದೆ. ಹಿಮೋಗ್ಲೋಬಿನ್ ತಯಾರಾಗಲು ಕಬ್ಬಿಣ ಅಗತ್ಯವಾಗಿ ಬೇಕೇ ಬೇಕು. ಕಬ್ಬಿಣದ ಕೊರತೆಯ ರಕ್ತಹೀನತೆಯಲ್ಲಿ ಹಿಮೋಗ್ಲೋಬಿನ್ ಅಂಶ ಕಡಿಮೆಯಾಗಿರುತ್ತದೆ. ರಕ್ತದಲ್ಲಿ ಹಿಮೋಗ್ಲೋಬಿನ್ ಅಂಶ ಶೇ.೧೪-೧೫ ಇರುತ್ತದೆ. ರಕ್ತಹೀನತೆಯುಂಟಾದಾಗ ಇದು ಕಡಿಮೆಯಾಗುತ್ತದೆ. ಕೆಂಪು ರಕ್ತಕಣಗಳ ಸಂಖ್ಯೆ ಎಷ್ಟಿದೆ ಎಂಬುದನ್ನು ರಕ್ತವನ್ನು ಸೂಕ್ಷ್ಮದರ್ಶಕದಡಿಯಲ್ಲಿ ಪರೀಕ್ಷಿಸಿದಾಗ ತಿಳಿಯುತ್ತದೆ. ಇದು ಸಾಮಾನ್ಯವಾಗಿ ೪-೫ ಮಿಲಿಯನ್/ಕ್ಯೂ.ಮಿ.ಮಿ. ಇರುತ್ತದೆ. ರಕ್ತಹೀನತೆಯಲ್ಲಿ ಇದು ಕಡಿಮೆಯಾಗುತ್ತದೆ.

○ **ಚಿಕಿತ್ಸೆ** : ಹಿಮೋಗ್ಲೋಬಿನ್ ಕಡಿಮೆಯಿದ್ದರೆ ಕಬ್ಬಿಣದ ಅಂಶಗಳುಳ್ಳ ಮಾತ್ರೆಗಳನ್ನು ಕೊಡಬೇಕಾಗುತ್ತದೆ. ಅಲ್ಲದೇ ಪೌಷ್ಟಿಕ ಆಹಾರ ಅಗತ್ಯವಾಗಿ ಕೊಡಬೇಕು. ರಕ್ತಕಣಗಳ ಸಂಖ್ಯೆ ಕಡಿಮೆಯಿದ್ದರೆ ಬಿ೧೨, ಫೋಲಿಕ್ ಆಸಿಡ್ ಕೊಡಬೇಕಾಗುತ್ತದೆ. ತೀವ್ರ ರಕ್ತಹೀನತೆಯಿದ್ದರೆ ಕಬ್ಬಿಣದ ಚುಚ್ಚುಮದ್ದು ಕೊಡಬೇಕಾಗುತ್ತದೆ.

**'ಕಬ್ಬಿಣ'ದ ಅಂಶ ಅಧಿಕವಾಗಿರುವ ಆಹಾರ** : ಹಾಲು, ಮಾಂಸ, ಬಟಾಣಿ, ಕಡಲೆಕಾಯಿ, ದ್ವಿದಳಧಾನ್ಯಗಳು, ತರಕಾರಿ ಎಲ್ಲ ತರದ ಸೊಪ್ಪುಗಳು.

ಚೆಲ್ಲದೇ ಅಡುಗೆಯಲ್ಲಿ ಬಳಸಿಕೊಳ್ಳಬೇಕು. ದೋಸೆ, ಇಡ್ಲಿ, ಮೊಸರಿನಲ್ಲಿಯೂ ಬಿ ಕಾಂಪ್ಲೆಕ್ಸ್ ಇರುತ್ತದೆ.

### 'ಬಿ' ಕಾಂಪ್ಲೆಕ್ಸ್ ನ್ಯೂನತೆಯಿಂದ ಉಂಟಾಗುವ ಲಕ್ಷಣಗಳು

ಕೈಕಾಲು ನೋವು, ಜೋಮು ಹಿಡಿಯುವದು. ಉಬ್ಬಸ ಬರುತ್ತದೆ. ಬಾಯಿ ಹುಣ್ಣಾಗುತ್ತದೆ, ಶರೀರ ಕಾಂತಿ ಕಳೆದುಕೊಂಡು ಚರ್ಮ ಒರಟಾಗುತ್ತದೆ. ಹಣೆ, ಮೂಗುಗಳ ಮೇಲೆ, ಕುತ್ತಿಗೆಯ ಸುತ್ತ ಕಪ್ಪುಕಲೆಗಳು ಉಂಟಾಗುತ್ತವೆ.




ರಕ್ತದ ಉತ್ಪಾದನೆ ಕಡಿಮೆಯಾಗುವದರಿಂದ ರಕ್ತಹೀನತೆಯುಂಟಾಗುತ್ತದೆ. 'ಬೆರಿಬೆರಿ' ಎನ್ನುವ ಕಾಯಿಲೆ ಉಂಟಾಗುತ್ತದೆ.

ಬಿ ಕಾಂಪ್ಲೆಕ್ಸ್ ಕೊರತೆ ತಲೆದೋರಿದಾಗ ವೈದ್ಯರನ್ನು ಸಂಪರ್ಕಿಸಿ ಬಿ ಕಾಂಪ್ಲೆಕ್ಸ್‌ನ್ನು ಮಾತ್ರೆಗಳು ಅಥವಾ ಟಾನಿಕ್‌ನ ರೂಪದಲ್ಲಿ ಕೊಡಬೇಕು. ನ್ಯೂನತೆ ಉಂಟಾಗದಂತೆ ಮಕ್ಕಳ ಆಹಾರದಲ್ಲಿ ವಿಹಿತ ಅಂಶಗಳನ್ನು ಸೇರಿಸುವದು ಎಲ್ಲ ತಾಯಂದಿರ ಕರ್ತವ್ಯವಾಗಿದೆ.

### ವಿಟಮಿನ್ 'ಸಿ'

ಇದು ಹಣ್ಣುಗಳಲ್ಲಿ ಅಧಿಕವಾಗಿದೆ. ಕಿತ್ತಳೆ, ಮೋಸಂಬಿ, ಟೊಮೋಟೋ ಹಾಗೂ ನಿಂಬೆಹಣ್ಣಿನಲ್ಲಿ ವಿಟಮಿನ್ ಸಿ ಯ ಅಂಶ ಅಧಿಕವಾಗಿದೆ. ಕುದಿಸುವುದರಿಂದ ವಿಟಮಿನ್ 'ಸಿ' ಅಂಶ ನಾಶವಾಗುತ್ತದೆ. ಆದ್ದರಿಂದ ಮಗುವಿಗೆ ಕೊಡುವ ಹಣ್ಣಿನ ರಸವನ್ನು ಎಂದಿಗೂ ಕುದಿಸಬಾರದು.

ವಿಟಮಿನ್ 'ಸಿ' ನ್ಯೂನತೆಯಾದಾಗ ಅಂಗಾಂಶಗಳನ್ನು ಒಂದುಗೂಡಿಸುವ ತಂತು ದುರ್ಬಲಗೊಳ್ಳುತ್ತದೆ. ಇದರಿಂದ ಮೂಳೆಗಳು, ಒಸಡು, ರಕ್ತನಾಳಗಳ ಅಂಗಾಂಶಗಳು ಶಿಥಿಲಗೊಳ್ಳುತ್ತವೆ. ಹಲ್ಲುಗಳು ಗಟ್ಟಿಯಾಗದೇ ಸಡಿಲಗೊಳ್ಳುತ್ತವೆ. ಮಗು ಕೆಮ್ಮಿದರೆ, ಅತ್ತರೆ ಮಗುವಿನ ಚರ್ಮ ನೀಲಿಗಟ್ಟುವದು. ಮೂಳೆಗಳು ಮೆದುವಾಗಿ ಊದಿಕೊಂಡು ನೋವಾಗುವದರಿಂದ ಮಗು ಓಡಾಡೋದನ್ನ ಆಟವಾಡುವದನ್ನ ನಿಲ್ಲಿಸಿಬಿಡುತ್ತದೆ.

ವಿಟಮಿನ್ 'ಸಿ'ಯ ಕೊರತೆ ಅಧಿಕವಾದರೆ 'ಸ್ಕರ್ವಿ'ರೋಗ ಉಂಟಾಗುತ್ತದೆ. ಈ ರೋಗದ ಲಕ್ಷಣಗಳೆಂದರೆ, ಕಾಲು ಮೂಳೆಗಳು ಸೊಟ್ಟಗಾಗಿ ಊದಿಕೊಳ್ಳುವದು. ಒಸಡುಗಳು ಊದಿಕೊಳ್ಳುವದು, ಎದೆಯೆಲು ಆಳಕ್ಕೆ ಇಳಿದಿರುವದು, ಪಕ್ಕೆಲುಬುಗಳು ಎದೆಯಲಬುಗಳು ಕೂಡಿಕೊಳ್ಳುವ ಜಾಗದಲ್ಲಿ ಮೂಳೆಗಳು ಉಬ್ಬಿಕೊಂಡಿರುವದು, ಸದಾ ಕಿರಿಕಿರಿ ಮಾಡುವದು ಇಂತಹ ಲಕ್ಷಣಗಳು ಕಂಡುಬಂದಲ್ಲಿ ತಕ್ಷಣ ವೈದ್ಯರನ್ನು ಸಂಪರ್ಕಿಸುವದು ಒಳ್ಳೆಯದು ಇಂಥವರಿಗೆ ವಿಟಮಿನ್ 'ಸಿ'ಯ ಮಾತ್ರೆಗಳನ್ನು ಕೊಡಬೇಕು.

### ವಿಟಮಿನ್ 'ಡಿ'

ಇದು ಹೆಚ್ಚಾಗಿ ಹಾಲು, ಮೊಟ್ಟೆ, ಕಾಡ್ಲಿವರ್ ಎಣ್ಣೆಯಲ್ಲಿ ಇರುತ್ತದೆ. ಸೂರ್ಯನ ಬೆಳಕಿನಲ್ಲಿಯೂ ಇದು ಅಧಿಕವಾಗಿರುತ್ತದೆ.

ಆಹಾರದಲ್ಲಿನ ವಿಟಮಿನ್ 'ಡಿ' ಅಂಶಗಳು ಮಗುವಿನ ಚರ್ಮದಲ್ಲಿದ್ದು, ಸೂರ್ಯನ ಬೆಳಕಿನ ಕಿರಣಗಳಿಂದ ಉದ್ದೀಪನಗೊಂಡು 'ಡಿ' ವಿಟಾಮಿನ್‌ಗಳಾಗಿ ಪರಿವರ್ತನಗೊಳ್ಳುವವು. ಆಹಾರದಲ್ಲಿನ ಕ್ಯಾಲ್ಸಿಯಂನ್ನು ಕರುಗಳುಗಳಿಂದ ಹೀರಿಕೊಂಡು ಅದನ್ನು ಮೂಳೆಗಳಲ್ಲಿ ಸಂಗ್ರಹಿಸುವದು ವಿಟಮಿನ್ 'ಡಿ'ಯ ಕೆಲಸ.

ವಿಟಮಿನ್ 'ಡಿ'ಯ ನ್ಯೂನತೆಯುಂಟಾದಾಗ ಮೂಳೆ, ಮಜ್ಜೆ, ಸ್ನಾಯುಗಳಲ್ಲಿ ಕ್ಯಾಲ್ಸಿಯಂ ಕಡಿಮೆಯಾಗುತ್ತದೆ. ಇದರಿಂದ ಮೂಳೆಗಳು ಮೆದುವಾಗಿ, ಸ್ನಾಯುಗಳು ಬಲ ಕಳೆದುಕೊಳ್ಳುತ್ತವೆ. ಮಗುವಿನ ಆಹಾರದಲ್ಲಿ ವಿಟಮಿನ್ 'ಡಿ'ಯ ಅಭಾವ ಅಧಿಕವಾದಾಗ ಇಲ್ಲವೇ ಮಗು ಸೂರ್ಯನ ಬೆಳಕು ಕಡಿಮೆ ಇರುವ ವಾತಾವರಣದಲ್ಲಿ ಬೆಳೆದಾಗ, 'ರಿಕೆಟ್ಸ್' ಕಾಯಿಲೆ ಉಂಟಾಗುತ್ತದೆ. ತಾಯಿಯ ಹಾಲು ಕುಡಿದ ಮಕ್ಕಳಲ್ಲಿ ಈ ಕಾಯಿಲೆ ಕಡಿಮೆ. ಹಸುವಿನ ಹಾಲನ್ನು ಕುಡಿಸುವದರಿಂದ ಅದರಲ್ಲಿನ ವಿಟಮಿನ್ 'ಡಿ'ಯ ಅಂಶ ನಾಶಗೊಳ್ಳುವದರಿಂದ ಅಂತಹ ಹಾಲನ್ನು ಕುಡಿಯುವ ಮಕ್ಕಳಲ್ಲಿ 'ರಿಕೆಟ್ಸ್' ಕಾಣಿಸಿಕೊಳ್ಳುತ್ತದೆ.

ಈ ಕಾಯಿಲೆಯ ಲಕ್ಷಣಗಳೆಂದರೆ, ಹೊಟ್ಟೆ ಉಬ್ಬಿದ ಹಾಗಿರುವದು, ಮಗುವಿನ ಎದೆಯ ಮೂಳೆಗಳು ಎದ್ದು ತೋರುವುದು. ದುರ್ಬಲವಾದ ಸ್ನಾಯುಗಳು ಮಗುವಿನ ಭಾರವನ್ನು ತಡೆಯಲಾರವು. ಆದ್ದರಿಂದ ಗೂನುಬೆನ್ನು ಉಂಟಾಗುವದು ಮಂಡಿಗಳು ಒಂದನ್ನೊಂದು ತಗುಲಿಕೊಂಡು ಕಾಲುಗಳು ಹೊರಕ್ಕೆ ತಿರುಗಿರುವದು ಈ ಕಾಯಿಲೆಯ ವಿಶೇಷ ಲಕ್ಷಣವಾಗಿರುತ್ತದೆ. ನ್ಯೂನತೆ ಅತ್ಯಧಿಕವಾದಾಗ ಮಕ್ಕಳಿಗೆ ಕೈಕಾಲುಗಳ ನಡುಕ ಬರುತ್ತದೆ.

ಇಂತಹ ಮಕ್ಕಳಿಗೆ ವಿಟಮಿನ್ 'ಡಿ' ಅಧಿಕವಿರುವ ಚುಚ್ಚುಮದ್ದನ್ನು ಕೊಡಿಸಬೇಕು. ಅಲ್ಲದೇ ಮೊಟ್ಟೆ, ಹಾಲು, ಕಾಡ್‌ಲಿವರ್ ಎಣ್ಣೆ ಕೊಡಬೇಕು. ಮಗುವಿನ ಮೈಗೆ ಎಣ್ಣೆಹಚ್ಚಿ ಎಳೆಬಿಸಿಲಲ್ಲಿ ಸ್ವಲ್ಪ ಹೊತ್ತು ಕೂಡಿಸಿ ನಂತರ ಸ್ನಾನ ಮಾಡಿಸಬೇಕು.

ಮಕ್ಕಳಿಗೆ ನೀಡಬೇಕಾದ ಆಹಾರದ ಪರಿಜ್ಞಾನ ತಾಯಂದಿರಿಗಿದ್ದರೆ ಮಕ್ಕಳು ನ್ಯೂನತೆಯ ಕಾಯಿಲೆಗಳಿಂದ ನರಳುವದು ತಪ್ಪುತ್ತದೆ. ●

# ನಿಮ್ಮ ಮಕ್ಕಳನ್ನು ಹೀಗೆ ಬೆಳೆಸಿ

○ ಡಾ. ಆರತಿ ವೆಂಕಟೇಶ್

**ತ**ಮ್ಮ ಮಕ್ಕಳು ಆರೋಗ್ಯವಂತರಾಗಿರಬೇಕೆಂದು ಪ್ರತಿಯೊಬ್ಬ ತಾಯಿಯೂ ಬಯಸುತ್ತಾಳೆ. ಆದರೆ ಆರೋಗ್ಯವಂತರು ಎಂದರೆ ಹೇಗೆ? ಏನು? ಎಂದು ತಿಳಿದುಕೊಳ್ಳುವುದು ಮುಖ್ಯ. ಎಲ್ಲರಿಗಿಂತ ದಷ್ಟಪುಷ್ಟವಾಗಿ ಕಾಣುವ ಮಗು ಆರೋಗ್ಯವಂತ ಎನ್ನುವುದು ಮೂರ್ಖತನ. ಆರೋಗ್ಯಕ್ಕೂ ದೇಹದ ತೂಕಕ್ಕೂ ಏನೂ ಸಂಬಂಧವಿರುವುದಿಲ್ಲ ಎಂದು ಮೊದಲು ತಾಯಂದಿರು ತಿಳಿದುಕೊಳ್ಳಬೇಕು.

ಸಾಮಾನ್ಯವಾಗಿ ವೈದ್ಯರ ಬಳಿ ತಾಯಂದಿರ ದೂರು ಏನೆಂದರೆ - 'ನಮ್ಮ ಮಗ ಅಥವಾ ಮಗಳು ಸರಿಯಾಗಿ ಊಟ, ತಿಂಡಿ ಏನೂ ಮಾಡುವುದಿಲ್ಲ. ನೋಡಲು ತೆಳ್ಳಗಿದ್ದಾನೆ/ಳೆ. ಹೀಗಾದರೆ ಅವರು ಆರೋಗ್ಯವಂತರಾಗಲು ಸಾಧ್ಯವೇ?' ನ್ಯಾಯವಾದ ಪ್ರಶ್ನೆಯೇ ನಿಜ! ಆದರೆ ಅದೇ ಪ್ರಶ್ನೆಯ ಇನ್ನೊಂದು ಮುಖವನ್ನು ನೋಡಿದರೆ... 'ಸ್ಥೂಲವಾಗಿ ದಪ್ಪಗಿರುವ ಮಕ್ಕಳೆಲ್ಲಾ ಆರೋಗ್ಯವಂತರೇ?' ಖಂಡಿತ ಅಲ್ಲ! ಎನ್ನುವ ಉತ್ತರ ತಟ್ಟನೆ ದೊರೆಯುತ್ತದೆ.

Eat to live but do not live to eat. (ಬದುಕಲು ತಿನ್ನಬೇಕೇ ಹೊರತು ತಿನ್ನಲು ಬದುಕಬಾರದು) ಎನ್ನುವ ಗಾದೆ ಮಾತು ಎಷ್ಟು ಅರ್ಥಗರ್ಭಿತ! ಎಲ್ಲಾ ಮಕ್ಕಳೂ ತಮ್ಮ ಹೆತ್ತವರಿಗೆ ಅತಿ ಮುದ್ದು. ಮಾರುಕಟ್ಟೆಗಳಲ್ಲಿ ದೊರಕುವ ವಿಧವಿಧ ತಿಂಡಿಗಳನ್ನು ಕಂಡಾಗ ಮಕ್ಕಳಿಗೆ ಮಾತ್ರವಲ್ಲದೇ ತಂದೆ, ತಾಯಂದಿರಿಗೂ ಆಕರ್ಷಣೆ ಉಂಟಾಗುತ್ತವೆ. ತಮ್ಮ ಮಕ್ಕಳು ವಿವಿಧ ತಿಂಡಿ, ಐಸ್‌ಕ್ರೀಂ, ಪಾನೀಯಗಳನ್ನು ತಿಂದು ಬೆಳೆಯಲಿ ಎನ್ನುವ ಒಣಪ್ರತಿಷ್ಠೆಯೂ ಕೆಲವರಿಗಿರುತ್ತದೆ. ಅದು ಎಷ್ಟು ಬೆಲೆ ಬಾಳುವುದಾದರೂ ಮಕ್ಕಳಿಗೆ ತಿನ್ನಿಸಿದರೆ ಅವರಿಗೆ ತೃಪ್ತಿ. ಹೀಗಾಗಿ ಚಿಕ್ಕವಯಸ್ಸಿನಿಂದಲೇ ಮಕ್ಕಳಿಗೆ 'ಆಹಾರ' ಎನ್ನುವುದರ ಬಗ್ಗೆ ಸರಿಯಾದ ಮಾಹಿತಿ ಸಿಗುವುದಿಲ್ಲ. ಪ್ರತಿಸಲ ಆಹಾರ ಸೇವಿಸುವಾಗಲೂ ಅದು ದೇಹದ ಮೇಲೆ ಯಾವ ಪರಿಣಾಮ ಬೀರುತ್ತದೆ ಎಂದು ತಂದೆ, ತಾಯಂದಿರು ಮಕ್ಕಳಿಗೆ ತಿಳಿ ಹೇಳುವುದು ಸೂಕ್ತ.

ಅಂಗಡಿಗಳಲ್ಲಿ ದುಬಾರಿ ಬೆಲೆ ತೆತ್ತು ಹೆಚ್ಚು ಪೌಷ್ಟಿಕಾಂಶ ಇಲ್ಲದ, ಕೊಬ್ಬಿನಾಂಶ ಹೆಚ್ಚಾಗಿರುವ ಪದಾರ್ಥಗಳನ್ನು ಮಕ್ಕಳಿಗೆ



ಕೊಡಿಸುವ ಬದಲು ಮನೆಯಲ್ಲೇ ತಯಾರಿಸಿದ ಪೌಷ್ಟಿಕ ಆಹಾರಗಳನ್ನು ಮಕ್ಕಳಿಗೆ ಕೊಡುವ ಅಭ್ಯಾಸ ಬಹಳ ಒಳ್ಳೆಯದು. ಇದು ಪ್ರತಿಯೊಬ್ಬ ತಂದೆ, ತಾಯಿಯೂ ಪಾಲಿಸಬೇಕಾದ ಮೊದಲ ಕರ್ತವ್ಯ. ಮನೆಯಲ್ಲೇ ಮಕ್ಕಳಿಗೆ ರುಚಿ, ಶುಚಿಯಾಗಿ ತಿಂಡಿ, ಅಡಿಗೆ ಮಾಡಿ ಕೊಟ್ಟರೆ ಹೊರಗಡೆ ಕುರುಕಲು ತಿಂಡಿಗಳನ್ನು ಬಾಯಾಡಿಸುವ ಚಪಲ ಮಕ್ಕಳಲ್ಲಿ ತಾನಾಗಿಯೇ ಕಡಿಮೆಯಾಗುತ್ತದೆ.

ಬೆಳೆಯುವ ಮಕ್ಕಳಿಗೆ ಕಾರ್ಬೋಹೈಡ್ರೇಟ್, ಪ್ರೊಟೀನ್ (ಸಸಾರಜನಕ) ಕೊಬ್ಬಿನಾಂಶ, ಕಬ್ಬಿಣ, ಕ್ಯಾಲ್ಷಿಯಂ, ಎ, ಬಿ, ಸಿ, ಡಿ ಅನ್ನಾಂಗಗಳು ಸೂಕ್ತ ಪ್ರಮಾಣದಲ್ಲಿ ಇರಲೇಬೇಕು. ಮಕ್ಕಳಿಗೆ ಅನ್ನ, ಚಪಾತಿ, ರೊಟ್ಟಿ ಮುಂತಾದ ಪದಾರ್ಥದೊಂದಿಗೆ ಕಡ್ಡಾಯವಾಗಿ ತರಕಾರಿಗಳನ್ನು ತಿನ್ನುವ ಅಭ್ಯಾಸ ಮಾಡಿಸಬೇಕು. ಒಂದು ವರ್ಷದೊಳಗಿನ ಮಗುವಿಗೆ ಬೇಯಿಸಿದ, ಉಪ್ಪು ಹಾಕಿದ ತರಕಾರಿ ಕೊಡಬಹುದು. ಬೇಳೆಯ ರಸ ಕುಡಿಸಬಹುದು. ಮಕ್ಕಳ ಆಹಾರದಲ್ಲಿ ದಿನನಿತ್ಯ ಕನಿಷ್ಠ ಪಕ್ಷ ಎರಡು ಬಗೆಯ ತರಕಾರಿ, ಒಂದು ಬಗೆಯ ಹಣ್ಣು, ಎರಡು ಲೋಟ ಹಾಲು ಸೇರಿರಲೇಬೇಕು.

ಮಕ್ಕಳ ರುಚಿಯಲ್ಲಿ ವೈವಿಧ್ಯವಿರುತ್ತವೆ. ಕೆಲವು ಮಕ್ಕಳಿಗೆ ಸಿಹಿ ಇಷ್ಟವಾದರೆ ಕೆಲವರಿಗೆ ಉಪ್ಪು, ಹುಳಿಯ ಪದಾರ್ಥ ಇಷ್ಟವಾಗಿರುತ್ತದೆ. ಮಕ್ಕಳು ಬಾಯಿ ತುಂಬಾ ಸಿಹಿ ತಿಂದರೆ ನೋಡಲು ನಮಗೂ ಸಂತೋಷವೇ! ಆದರೆ ಅತಿ ಸೇವನೆಯಿಂದ ಮಕ್ಕಳ ಹಲ್ಲುಗಳು ಬೇಗನೆ ಹುಳುಕಾಗುತ್ತವೆ. ಹೊಟ್ಟೆಯಲ್ಲಿ ಹುಳುಗಳು ಬರುವ ಸಂಭವ ಹೆಚ್ಚು. ಅಜೀರ್ಣವಾಗುವ ಸಾಧ್ಯತೆಯೂ ಜಾಸ್ತಿ. ಎಲ್ಲಕ್ಕಿಂತ ಹೆಚ್ಚಾಗಿ ಸಿಹಿ ಜಾಸ್ತಿ ತಿಂದರೆ ಮಕ್ಕಳಲ್ಲಿ ಲವಲವಿಕೆ ಮಾಯವಾಗಿ ಒಂದು ಬಗೆಯ ಜಡತೆ, ಸೋಮಾರಿತನ ಉಂಟಾಗುತ್ತದೆ. ಇದರಿಂದ ಮಕ್ಕಳು ಶಾಲೆಯ ಪಾಠಗಳಲ್ಲಿ ಹಿಂದುಳಿಯಬಹುದು.

ಹಾಗಾದರೆ ಮಕ್ಕಳಿಗೆ ಸಿಹಿತಿಂಡಿಯೇ ಕೊಡಬಾರದೆಂದು ಯೋಚಿಸುತ್ತೀರಾ? ಖಂಡಿತಾ ತಪ್ಪು. ಮಕ್ಕಳ ದೇಹಕ್ಕೆ ಸಕ್ಕರೆ ಅಂಶವೂ ಅಗತ್ಯ. ಸಕ್ಕರೆ ಅಂಶ ಕಡಿಮೆಯಾದರೆ ದೇಹಕ್ಕೆ ಬೇಗನೇ ಆಯಾಸವಾಗುತ್ತದೆ. ಆದುದರಿಂದ ಮಕ್ಕಳ ಆರೋಗ್ಯದಲ್ಲಿ ಸಮತೋಲನ ತರಲು ತಂದೆ, ತಾಯಿ

ನಯವಾದ ಮಾತುಗಳಿಂದ ಮಕ್ಕಳಿಗೆ ಸಿಹಿ ತಿಂಡಿಗಳು ದೇಹಕ್ಕೆ ಉಂಟು ಮಾಡುವ ದುಷ್ಪರಿಣಾಮಗಳ ಬಗ್ಗೆ ವಿವರಿಸಬೇಕು. ಮಕ್ಕಳಿಗೆ ಹಾಲು, ಹಣ್ಣಿನರಸಗಳಲ್ಲಿ ಮಾತ್ರ ಸಕ್ಕರೆ ಬೆರೆಸಿಕೊಡಿ. ಪ್ರತಿದಿನ ಸಿಹಿ ತಿಂಡಿ ಮಾಡಲು ಹೋಗಬೇಡಿ. ನಿಮ್ಮ ಮಕ್ಕಳಿಗೆ ಸಿಹಿ ತುಂಬಾ ಪ್ರಿಯವಾದರೆ ಸಕ್ಕರೆಗಿಂತ ಬೆಲ್ಲದ ತಿಂಡಿಗಳನ್ನು ತಯಾರಿಸಿ. ಬೆಲ್ಲದಲ್ಲಿ ಕಬ್ಬಿಣಾಂಶವಿರುತ್ತದೆ. ಎರಡು, ಮೂರು ಬಗೆಯ ಹಣ್ಣುಗಳನ್ನು ಆಕರ್ಷಕವಾಗಿ ಕತ್ತರಿಸಿಟ್ಟು, ಅವುಗಳಿಗೆ ತಿಳಿಜೇನು ಸವರಿ ಕೊಡಿ. ಶುದ್ಧವಾದ ಹಣ್ಣಿನ ರಸ ಕುಡಿಯಲು ಉತ್ತೇಜಿಸಿ. ಅಂಗಡಿಗಳಲ್ಲಿ ಲಭ್ಯವಿರುವ ಸಾಫ್ಟ್‌ಡ್ರಿಂಕ್ಸ್, ಐಸ್‌ಕ್ರೀಂಗಳನ್ನು ಆದಷ್ಟು ಕಡಿಮೆ ಪ್ರಮಾಣದಲ್ಲಿ ಕೊಡಿಸಿ.

ಮಕ್ಕಳ ಆರೋಗ್ಯಕ್ಕೆ ಸಿಹಿ ಎಷ್ಟು ಮಾರಕವೋ ಉಪ್ಪು, ಖಾರ, ಹುಳಿ ಹೆಚ್ಚಾದರೂ ಒಳ್ಳೆಯದಲ್ಲ. ಕೆಲವರಿಗೆ ಮಾಡಿದ ಅಡಿಗೆಯ ಮೇಲೆ ಚಿಟಿಕೆಯಷ್ಟಾದರೂ ಉಪ್ಪು ಚಿಮುಕಿಸಿ ಕೊಳ್ಳುವ ಅಭ್ಯಾಸ ಉಂಟು. ಇಂಥ ಅಭ್ಯಾಸ ನಿಮ್ಮ ಮಕ್ಕಳಿಗಿದ್ದರೆ ಅದನ್ನು ಮೊಳಕೆಯಲ್ಲೇ ಚಿವುಟಬೇಕು. ಉಪ್ಪು ಬದಲಾಗಿ ನಿಂಬೆರಸ ಹಿಂಡಿಕೊಂಡು ಆಹಾರ ಸೇವಿಸಬಹುದು. ಮಕ್ಕಳ ಅಡಿಗೆಯಲ್ಲಿ ಹೆಚ್ಚು ಮಸಾಲೆ ಪದಾರ್ಥಗಳನ್ನು, ತೆಂಗಿನಕಾಯಿಯನ್ನು ಸೇರಿಸಿ ತಯಾರು ಮಾಡಬೇಡಿ. ಉಪ್ಪು, ಖಾರ ಸಮಪ್ರಮಾಣದಲ್ಲಿ, ತಿಳಿಯಾಗಿದ್ದು ಸ್ವಾದಿಷ್ಟವಾಗಿರಲಿ. ನಿಮ್ಮ ಮಕ್ಕಳಿಗೆ ಆಗಾಗ ತಿಂಡಿಗಳನ್ನು ಕುರುಕಲು ಇಷ್ಟವಿದ್ದರೆ ಎಣ್ಣೆಯಲ್ಲಿ ಕರಿದ ಪದಾರ್ಥಗಳನ್ನು ಮಾತ್ರ ಕೊಡಬೇಡಿ. ಕಡಲೇಪುರಿ (ಮಂಡಾಳು) ಅವಲಕ್ಕಿ ಮುಂತಾದ ತಿನಿಸುಗಳನ್ನು ಒಗ್ಗರಣೆ ಹಾಕಿ ಕೊಡಿ. ಹೆಸರುಕಾಳು ಹಲಸಂದಿಕಾಳುಗಳನ್ನು ನೆನೆಸಿ, ಮೊಳಕೆಯೊಡೆದ ಮೇಲೆ ಉಪ್ಪು, ಖಾರದೊಂದಗೆ ತಿನ್ನಲು ಕೊಡಿ. ಹಸಿ ತರಕಾರಿಗಳನ್ನು ಸಣ್ಣಗೆ ಹೆಚ್ಚಿ ಮಕ್ಕಳಿಗೆ ತಿನ್ನಿಸಬಹುದು. ಇದರಿಂದ ಮಕ್ಕಳಲ್ಲಿ ಉಂಟಾಗುವ ಮಲಬದ್ಧತೆ ತಡೆಯಬಹುದು.

ನೀವು ಮಾಂಸಾಹಾರಿಯಾಗಿದ್ದರೆ ಮಕ್ಕಳಿಗೆ ಬೇಯಿಸಿದ ಮಾಂಸ ಕೊಡುವುದು ಒಳ್ಳೆಯದು. ಕೋಳಿ ಮಾಂಸಕ್ಕಿಂತ ಕುರಿಮಾಂಸ, ಮೀನು, ಏಡಿಗಳಲ್ಲಿ ಕೊಬ್ಬಿನಾಂಶ ಕಡಿಮೆಯಿರುತ್ತದೆ. ಮಕ್ಕಳಿಗೆ ಕುರಿಮಾಂಸ, ಮೀನು ಒಳ್ಳೆಯದು. ಇದಕ್ಕೆ 'lean meat' ಎನ್ನುತ್ತಾರೆ. ಹಂದಿಮಾಂಸವನ್ನು ಮಕ್ಕಳಿಗೆ ಕೊಡಬಾರದು. ಇದರಿಂದ ಮಕ್ಕಳ ಕರುಳಿಗೆ ಹುಳು (Tape worm) ಬರುವ ಸಾಧ್ಯತೆ ಹೆಚ್ಚು ಪ್ರತಿದಿನ ಮೊಟ್ಟೆಯನ್ನು ಬೇಯಿಸಿ ಕೊಡಬಹುದು. ಆದರೆ ಕೆಲವು ಮಕ್ಕಳಿಗೆ ಮೊಟ್ಟೆಯ ಬಿಳಿಯ ಭಾಗ ಅಲರ್ಜಿಯಾಗುವ ಸಂಭವ ಇರುತ್ತದೆ. ಆದುದರಿಂದ ಮಕ್ಕಳಿಗೆ ಎರಡು ವರ್ಷ ತುಂಬುವವರೆಗೆ ಮೊಟ್ಟೆಯ ಹಳದಿ ಭಾಗ ಮಾತ್ರ ಕೊಡುವುದೇ ಸೂಕ್ತ.

ಮಕ್ಕಳಿಗೆ ಸಾಮಾನ್ಯವಾಗಿ ತಾವೇ ಕುಳಿತು ತಿನ್ನಲು ಅವಕಾಶ ಕೊಡಬೇಕು. ಮಗುವಿಗೆ ಎರಡು ವರ್ಷ ತುಂಬಿದ ಕೂಡಲೇ ಎಲ್ಲರೊಡನೆ ತಟ್ಟೆ ಹಾಕಿ ಬಡಿಸಿ. ತಾಯಂದಿರ ಕೈಗಳಲ್ಲಿ ತಿನ್ನುವುದಕ್ಕಿಂತ ಮಕ್ಕಳು ತಾವು ತಿನ್ನುವುದರಲ್ಲೇ ಹೆಚ್ಚಾಗಿ ಆಹಾರ ಸವಿಯುತ್ತಾರೆ. ಜೊತೆಗೆ ಗುಂಪಿನಲ್ಲಿ ತಿನ್ನಲು ಪಾಲಿಸಬೇಕಾದ ನಿಯಮಗಳನ್ನು (table manners) ತಪ್ಪದೇ ಹೇಳಿಕೊಡಿ.

ಮಕ್ಕಳು ಹೆಚ್ಚಾಗಿ ತಿನ್ನುವುದು ತಪ್ಪೆಂದು ತಿಳಿದಾಯಿತು. ಆದರೆ ಮಕ್ಕಳಲ್ಲಿ ಅಪೌಷ್ಟಿಕತೆ, ಸರಿಯಾಗಿ ಆಹಾರ ಸೇವಿಸದಿರುವುದು ಒಳ್ಳೆಯದಲ್ಲ. ಇದರಿಂದ ಮಕ್ಕಳ ಬೆಳವಣಿಗೆ ಕುಂಠಿತವಾಗಿ ಹಲವು ಬಗೆಯ ರೋಗಗಳಿಗೆ ದಾರಿ ಮಾಡಿಕೊಡಬಹುದು.

ನಿಮ್ಮ ಮಕ್ಕಳಿಗೆ ಹತ್ತು ವರ್ಷ ತುಂಬುವವರೆಗೂ ಪ್ರತಿದಿನ ನಾಲ್ಕು ಬಾರಿ ಘನ ಆಹಾರವನ್ನೂ, ಎರಡು ಬಾರಿ ಹಾಲು ಅಥವಾ ಇತರ ಪೇಯಗಳನ್ನೂ ತಪ್ಪದೇ ಕೊಡಿ. ನಿಮ್ಮ ಮಕ್ಕಳು ಬೇಸಿಗೆಯಿರಲಿ, ಚಳಿಗಾಲವಿರಲಿ ದಿನಕ್ಕೆ ಸುಮಾರು ಹತ್ತು ಲೋಟ ನೀರನ್ನು ಕುಡಿಯುವಂತೆ ನೋಡಿಕೊಳ್ಳಿ. ಇದರಿಂದ ಮೂತ್ರಪಿಂಡಗಳು ಸರಿಯಾಗಿ ಕೆಲಸ ಮಾಡುತ್ತವೆ. ಮಕ್ಕಳು ನೀರು ಹೆಚ್ಚಾಗಿ ಕುಡಿಯುವುದರಿಂದ ಶೀತ, ನೆಗಡಿ ಹೆಚ್ಚಾಗುತ್ತದೆ ಎಂಬ ಮೂಢನಂಬಿಕೆ ಕೆಲವರಿಗೆ ಇರುತ್ತದೆ. ಇದು ತಪ್ಪು.

ಮಕ್ಕಳಿಗೆ ಸಂಜೆಯ ವೇಳೆಯಲ್ಲಿ ಆಟವಾಡಲು ಮುಕ್ತ ಅವಕಾಶ ನೀಡಿ. ಇದರಿಂದ ಅವರ ಸ್ನಾಯುಗಳಿಗೆ ವ್ಯಾಯಾಮವಾಗಿ ದೇಹದಲ್ಲಿ ಅನಾವಶ್ಯಕ ಕೊಬ್ಬು ಶೇಖರವಾಗುವುದಿಲ್ಲ. ಆಟದ ಜೊತೆಯಲ್ಲಿ ಅನುಕೂಲವಿದ್ದವರು ಈಜು, ಕ್ರಿಕೆಟ್, ಯೋಗಾಭ್ಯಾಸ, ನೃತ್ಯಾಭ್ಯಾಸ ಮುಂತಾದ ಹವ್ಯಾಸಗಳನ್ನು ಮಕ್ಕಳಲ್ಲಿ ಉತ್ತೇಜಿಸಿ ಬೆಳೆಸಬಹುದು.

ಸಮತೋಲನ ಆಹಾರ, ಸೂಕ್ತ ವ್ಯಾಯಾಮ ಎಲ್ಲಕ್ಕಿಂತ ಹೆಚ್ಚಾಗಿ ತಂದೆ, ತಾಯಿಯರ ಮಾರ್ಗದರ್ಶನ, ಪ್ರೀತಿ, ವಿಶ್ವಾಸ ದೊರೆತರೆ ನಿಮ್ಮ ಮಕ್ಕಳು ಈ ದೇಶದ ಹೆಮ್ಮೆಯ ಪ್ರಜೆಯಾಗುವುದರಲ್ಲಿ ಸಂದೇಹವೇ ಇಲ್ಲ.



# ಇಗೋ ಇದು ನೂತನ ಬಾಗಲಕೋಟೆ ಜಿಲ್ಲೆ

- ನೂತನ ಬಾಗಲಕೋಟೆ ಜಿಲ್ಲೆಯ ಸಂಸ್ಕೃತಿ ಮತ್ತು ಸಾಹಿತ್ಯ ಸರ್ವರ ಮನ್ನಣೆಗೆ ಪಾತ್ರವಾದುದು.
- ವಿಶ್ವ ಪರಂಪರೆಯ ಸ್ಮಾರಕಗಳ ಸಾಲನ್ನು ಸೇರಿದ ಪಟ್ಟದಕಲ್ಲು - ಬಾದಾಮಿ-ಐಹೊಳೆಯ ಶಿಲ್ಪಕಲೆ ಅಗಾಧವಾದುದು.
- ಸಕ್ಕರೆಯ ನಾಡು ಆದ ಮುಧೋಳ ೧೦ನೇ ಶತಮಾನದ ಕವಿ ಚಕ್ರವರ್ತಿ 'ರನ್ನ'ನ ಜನ್ಮಭೂಮಿ.
- ಹಿಂದು-ಮುಸ್ಲಿಮ್ ಸಂಸ್ಕೃತಿಗಳ ಸಂಗಮವಾದ ಕಲಾದಗಿಯ ಶ್ರೀ ಗುರುಲಿಂಗೇಶ್ವರ ಮಠವು ಸುಮಾರು ೪೦೦ ವರ್ಷ ಪ್ರಾಚೀನವಾದುದು.
- ಚಾಲುಕ್ಯರ ಸಾಂಸ್ಕೃತಿಕ ರಾಜಧಾನಿಯಾಗಿ ಮೆರೆದ ಊರು ಪಟ್ಟದಕಲ್ಲು.
- ಭಕ್ತಿಪಂಥದ ಶ್ರೇಷ್ಠ ದಾಸರೆನಿಸಿದ ಶ್ರೀ ಪ್ರಸನ್ನ ವೆಂಕಟದಾಸರು ಬಾಗಲಕೋಟೆಯವರು.
- ಹೂ-ಹಣ್ಣುಗಳಿಗೆ ಹೆಸರಾದ ಕಲಾದಗಿ ಹಿಂದೆ ಆಂಗ್ಲರ ಆಳ್ವಿಕೆಯಲ್ಲಿ ೧೮೬೪ ರಿಂದ ೧೮೮೪ರ ವರೆಗೆ ಜಿಲ್ಲೆಯಾಗಿ ಮೆರೆದಿದೆ.
- ಸುಮಾರು ನೂರು ವರ್ಷಕ್ಕಿಂತಲೂ ಹೆಚ್ಚು ಆಯುಷ್ಯ ಹೊಂದುವ ವರ್ಣ ಬರಹಗಳ ಬೋರ್ಡ್ ತಯಾರಿಕೆಯ ಘಟಕ 'ವಾಸುದೇವ ಎನಾಮಲ್ ಇಂಡಸ್ಟ್ರೀಜ್' ಬಾಗಲಕೋಟೆಯಲ್ಲಿದೆ.
- ಜಗಜ್ಯೋತಿ ಬಸವೇಶ್ವರ, ಚನ್ನಬಸವಣ್ಣ ಹಾಗೂ ಅಕ್ಕನಾಗಮ್ಮ ಇವರು ೧೨ನೇ ಶತಮಾನದಲ್ಲಿ ಜಾತವೇದ ಮುನಿಗಳು ಸ್ಥಾಪಿಸಿದ ವಿದ್ಯಾಕೇಂದ್ರದಲ್ಲಿ ವಿದ್ಯಾರ್ಜನೆ ಮಾಡಿದ್ದು ಕೂಡಲ ಸಂಗಮದಲ್ಲಿ.
- ಜಮಖಂಡಿಯು ಮರಾಠಿ ಪಟವರ್ಧನ ವಂಶಸ್ಥರ ಸಂಸ್ಥಾನದ ರಾಜಧಾನಿಯಾಗಿತ್ತು.
- ದೇಶದಲ್ಲಿಯೇ ವಿಶಿಷ್ಟ ರೀತಿಯಲ್ಲಿ ಆಚರಿಸಲ್ಪಡುವ ಬಾಗಲಕೋಟೆಯ 'ರಂಗು ರಂಗಿನ ಹೋಳಿ' ದಕ್ಷಿಣ ಭಾರತದಲ್ಲಿಯೇ ಮೊದಲನೆಯದು.
- ೧೯೦೬ ರಲ್ಲಿ ಬೀಳೂರು ಮಹಾಸ್ವಾಮಿಗಳು ಸ್ಥಾಪಿಸಿದ ಬಾಗಲಕೋಟೆಯ 'ಬಸವೇಶ್ವರ ವಿದ್ಯಾವರ್ಧಕ ಸಂಘ' ಶತಮಾನೋತ್ಸವದ ಬಾಗಿಲಲ್ಲಿದೆ.
- ಡಾ॥ನಾ.ಸು. ಹರ್ಡಿಕರ ಸ್ಥಾಪಿಸಿದ 'ಹಿಂದುಸ್ತಾನಿ ಸೇವಾದಳ'ದಲ್ಲಿ ಸುಖದೇವ ಭಗತ್‌ಸಿಂಗ್, ರಾಜಗುರು ಇವರು ಆಗಮಿಸಿ ಸ್ವತಂತ್ರಯೋಧರನ್ನು ತರಬೇತಿಗೊಳಿಸಿದ ಸ್ಥಳ ಬಾಗಲಕೋಟೆ.
- ಭಾರತದಲ್ಲಿ ಪ್ರಪ್ರಥಮವಾಗಿ ಶಿಲೆಗಳಲ್ಲಿ ಗೊಮ್ಮಟ ಮೂರ್ತಿಯನ್ನು ಕಟೆದು ನಿಲ್ಲಿಸಿದ್ದು ಬಾಗಲಕೋಟೆ ತಾಲೂಕಿನ ಹಳ್ಳೂರ ಗ್ರಾಮದ ದಿಬ್ಬದ ಮೇಲಿರುವ ಬಸದಿಯಲ್ಲಿ.
- ಕನ್ನಡದಲ್ಲಿ ಪ್ರಪ್ರಥಮವಾಗಿ ಸಣ್ಣ ಕಥೆಗಳನ್ನು ಬರೆದು ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ಪ್ರಕಾರವನ್ನು ಕೊಟ್ಟ ಖ್ಯಾತ ಕಥೆಗಾರರಾದ ದಿ.ಕೆರೂರು ವಾಸುದೇವಾಚಾರ್ಯರು ಬಾಗಲಕೋಟೆಯವರು.
- ಬಾಗಲಕೋಟೆ ಜಿಲ್ಲೆ ಕಲಾವಿದರ, ಸಂಗೀತಕಾರರ, ಶಿಲ್ಪಕಲಾವಿದರ, ಕ್ರೀಡಾಪಟುಗಳ, ಸಾಹಿತಿಗಳ, ಶಿಕ್ಷಣತಜ್ಞರ ಮುಂತಾದವರ ಬೀಡಾಗಿದೆ.

ಸಂಗ್ರಹ : ಸಿದ್ಧರಾಜ್ ಕೆಂಧೂಳಿ, ಬಾಗಲಕೋಟೆ

# ಮನೆಯೊಳಗೇ ಅಡಗಿದ ಮಾಲಿನ್ಯ!

**ಪರಿಸರ ಮಾಲಿನ್ಯದ ವಿಷಯ ಬಂದಾಗ ನಾವೆಲ್ಲ ವಾಹನಗಳಿಂದ ಹೊರಬರುವ ಹೊಗೆ, ಕಾರ್ಖಾನೆಗಳ ತ್ಯಾಜ್ಯವಸ್ತುಗಳ ಬಗ್ಗೆ ಹೇಳುತ್ತೇವೆ. ಆದರೆ, ನಮ್ಮ ಮನೆಯೊಳಗೆ ಅಡಗಿರುವ 'ಪರಿಸರ ಮಾಲಿನ್ಯ'ದ ಕುರಿತು ನಾವು ಅರಿತುಕೊಂಡಿಲ್ಲ!**

○ ನಾರಾಯಣ ಎಂ. ಭಟ್
ಮನೆ ನಂ. ೧೪೪೪, ೪ನೇ ಮೇನ್, ಆಂಜನೇಯ ನಗರ,
ಬಿ.ಎಸ್.ಕೆ. ೩ನೇ ಸ್ಟೇಜ್, ಬೆಂಗಳೂರು - ೫೬೦ ೦೮೫.

ಪರಿಸರ ಮಾಲಿನ್ಯದ ವಿಷಯ ಬಂದಾಗ ನಾವೆಲ್ಲ ವಾಹನಗಳಿಂದ ಹೊರಬರುವ ಹೊಗೆ, ಕಾರ್ಖಾನೆಗಳ ತ್ಯಾಜ್ಯವಸ್ತುಗಳ ಬಗ್ಗೆ ಹೇಳುತ್ತೇವೆ. ಆದರೆ, ನಮ್ಮ ಮನೆಯೊಳಗೆ ಅಡಗಿರುವ 'ಪರಿಸರ ಮಾಲಿನ್ಯ'ದ ಕುರಿತು ನಾವು ಅರಿತುಕೊಂಡಿಲ್ಲ.

ನಾವೆಲ್ಲ ಮನೆಯನ್ನು ಸುಂದರವಾಗಿಟ್ಟುಕೊಳ್ಳಲು ಅಲ್ಲಿನ ಪರಿಸರವನ್ನು ಚೆಂದವಾಗಿಸಲು ಸಾಕಷ್ಟು ಯತ್ನಿಸುತ್ತೇವೆ. ಗೋಡೆಗಳಿಗೆ ಆಕರ್ಷಕ 'ಪೇಂಟ್' ಹಚ್ಚುತ್ತೇವೆ; ಸೊಗಸಾದ ಪರದೆಗಳನ್ನು ತೂಗಿಬಿಡುತ್ತೇವೆ; ಮೇಜು, ಕುರ್ಚಿಗಳಿಗೆ 'ಪ್ಲೈವುಡ್' ಪಾರ್ಟಿಕಲ್ ಬೋರ್ಡ್ ಮುಂತಾದ ಶೀಟುಗಳಿಂದ ಅಲಂಕಾರ ಮಾಡಿಸುತ್ತೇವೆ. 'ನೆಲ' ಚಕಾಚಕ್ ಹೊಳೆಯುವಂತಿರಲು ಮಾರ್ಕೆಟ್‌ನಲ್ಲಿ ಹೊಸದಾಗಿ ಬಿಡುಗಡೆಯಾದ ನೂತನ 'ಡಿಸ್ ಇನ್‌ಫೆಕ್ಟಂಟ್'ನ್ನು (Disinfectant) ಸುರಿಯುತ್ತೇವೆ. ಒಳಗಿನ ಪರಿಸರ ಸುಗಂಧಿತವಾಗಿರಲು 'ರೂಮ್ ಫ್ರೆಶ್‌ನರ್' (Room freshner) ಹಾಗೂ 'ಸೇಂಟೆಡ್ ಸ್ಪ್ರೇ' (Scented Spray) ಯನ್ನು ಪಸರಿಸುತ್ತೇವೆ. ಹೀಗೆ ಮಾರ್ಕೆಟ್‌ನಲ್ಲಿ ಲಭ್ಯವಿರುವ ಎಲ್ಲರೀತಿಯ ವಸ್ತುಗಳನ್ನು ತಂದು ಮನೆಯ ಪರಿಸರವನ್ನು ಸುಂದರವಾಗಿಸಲು ಪ್ರಯತ್ನಿಸುತ್ತೇವೆ. ಆದರೆ ವಿಪರ್ಯಾಸವೆಂದರೆ, ಈ ವಸ್ತುಗಳೇ ಮನೆಯೊಳಗಿನ ಪರಿಸರವನ್ನು ಮಲಿನಗೊಳಿಸುತ್ತವೆ!

ಹೊರಗಿನ ಮಾಲಿನ್ಯವನ್ನು ಸುಲಭವಾಗಿ ಪತ್ತೆಹಚ್ಚಬಹುದು. ಆದರೆ ಮನೆಯೊಳಗಿನ ಪರಿಸರ ಮಾಲಿನ್ಯ ಕಣ್ಣಿಗೆ ಕಾಣದು ಮತ್ತು ಅದನ್ನು ಪತ್ತೆಹಚ್ಚುವುದು ಕಷ್ಟವೇ. ಅಷ್ಟೇಅಲ್ಲ, ಈ ಮಾಲಿನ್ಯದಿಂದ ಉಂಟಾಗುವ ದುಷ್ಪರಿಣಾಮಗಳು ತೀರಾ ನಿಧಾನವಾಗಿದ್ದು, ಸಾಮಾನ್ಯವಾಗಿ ಅದನ್ನು ನಾವು ನಿರ್ಲಕ್ಷಿಸಿ ಬಿಡುತ್ತೇವೆ.

ಈ 'ಸ್ಪ್ರೇ'ಗಳು, ಕ್ರಿಮಿನಾಶಕಗಳು, ಪೇಂಟ್ ಮತ್ತು ಫ್ರೆಶನರ್‌ಗಳ ಬಗ್ಗೆ ನಮಗೆಷ್ಟು ಗೊತ್ತು? ಉದಾಹರಣೆಗೆ ಮೇಜು, ಕುರ್ಚಿ, ಕಪಾಟು ಮುಂತಾದವುಗಳಿಗೆ ಹೊದಿಸುವ ರಂಗುರಂಗಿನ ಶೀಟುಗಳನ್ನು ಅಂಟಿಸುವ 'ಗೋಂದು'ಗಳಲ್ಲಿ 'ಫಾರ್ಮಾಲ್ಡಿಹೈಡ್' (Formaldehyde) ಎಂಬ ರಾಸಾಯನಿಕವಿದ್ದು, ಇದು ನಿಧಾನವಾಗಿ ಅವುಗಳಿಂದ ಸೋರಿಕೆಯಾಗಿ ರೂಮಿನ ತುಂಬಾ ಹರಡಿ ನಮ್ಮ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುತ್ತದೆ ಎನ್ನುವುದು ನಮಗೆ ಗೊತ್ತೇ? ಅಥವಾ 'ಬಾತ್‌ರೂಮಿ'ನ ಅಂದವಾದ ಟೈಲ್ಸ್ (Tiles)ಗಳಲ್ಲಿ ಬೆಳೆಯುವ ಬೂಷ್ಟ್ (Boost)ನಿಂದ ಅಲರ್ಜಿ, ಅಸ್ತಮದಂತಹ ಕಾಯಲೆಗಳು ಉಲ್ಬಣಗೊಳ್ಳುವವು ಎಂದು ನಮಗೆ ತಿಳಿದಿದೆಯೇ? ಇಲ್ಲವೇ, ನಾವು ಪುಸ್‌ಪುಸ್ ಎಂದು 'ಸೇಂಟ್'ನ್ನು ಸಿಂಪಡಿಸಿಕೊಂಡಾಗ ವಾಯುಮಂಡಲದ 'ಓಜೋನ್ ಪದರ'ದ 'ತೂತು' ಇನ್ನಷ್ಟು ದೊಡ್ಡದಾಗುತ್ತದೆ ಎಂಬ ಅರಿವು ನಮಗಿದೆಯೇ? ಬಹುಶಃ ಇಲ್ಲ.

ಇಂದು ಮಾನವ 'ಹೊರ ಪರಿಸರ ಮಾಲಿನ್ಯ'ದ ಜೊತೆ 'ಒಳಪರಿಸರಮಾಲಿನ್ಯ'ದ ವಿಷಜಾಲದಲ್ಲಿ ಸಿಕ್ಕು ಒದ್ದಾಡುತ್ತಿದ್ದಾನೆ. ಈ ಜಾಲದಿಂದ ಹೊರಬರಲು ಮೊದಲಿಗೆ ನಾವು 'ಮಾಲಿನ್ಯಕಾರಕ' ವಸ್ತುಗಳ ಬಗ್ಗೆ ತಿಳಿಯಬೇಕಾದ್ದು ಅವಶ್ಯ.

ಬನ್ನಿ, ಈಗ ನಮ್ಮ ಮನೆಯೊಳಗಿನ



ಮಾಲಿನ್ಯ ನಿವಾರಕ ಹಸಿರು ಹೂಕುಂಡಗಳು

ಪ್ರತಿಯೊಂದು ಕೋಣೆಯನ್ನು ಹೊಕ್ಕು ಅಲ್ಲಿರುವ ಮಾಲಿನ್ಯಕಾರಕ ವಸ್ತುಗಳ ಪಟ್ಟಿ ಮಾಡೋಣ.

## ಡ್ರಾಯಿಂಗ್ ರೂಮ್

ಹೊಸದಾಗಿ ಕಟ್ಟಿದ ಮನೆಯ ಡ್ರಾಯಿಂಗ್‌ರೂಮಿನಲ್ಲಿ ಒಂದು ರೀತಿಯ 'ತೀಕ್ಷ್ಣ ಘಾಟು' ಮೂಗಿಗೆ ಬಡಿಯುತ್ತದೆ. ಅಲ್ಲಿನ ಕುರ್ಚಿ, ಮೇಜು ಹೊಸ ಪರದೆ, ನೆಲಗಂಬಳಿ, ಕಪಾಟು ಮುಂತಾದವುಗಳಿಂದ ಹೊರಬರುತ್ತಿರುವ 'ಫಾರ್ಮಾಲ್ಡಿಹೈಡ್' ಎಂಬ ರಾಸಾಯನಿಕವೇ ಇದಕ್ಕೆ ಕಾರಣ. ಇದು ರೂಮಿನ ತುಂಬೆಲ್ಲಾ ಪಸರಿಸುತ್ತದೆ. ಇದರ ಪ್ರಮಾಣ ಅಲ್ಲಿನ ವಾತಾವರಣದಲ್ಲಿ ಮಿತಿಮೀರಿದಾಗ ಕಣ್ಣು ಶುಷ್ಕಗೊಳ್ಳುವುದು, ಹುಣ್ಣಾಗುವುದು, ತಲೆನೋವು, ತಲೆಸುತ್ತು, ಗಂಟಲಲ್ಲಿ ಕೆರೆತ, ಸುಸ್ತು, ವಾಕರಿಕೆ ಮುಂತಾದ ಪರಿಣಾಮಗಳನ್ನು ಅನುಭವಿಸಬೇಕಾಗುತ್ತದೆ. ಬಿಸಿಲು ಮತ್ತು ಆರ್ದ್ರತೆ ಹೆಚ್ಚಿರುವ 'ಹವಾಮಾನ' ಪ್ರದೇಶಗಳಲ್ಲಿ ಈ ರಾಸಾಯನಿಕ ಇನ್ನಷ್ಟು ಭೀಕರ ಪರಿಣಾಮಗಳನ್ನು ಉಂಟು ಮಾಡಬಲ್ಲದು. ಏಕೆಂದರೆ ಇಂತಹ ಹವಾಮಾನಗಳಲ್ಲಿ 'ಫಾರ್ಮಲ್ಡಿಹೈಡ್'ನ ಬಿಡುಗಡೆ ಹೆಚ್ಚು ಪ್ರಮಾಣದಲ್ಲಿ ಆಗುತ್ತದೆ.

ಅಮೆರಿಕದಲ್ಲಿ ನಡೆಸಿದ ವೈಜ್ಞಾನಿಕ ಪರೀಕ್ಷೆಗಳಿಂದ ಈ ರಾಸಾಯನಿಕ ಪ್ರಾಣಿಗಳಲ್ಲಿ 'ಕ್ಯಾನ್ಸರ್'ನ್ನು ಉಂಟುಮಾಡಬಲ್ಲದು. ಹೀಗಾಗಿ, ಮನೆಗಳಲ್ಲಿ ನೀವು ಬಳಸುವ ಪೀಠೋಪಕರಣಗಳ ಆಯ್ಕೆಯ ಬಗ್ಗೆ ಎಚ್ಚರ ವಹಿಸಿ. ಸಾಧ್ಯವಾದಷ್ಟು ನೈಸರ್ಗಿಕ ರೂಪದಲ್ಲಿಯೇ ಅವುಗಳನ್ನು ಬಿಡಿ. ಮನೆಯ ಕಿಟಕಿ ಇತ್ಯಾದಿಗಳನ್ನು ತೆರೆದಿರುವುದು ಹಾಗೂ ವಾಯು ಸಂಚಾರಕ್ಕೆ ಉತ್ತಮ ವ್ಯವಸ್ಥೆ. ಹೊಂದುವ ಮೂಲಕ ಈ ರಾಸಾಯನಿಕದಿಂದ ತುಸುಮಟ್ಟಿಗೆ ಬಚಾವಾಗಲು ಸಾಧ್ಯ.

### ನಿಮಗಿದು ಗೊತ್ತೇ

ಇತ್ತೀಚಿನ ಅಧ್ಯಯನಗಳ ಪ್ರಕಾರ, ಪ್ರತಿಯೊಂದು ಕೋಣೆಯಲ್ಲಿ ವಾಯುವಿನ ಗುಣಮಟ್ಟ ಉತ್ತಮ ಸ್ಥಿತಿಯಲ್ಲಿರಿಸಲು ಅಲ್ಲಿರುವ ಪ್ರತಿಯೊಬ್ಬ ವ್ಯಕ್ತಿಗೆ ಪ್ರತಿಸೆಕೆಂಡಿಗೆ ೧೦ ಲೀಟರ್‌ಗಳಷ್ಟು ತಾಜಾ ಗಾಳಿ ಲಭ್ಯವಿರಬೇಕು. ಆದರೆ ನಮ್ಮಲ್ಲಿ ಇದರ ಅರ್ಧದಷ್ಟು ಸಹ ಶುದ್ಧಗಾಳಿ ಲಭ್ಯವಿಲ್ಲ (ಮುಖ್ಯವಾಗಿ ಶಹರಗಳಲ್ಲಿ).

ಗಿಡಗಳು, ಮರಗಳು ವಾಯುಮಾಲಿನ್ಯ ಹಾಗೂ ಶಬ್ದಮಾಲಿನ್ಯವನ್ನು ತಡೆಗಟ್ಟಲು, ನಿವಾರಿಸಲು ಸಶಕ್ತವಾಗಿವೆ. ಮನೆಯೊಳಗೆ ಸಸ್ಯಗಳನ್ನು ಬೆಳೆಸಿ. ದೊಡ್ಡ ಎಲೆಗಳು ವಾಯುವಿನಲ್ಲಿ ತೇಲಾಡುವ ಮಲಿನ ವಸ್ತುಗಳನ್ನು ಹೀರಿಕೊಂಡು ಗಾಳಿಯನ್ನು ಶುಭ್ರಗೊಳಿಸುತ್ತವೆ. ೧೫೦೦ ಚದರ ಅಡಿಯ ಮನೆಯೊಳಗೆ ೧೫ರಿಂದ ೨೦ಸಸ್ಯಗಳು ಸಾಕು. ಸಸ್ಯ ಕುಂಡಗಳಲ್ಲಿ ಇದ್ದಿಲು ಹಾಕಿ. ಇವು ಪ್ರದೂಷಣೆಕಾರಕಗಳನ್ನು ಹೀರಿಕೊಳ್ಳುತ್ತವೆ.

ನೀವು ಶಬ್ದ ಮಾಲಿನ್ಯದಿಂದ ಪೀಡಿತರಾಗಿದ್ದರೆ ಮನೆಯ ಸುತ್ತ ದಟ್ಟವಾಗಿ ಮರಗಿಡಗಳನ್ನು ಬೆಳೆಸಿ. ಗಿಡ-ಮರಗಳಿಗೆ ಶಬ್ದ ತರಂಗಗಳನ್ನು ಹೀರಿಕೊಳ್ಳುವ ಹಾಗೂ ಹಿಮ್ಮೆಟ್ಟಿಸುವ ಶಕ್ತಿ ಇದೆ.

ಎನ್.ಎಂ. ಬಿ.

## ಅಡುಗೆ ಮನೆ

ಆಧುನಿಕ ಮನೆಗಳು ಅತ್ಯಂತ ಸುಸಜ್ಜಿತವಾಗಿವೆ. ಹೆಚ್ಚುಕಮ್ಮಿ ಎಲ್ಲರ ಮನೆಯಲ್ಲಿಯೂ 'ಗ್ಯಾಸ್'ಇದೆ. ಪಾತ್ರೆ ತೊಳೆಯಲು 'ಬೂದಿ'ಯ ಬದಲು ನೂರಾರು 'ಕ್ಲೀನಿಂಗ್ ಪೌಡರ್'ಗಳು, ಲಿಕ್ವಿಡ್‌ಗಳು ಇಂದು ಲಭ್ಯ. ಈ ಎಲ್ಲವೂ ನಮ್ಮ ಸೌಕರ್ಯವನ್ನು ಹೆಚ್ಚಿಸುತ್ತವೆ ಎನ್ನುವುದೇನೂ ನಿಜ. ಆದರೆ, ಅವುಗಳು ಮನೆಯನ್ನು ಮಾಲಿನ್ಯಗೊಳಿಸುತ್ತವೆ ಎನ್ನುವುದೂ ಅಷ್ಟೇ ಸತ್ಯ.

'ಗ್ಯಾಸ್ ಸ್ಟೌವ್'ಗಳಿಂದ 'ಕಾರ್ಬನ್ ಮೊನೊಆಕ್ಸೈಡ್' ನೈಟ್ರೋಜನ್ ಆಕ್ಸೈಡ್‌ಗಳಂತಹ ವಿಷಾನಿಲಗಳು ಹೊರಬರುತ್ತವೆ. ಗೃಹಿಣಿಯರು ಇವುಗಳ ಒಟ್ಟಾರೆ ಪರಿಣಾಮಕ್ಕೆ ತುತ್ತಾಗುತ್ತಾರೆ. ತಲೆನೋವು, ಮೈಯಲ್ಲಿ ಸುಸ್ತು, ದೇಹದ ರೋಗ ನಿರೋಧಕತೆ ಕಮ್ಮಿಯಾಗುವುದು - ಇಂತಹ ಹಲವಾರು ದುಷ್ಪರಿಣಾಮಗಳಲ್ಲಿ ಕೆಲವು ಮಾತ್ರ.

ಪಾತ್ರೆ ಉಜ್ಜಲು, ತೊಳೆಯಲು ಬಳಸುವ ಕ್ಲೀನಿಂಗ್ ಏಜಂಟ್‌ಗಳು (Cleaning Agent), ಸಿಂಕ್ ಕ್ಲೀನರ್‌ಗಳಿಂದ (Sink Cleaner), ಕೈಗಳಿಗೆ ಹಾನಿಯಾಗಬಹುದು. ಅವುಗಳ ಸಿಂಪರಣೆಯಿಂದ ಕಣ್ಣುಗಳಲ್ಲಿ ನೀರು ಸೋರುವುದು, ಉರಿ ಉಂಟಾಗುವುದು, ಸೀನು ಮುಂತಾದವುಗಳು ದೇಹವನ್ನು ಕಾಡುತ್ತವೆ. ಅಸ್ತಮಾ, ಉಸಿರಾಟದ ತೊಂದರೆ ಮತ್ತು ಅಲರ್ಜಿಗಳಿಂದ ಪೀಡಿತರಾಗಿರುವವರಿಗೆ ಇವುಗಳ ಬಳಕೆ ಮಾರಕವಾಗಿ ಪರಿಣಮಿಸಬಹುದು.

ಅಡಿಗೆಮನೆಯಲ್ಲಿ ತೇವಾಂಶದ ಹವೆ ಶೇಖರಣೆಗೊಂಡಿರುತ್ತದೆ. ತೊಳೆಯುವುದು, ನೀರು ಚೆಲ್ಲುವುದು ಇತ್ಯಾದಿ ಕೆಲಸಗಳಿಂದ ಸಣ್ಣ ಸಣ್ಣ ಹನಿಗಳು ವಾತಾವರಣಕ್ಕೆ ಸೇರಿ ಅಲ್ಲಿನ ಗೋಡೆಗಳ ಮೇಲೆ 'ಬೂಷ್ಟು' ಬೆಳೆಯಲು ಕಾರಣವಾಗುತ್ತದೆ. ಅಂತೆಯೇ 'ಗೃಹಿಣಿ'ಯರಲ್ಲಿ 'ಬೂಷ್ಟಿ'ನ ಅಲರ್ಜಿ ಸಾಮಾನ್ಯ.

ಇವುಗಳಲ್ಲಿ ಬಹುಪಾಲಿನ ಮಾಲಿನ್ಯವನ್ನು



ಕಮ್ಮಿಗೊಳಿಸಲು ಅಡಿಗೆ ಮನೆಯಲ್ಲಿ 'ಎಗ್‌ಜಾಸ್ಟ್ ಫ್ಯಾನ್' (Exhaust fan)ಗಳನ್ನು ಅಳವಡಿಸುವುದು ಸೂಕ್ತ. ಇದು ಒಳಗಿರುವ ಅನಿಲ, ಹೊಗೆ, ಆವಿಗಳನ್ನು ಹೊರಹಾಕಿ 'ತಾಜಾ' ಗಾಳಿಯ ಸಂಚಾರಕ್ಕೆ ಅನುವು ಮಾಡಿ ಕೊಡುತ್ತದೆ. ಅಡಿಗೆ ಮಾಡುವ ಜಾಗದ ಮೇಲೆಯೇ ಇಂತಹ ಫ್ಯಾನ್‌ಗಳನ್ನು ಅಳವಡಿಸುವುದು ಅಗತ್ಯ. ಆಗಲೇ ಅದರ ಪರಿಣಾಮ ಗರಿಷ್ಠವಾಗುತ್ತದೆ.

**ಬೆಡ್‌ರೂಮ್**

ನಾವು ನಮ್ಮ ಜೀವನದ ಮೂರನೆಯ ಒಂದು ಭಾಗದಷ್ಟು ಸಮಯವನ್ನು ಬೆಡ್ ರೂಮಿನಲ್ಲಿ ಕಳೆಯುತ್ತೇವೆ. ಇಲ್ಲಿನ ಪರಿಸರ ಮಾಲಿನ್ಯದ ಬಗ್ಗೆ ವಿಶೇಷ ಗಮನ ಅಗತ್ಯ. ದೂಳು, ದೂಳು ನುಸಿಗಳು ಇಲ್ಲಿನ ಮಾಲಿನ್ಯಕಾರಕಗಳ ಪಟ್ಟಿಯಲ್ಲಿ ಅಗ್ರಸ್ಥಾನ ಪಡೆಯುತ್ತವೆ. ಕೋಣೆಯೊಳಗೆ ತೇವಾಂಶ ೫೦ ಪ್ರತಿಶತಕ್ಕಿಂತಲೂ ಹೆಚ್ಚಾಗಿದ್ದರೆ ದೂಳು ಕ್ರಿಮಿಗಳು ಅತ್ಯಧಿಕವಾಗಿರುತ್ತವೆ. ನೆಗಡಿ ಮುಂತಾದ ರೋಗಗಳ ಕ್ರಿಮಿಗಳು 'ದೂಳಿ'ನ ಜೊತೆ ಸೇರಿಕೊಂಡಿರುತ್ತವೆ. 'ವೈರಸ್' ಗಳೆಂಬ ವಿಷಾಣುಗಳು ಸಹ ಇಲ್ಲಿರುತ್ತವೆ. 'ಬೆಡ್ ರೂಮಿ'ನಲ್ಲಿ ಸಾಕುಪ್ರಾಣಿಗಳನ್ನು ಬಿಡುವುದು ಸರಿಯಲ್ಲ. ಅವುಗಳ ರೋಮ, ಹೊಟ್ಟು ಮುಂತಾದವುಗಳಿಂದ ಪರಿಸರ ಅನಾರೋಗ್ಯಕರವಾಗಬಲ್ಲದು.

ಹಾಸಿಗೆ, ಹೊದಿಕೆಗಳನ್ನು ಬದಲಾಯಿಸು

# ನೀವೂ ಪರಿಸರ ಮಿತ್ರರಾಗಿ

ನಮ್ಮ ದೈನಂದಿನ ಜೀವನದಲ್ಲಿ ಪರಿಸರಕ್ಕೆ ಹಾನಿಯಾಗದಂತೆ ನೋಡಿಕೊಂಡರೆ, ಪರಿಸರಮಾಲಿನ್ಯದ ಭೀಕರ ಪರಿಣಾಮಗಳನ್ನು ತಡೆಗಟ್ಟಲು ನಮ್ಮ ಪಾಲಿನ ಕರ್ತವ್ಯವನ್ನು ನಿಭಾಯಿಸಿದಂತಾಗುತ್ತದೆ. ಇಲ್ಲಿ ನಮ್ಮ ಮನೆಗಳಲ್ಲಿ ಪಾಲಿಸಬಹುದಾದ ಕೆಲವು 'ಪರಿಸರ ಪರ' ಕ್ರಮಗಳಿವೆ.

- ಸೆಂಟ್, ಸ್ಪ್ರೇ ಮುಂತಾದವುಗಳನ್ನು ಖರೀದಿಸುವಾಗ ಅವುಗಳಲ್ಲಿ ಸಿ.ಎಫ್.ಸಿ (CFC) ರಾಸಾಯನಿಕ ಇಲ್ಲ ಎಂಬುದನ್ನು ಖಚಿತಪಡಿಸಿಕೊಳ್ಳಿ. 'ಪುಸ್ ಪುಸ್' ಎನ್ನುವ ಬಾಟಲಿಯಬದಲಿಗೆ 'ಪಂಪ್'ನ ಸಹಾಯದಿಂದ ಕೆಲಸ ನಿರ್ವಹಿಸುವ (ಹಳೆಯ ಕ್ಷೌರಿಕನ ಅಂಗಡಿಯಲ್ಲಿ ನೀವು ಇಂಥದ್ದನ್ನು ಕಂಡಿರಬಹುದು) ಸೆಂಟ್ ಬಾಟಲ್‌ಗಳನ್ನು ಖರೀದಿಸಿ.
- ಪಾತ್ರೆ ಉಜ್ಜಲು ಬಳಸುವ ಡಿಟರ್ಜೆಂಟ್ ಪೌಡರ್ ಇತ್ಯಾದಿಗಳಲ್ಲಿ ಫಾಸ್ಪೇಟ್ (Phospate) ಅಂಶ ಕಮ್ಮಿ ಇದ್ದರೆ ಒಳ್ಳೆಯದು. ಆಟೋಮೆಟಿಕ್ ಡಿಶ್‌ವಾಶರ್ ಹೊಂದಿರುವವರು ಇದನ್ನು ಗಮನಿಸಿ. 'ಬೂದಿ'ಯನ್ನು ಬಳಸಿ ಪಾತ್ರೆ ಉಜ್ಜುವ ಕ್ರಮ 'ನಿಸರ್ಗ'ಕ್ಕೆ ಹಾನಿಕಾರಕವಲ್ಲ.
- ಆಲ್ ಪರ್‌ಪೋಸ್ ಕ್ಲೀನರ್‌ಗಳನ್ನು (All purpose Cleaners) ನೀವು ಮನೆಯಲ್ಲಿಯೇ ಸುಲಭವಾಗಿ ತಯಾರಿಸಬಹುದು. ೧/೪ ಕಪ್ ಲಿಕ್ವಿಡ್ ಸೋಪ್ (Liquid Soap) ಅಥವಾ 'ಬೋರಾಕ್ಸ್' ಅನ್ನು ಬಿಸಿನೀರಿನೊಂದಿಗೆ ನಿಂಬೆರಸ ಜೊತೆ ಸೇರಿಸಿ ಕ್ಲೀನಿಂಗ್ ದ್ರಾವಣವಾಗಿ ಬಳಸಬಹುದು. ಗ್ರೀಸ್ ಮುಂತಾದವುಗಳು ಇದರಿಂದ ತೊಲಗುತ್ತವೆ.
- ಮನೆಗೆ ಬಣ್ಣ, ಪೇಂಟ್‌ನ್ನು ಆದಷ್ಟು ಕಮ್ಮಿ ಮಾಡಿಸಿ. ರಾಸಾಯನಿಕ ಪೇಂಟ್ ಸಿಂಪಡಣೆ ಬದಲಿಗೆ, ಮಣ್ಣಿನ ನೈಸರ್ಗಿಕ ಬಣ್ಣಗಳನ್ನು ಬಳಸುವ ಪದ್ಧತಿ ಇಂದಿಗೂ ನಮ್ಮ ಹಳ್ಳಿಗಳಲ್ಲಿ ಕಾಣಬಹುದು.
- ಬ್ಲೀಚಿಂಗ್‌ಗಾಗಿ : ವಿನೇಗರ್, ನಿಂಬೆರಸ ಇತ್ಯಾದಿಗಳನ್ನು ಉಪಯೋಗಿಸಿ (ಕಟ್ಟಿಗೆಯ ಪೀಠೋಪಕರಣಗಳು ಇತ್ಯಾದಿಗಳಿಗೆ).
- ಸಿಂಥೆಟಿಕ್ (Synthetic) ನೆಲಹಾಸು, ಗೋಡೆ ಹೊದಿಕೆಗಳನ್ನು ಖರೀದಿಸಬೇಡಿ.
- ಹತ್ತಿ, ಉಣ್ಣೆ ಮುಂತಾದ ನೈಸರ್ಗಿಕವಾದ ಉಡುಗೆಗಳಿಗೆ ಪ್ರಾಶಸ್ತ್ಯ ನೀಡಿ.
- ಪಾತ್ರೆ ತೊಳೆಯುವ ಕ್ಲೀನಿಂಗ್ ಲಿಕ್ವಿಡ್‌ಗಳಲ್ಲಿ ಪರಿಸರಕ್ಕೆ ಹಾನಿಕಾರಕವಾದ ವಸ್ತುಗಳು ಹೆಚ್ಚಿನ ಪ್ರಮಾಣದಲ್ಲಿಲ್ಲ ಎನ್ನುವುದನ್ನು ಖಚಿತಪಡಿಸಿಕೊಳ್ಳಿ.
- ಬಚ್ಚಲು ಮನೆಯ ಮೋರಿಯ ಬಾಯಿ ಕಟ್ಟಿದ್ದರೆ 2 ಟೇಬಲ್ ಸ್ಪೂನ್ ಬೇಕಿಂಗ್ ಸೋಡಾ ಮತ್ತು ಅರ್ಧಕಪ್ ಬಿಳಿ ವಿನೇಗರ್ ದ್ರಾವಣವನ್ನು ಹಾಕಿ ಸ್ವಲ್ಪ ಸಮಯದ ನಂತರ ನೀರು ಹಾಕಿ.
- "ನೆಲ ಪಾಲೀಶ್"ಗೆ ೧ ಕಪ್ ಲಿನ್‌ಸೀಡ್ ಆಯಿಲ್ (Linseedoil), ಅರ್ಧ ಕಪ್ ಬಿಳಿ ವಿನೇಗರ್ (White Vinegar), ಅರ್ಧ ಕಪ್ ಆಲ್ಕೋಹಾಲ್ ಮಿಶ್ರಣ ಬಳಸಿ.
- ಕ್ಲೋರಿನ್ ಬ್ಲೀಚ್‌ಗಳ ಬದಲಿಗೆ ತುಸು ಬೇಕಿಂಗ್ ಸೋಡಾ ಅಥವಾ ಬೋರಾಕ್ಸ್ (Borax) ನ್ನು ಬಳಸಿ ಬಟ್ಟೆಗಳಿಗೆ ಬಿಳುಪು ತರಬಹುದು.
- ಪಾಯಖಾನೆಗಳ ಶುಚಿಗಾಗಿ ಸೋಪು ಮತ್ತು ಬೋರಾಕ್ಸ್ ಬಳಸಿ.
- ರೂಮ್ ಫ್ರೆಶರ್‌ಗಳ ಬದಲು ಗಾಳಿ ಓಡಾಟದ ವ್ಯವಸ್ಥೆಯನ್ನು ಉತ್ತಮಗೊಳಿಸುವ ಪ್ರಯತ್ನಮಾಡಿ.
- ಪಾತ್ರೆಯನ್ನು ಉಜ್ಜಿ ತೊಳೆಯುವ ಸ್ಪಂಜ್ (Sponge)ನ ಮೇಲೆ ಸ್ವಲ್ಪ ಉಪ್ಪು ಸಿಂಪಡಿಸಿ, ನೀರು ಹಾಗೂ ವಿನೇಗರ್‌ನಿಂದ ಒದ್ದೆಮಾಡಿ ಬಳಸಿ.
- ಜಿರಲೆಗಳ ನಿಯಂತ್ರಣಕ್ಕಾಗಿ ಬೇಕಿಂಗ್ ಸೋಡಾ ಹಾಗೂ ಸಕ್ಕರೆಯನ್ನು ಸಮಪ್ರಮಾಣದಲ್ಲಿ ಪುಡಿಯಾಗಿಸಿ ಬಳಸಿ.
- ನೊಣಗಳಿಂದ ಮುಕ್ತಿ ಪಡೆಯಲು ನಿಂಬೆಸಿಪ್ಪೆ, ಕಿತ್ತಳೆಸಿಪ್ಪೆ ಎಲೆಗಳನ್ನು ಜಜ್ಜಿ ನೊಣಗಳು ಅಧಿಕವಾಗಿರುವ ಸ್ಥಳಗಳಲ್ಲಿ ಇರಿಸಿ.
- ಇಲಿ, ಹೆಗ್ಗಣಗಳನ್ನು ಕೊಲ್ಲಲು ಅತ್ಯಂತ ನೈಸರ್ಗಿಕ ವಿಧಾನವನ್ನು ಪಾಲಿಸಿ- ಬೆಕ್ಕು ಸಾಕಿ!

○ ಎಸ್.ಎಂ.ಬಿ.

ವುದು, ವ್ಯಾಕ್ಯೂಮ್‌ಕ್ಲೀನ್ (Vaccum Clean) ಮಾಡುವುದು, ದೂಳು ಜಾಡಿಸುವುದು, ಮುಂತಾದವುಗಳನ್ನು ಆಗಾಗ ಮಾಡಿದರೆ ಅಲ್ಲಿನ ಪರಿಸ್ಥಿತಿ ಉತ್ತಮಗೊಳ್ಳುತ್ತದೆ. 'ವ್ಯಾಕ್ಯೂಮ್‌ಕ್ಲೀನ್' ಮಾಡಿದನಂತರ ಫ್ಯಾನ್ ಹಾಕಲು ಮರೆಯದಿರಿ. ಇದರಿಂದ ಗಾಳಿ ಯಾಡುತ್ತದೆ.

'ಬೆಡ್‌ರೂಮ್'ನಲ್ಲಿ 'ಏರ್‌ಕಂಡೀಶನಿಂಗ್' ಇದ್ದರೆ ಇನ್ನೂ ಹೆಚ್ಚಿನ ಕಾಳಜಿ ವಹಿಸಿ. ಇಂತಹ 'ನಿಯಂತ್ರಿತ' ಹವೆಯಲ್ಲಿ ಬ್ಯಾಕ್ಟೀರಿಯಾ, ಬೂಷ್ಟ್‌ಗಳು ಸುಲಭವಾಗಿ ಬೆಳೆಯುತ್ತವೆ. ಏರ್‌ಕಂಡೀಶನಿಂಗ್ (Air Conditioning) ಉಪಕರಣವನ್ನು ಆಗಾಗ ಶುಭ್ರಗೊಳಿಸದೆ ಹೋದರೆ, ಈ ಪರಿಸರವೇ ಹಲವಾರು ರೋಗಾಣುಗಳ ಆಗರವಾಗಬಲ್ಲದು ಜೋಕೆ!

### ಧೂಮಪಾನ

ಮನೆಯೊಳಗೆ 'ಧೂಮಪಾನ' ಮಾಡುವುದು ಅತ್ಯಂತ ಹಾನಿಕಾರಕ ಸಿಗರೇಟಿನ ಹೊಗೆಯಲ್ಲಿ ಕಾರ್ಬನ್ ಮೊನೋ ಆಕ್ಸೈಡ್, ನೈಟ್ರೋಜನ್ ಆಕ್ಸೈಡ್, ನಿಕೋಟಿನ್ (Nicotin), ಹೈಡ್ರೋಕಾರ್ಬನ್ (Hydrocarbon) ಮುಂತಾದ ಹಾನಿಕಾರಕ ರಾಸಾಯನಿಕ ವಸ್ತುಗಳಿವೆ. ಹೊಗೆಯಲ್ಲಿನ 'ಬೆಂಜಿನ್' (Benzene) ಎಂಬ ರಾಸಾಯನಿಕ ಕ್ಯಾನ್ಸರ್ ಉಂಟುಮಾಡುತ್ತದೆ. ಒಟ್ಟು ೫೦ಕ್ಕೂ ಹೆಚ್ಚಿನ ರಾಸಾಯನಿಕಗಳು ಹೊಗೆಯಲ್ಲಿವೆ.

ಎಳೆಯ ಮಕ್ಕಳು ಇವುಗಳ ದುಷ್ಪರಿಣಾಮಕ್ಕೆ ಶೀಘ್ರವಾಗಿ ತುತ್ತಾಗುತ್ತಾರೆಂದು ಸಂಶೋಧನೆಗಳಿಂದ ಖಚಿತವಾಗಿದೆ. ಧೂಮಪಾನ ವ್ಯಸನಿಗಳ ಮಕ್ಕಳಲ್ಲಿ ನೆಗಡಿ, ಬ್ರಾಂಕೈಟಿಸ್, ಇನ್‌ಫ್ಲೂಂಜಾ (Influenja) ಮತ್ತು ನ್ಯೂಮೋನಿಯಾ ದಂತಹ ಕಾಯಿಲೆಗಳು ಅತೀ ಹೆಚ್ಚಾಗಿ ಕಂಡುಬರುತ್ತವಂತೆ. ಆ ಮಕ್ಕಳಲ್ಲಿ 'ಕಲಿಕೆ'ಯ ಸಾಮರ್ಥ್ಯ ಕಮ್ಮಿ ಇದ್ದು, ಬುದ್ಧಿಮಟ್ಟದ ಬೆಳವಣಿಗೆ ಕುಂಠಿತವಾಗಿರುವ ಸಾಧ್ಯತೆ ಇದೆ ಎಂದು ವೈದ್ಯಕೀಯ ವರದಿಯೊಂದು ಸಾರಿದೆ. ಮನೆಯೊಳಗೆ ಧೂಮಪಾನ ಮಾಡುವ ಮೊದಲು ಇನ್ನೊಮ್ಮೆ ಯೋಚಿಸಿ!

### ಬಚ್ಚಲು ಮನೆ

ಬ್ಯಾಕ್ಟೀರಿಯಾ (Bacteria), ಬೂಷ್ಟ್ ಮುಂತಾದ ಸೂಕ್ಷ್ಮಜೀವಿಗಳಿಗೆ ಇದು ಖಾಯಂ ವಾಸಸ್ಥಳ. ಸ್ನಾನದ ಮನೆ, ಪಾಯಖಾನೆ ಶುದ್ಧಗೊಳಿಸಲು ಇತ್ತೀಚೆಗೆ ಹಲವಾರು ಕ್ರಿಮಿನಾಶಕಗಳು ಮಾರುಕಟ್ಟೆಯಲ್ಲಿ ಬಂದಿವೆ. ಇವುಗಳಲ್ಲಿ ಮಿಥೈಲ್‌ಕ್ಲೋರೈಡ್ (Methyle Chloride), ಕ್ರಿಸೋಲ್ (Cresol), ಅಮೋನಿಯ (Ammonia), ಕ್ಲೋರಿನ್ (Chlorine) ನಂತಹ ರಾಸಾಯನಿಕಗಳಿವೆ. ಇವುಗಳ ಮಾಲಿನ್ಯದಿಂದ ದೇಹದಲ್ಲಿ ತುರಿಕೆ, ಉರಿ ಉಂಟಾಗಬಹುದು.



ಅಡುಗೆ ಮಾಡುವ ಜಾಗೆಯ ಮೇಲೆಯೇ ಎಗ್‌ಜಾಸ್ಟ್ ಫ್ಯಾನ್

ಕೇಂದ್ರಿಯ ನರವ್ಯೂಹ, ಯಕೃತ್, ಮೂತ್ರಪಿಂಡಗಳಂತಹ ಅಂಗಾಂಗಗಳು ಈ ರಾಸಾಯನಿಕಗಳಿಂದ ಹಾನಿಗೊಳಗಾಗುತ್ತವೆ. ಗಾಳಿಯಲ್ಲಿ ಈ ರಾಸಾಯನಿಕಗಳು ಸೇರಿಕೊಂಡು ದೇಹದೊಳಕ್ಕೆ ಪ್ರವೇಶಿಸಿಬಿಡುತ್ತವೆ. ಬಚ್ಚಲು ಮನೆಯನ್ನು ಇಕ್ಕಟ್ಟಾಗಿ ಕಟ್ಟಿಸದೆ, ಉತ್ತಮ ಗಾಳಿಸಂಚಾರ ಒದಗಿಸುವುದರ ಮೂಲಕ ಇವುಗಳ ಪರಿಣಾಮವನ್ನು ಕಮ್ಮಿಗೊಳಿಸಬಹುದು. 'ಕ್ಲೋರಿನ್‌ಯುಕ್ತ' ಕ್ರಿಮಿನಾಶಕ ದ್ರಾವಣವನ್ನು 'ಅಮೋನಿಯಯುಕ್ತ' ದ್ರಾವಣಗಳೊಂದಿಗೆ ಎಂದಿಗೂ ಸೇರಿಸಿ ಬಳಸಬೇಡಿ. ಇವುಗಳ ಮಿಶ್ರಣದಿಂದ ಉಂಟಾಗುವ 'ಅಮೋನಿಯ ಕ್ಲೋರೈಡ್' ಅತ್ಯಂತ ಅಪಾಯಕಾರಿ ವಿಷ.

ಸ್ನಾನಗೃಹದಲ್ಲಿನ 'ಟೈಲ್ಸ್'ಗಳ ಮಧ್ಯೆ ಪಾಚಿ, ಬೂಷ್ಟ್ ಬೆಳೆದಿರಬಹುದು. ಅದನ್ನು ಉಜ್ಜಿ ತೆಗೆಯಿರಿ. ಇತ್ತೀಚೆಗೆ ಅನೇಕ 'ಪರಿಸರಮಿತ್ರ' (Ecofriendly) ರಾಸಾಯನಿಕಗಳು ಲಭ್ಯ ಇವೆ. ಅವುಗಳನ್ನು ಬಳಸಲು ಶುರುಮಾಡಿ.

### ಇತರ ಮಾಲಿನ್ಯಕಾರಕಗಳು

ಮೇಲೆ ವಿವರಿಸಿದ ಮಾಲಿನ್ಯಕಾರಕಗಳು ಕೇವಲ ಕೆಲವು ಉದಾಹರಣೆಗಳು ಮಾತ್ರ. ವಿಶ್ವಾದ್ಯಂತ ಜನರು ತಮ್ಮ 'ಜೀವನ ಶೈಲಿ'ಯಿಂದಾಗಿ ಪ್ರತಿದಿನ ೫೫ ಸಾವಿರಗಳಿಗಿಂತಲೂ ಹೆಚ್ಚಿನ ರಾಸಾಯನಿಕಗಳೊಂದಿಗೆ ಪ್ರತ್ಯಕ್ಷವಾಗಿಯೋ ಇಲ್ಲವೇ ಅಪ್ರತ್ಯಕ್ಷವಾಗಿಯೋ ಸಂಪರ್ಕದಲ್ಲಿದ್ದಾರೆ. ಇವುಗಳಲ್ಲಿ ೯೦ ಪ್ರತಿಶತಕ್ಕಿಂತಲೂ ಹೆಚ್ಚಿನ ರಾಸಾಯನಿಕಗಳ ಪರಿಣಾಮ ದೇಹದ ಮೇಲೆ ಯಾವ ರೀತಿಯಿಂದಾಗುತ್ತದೆ ಎನ್ನುವುದು ನಮಗೆ ಇನ್ನೂಗೊತ್ತಿಲ್ಲ! ಪ್ರತಿವರ್ಷ ಒಂದು ಸಾವಿರಕ್ಕೂ ಹೆಚ್ಚು ಹೊಸ ರಾಸಾಯನಿಕ ಪದಾರ್ಥಗಳು ಭಾರೀ ಪ್ರಚಾರದೊಂದಿಗೆ ಗೃಹಬಳಕೆಗಾಗಿ ನಮ್ಮ ನಿಮ್ಮ ಮನೆ ಸೇರಲು ಬಿಡುಗಡೆಯಾಗುತ್ತಿವೆ!

ನಾವು ಹಾಕುವ 'ಸೆಂಟ್', ಸಿಂಪಡಿಸುವ ಸುಗಂಧದ್ರವ್ಯ, ಚೆಲ್ಲುವ ಫಿನೈಲ್, ಬಳಿಯುವ ಪೇಂಟ್ ಇತ್ಯಾದಿಗಳೆಲ್ಲ ಪರಿಸರಕ್ಕೆ ಮಾರಕ. 'ಗ್ರಾಹಕ ಸಂಸ್ಕೃತಿ'ಯ ಅಲೆಯಿಂದ ನಮ್ಮ ಜೀವನ ಶೈಲಿ ಅಗಾಧವಾಗಿ ಬದಲಾಗಿದೆ. ನೈಸರ್ಗಿಕ ವಸ್ತುಗಳ ಬದಲಿಗೆ ಕೃತಕ, ರಾಸಾಯನಿಕ ವಸ್ತುಗಳನ್ನು ಅವಲಂಬಿಸುವುದು ತೀರಾ ಹೆಚ್ಚಾಗಿದೆ. ಉದಾಹರಣೆಗೆ ನಾವು 'ಪುಸ್ ಪುಸ್' ಎಂದು ಸೆಂಟು ಹಾಕಿಕೊಂಡಾಗ, ಅದು ಬಾಟಲಿಯಿಂದ ಹೊರ ಸಿಂಪಡಣೆಯಾಗಲು ಸುಗಂಧದ ಜೊತೆ ಬಳಸುವ 'ಕ್ಲೋರೋಫ್ಲೋರೋಕಾರ್ಬನ್' (ChloroflouroCarbon) ಎಂಬ ರಾಸಾಯನಿಕ ಸೀದಾ ವಾಯುವನ್ನು ಸೇರಿ, ಭೂಮಿಯನ್ನು ಸೂರ್ಯನ ತೀಕ್ಷ್ಣವಾದ 'ವರ್ಣಾತೀತ' ಕಿರಣಗಳಿಂದ ರಕ್ಷಿಸುವ ಓಜೋನ್ ಪದರದಲ್ಲಿ ತೂತು ಕೊರೆಯುತ್ತದೆ. ಆದರೆ, ನಮ್ಮಲ್ಲಿ ಅದೆಷ್ಟು ಜನಕ್ಕೆ ಇದು ಗೊತ್ತು? ಬರೀ 'ಫ್ಯಾಶನ್' ಲೋಕದಲ್ಲಿ ಮುಳುಗಿರುವ ನಾವು ಪರಿಸರ ಮಾಲಿನ್ಯದಿಂದಾಗಿ ಇತಿಹಾಸದಲ್ಲಿ ಮುಂದೊಂದು ದಿನ ಶಾಶ್ವತ ಮುಳುಗಡೆ ಹೊಂದಿದರೆ ಆಶ್ಚರ್ಯವಿಲ್ಲ!

ಆಯ್ಕೆ ನಮ್ಮ ಕೈಯಲ್ಲಿದೆ.

●



# ಮುಖ್ಯಮಂತ್ರಿ ಮಾನವರಲ್ಲವೆ?

## ವಕ್ರಯುದ್ಧ

○ ಎನ್.ಕೆ. ಕುಲಕರ್ಣಿ
''ಪರಿಮಳ''
ರೇಲ್ವೆ ಗೂಡ್ಸ್‌ಶೆಡ್ ಬಳಿ, ಧಾರವಾಡ - ೭

ಮಾನವನಿಗೆ ರಜೋಗುಣ ಸಹಜವಾದುದಲ್ಲವೆ? ಎಂದಮೇಲೆ ಮುಖ್ಯಮಂತ್ರಿಗಳಿಗೂ ರತಿ-ಮದನರ ಚಾಪಲ್ಯಗಳುಂಟಾದರೆ ನಾವೇಕೆ ಅಚ್ಚರಿ ಪಡಬೇಕು? ಮಾನವರಷ್ಟೇ ಏಕೆ, ರಾಮಾವತಾರದಲ್ಲಿ ಏಕಪತ್ನೀವ್ರತ ಆಚರಿಸಿದ ಪರಮಾತ್ಮನು ಕೃಷ್ಣಾವತಾರದಲ್ಲಿ ಕಾಮದ ಕೊರತೆಯನ್ನು ನೀಗಿಸಿಕೊಳ್ಳಲಿಲ್ಲವೆ? ಎಂತಲೇ ಕೃಷ್ಣಾವತಾರವನ್ನೇ ಮುಖ್ಯಮಂತ್ರಿಯೊಬ್ಬರು ಮೆಚ್ಚಿಕೊಂಡರೆ ನಾವೇಕೆ ಹೊಟ್ಟೇಕಿಚ್ಚು ಪಡಬೇಕು? ಮಂತ್ರಿಗಳ ಸಹಚರಿಯರ ಸಂಖ್ಯೆ ಹದಿನಾರು ಸಾವಿರ ಮುಟ್ಟಲು ಎಂದಾದರೂ ಸಾಧ್ಯವೆ?

ಸೌಂದರ್ಯೋಪಾಸನೆಯ ಮೂಲಕ ಸಾಕ್ಷಾತ್ಕಾರ ಪಡೆಯಬಹುದಲ್ಲವೆ? ಅಂತೆಯೆ 'ರಸೋವೈಸಃ' ಎಂಬ ವೇದೋಕ್ತಿಯ ಪ್ರಸ್ತುತತೆ. ಕವಿ ರವೀಂದ್ರರು ರಸೋಪಾಸಕರಾಗಿರಲಿಲ್ಲವೆ? ವಿಶ್ವದ ಪ್ರಕೃತಿಯಲ್ಲಿ, ಮಾನವ ಸ್ತ್ರೀ ಆಕೃತಿಗಳಲ್ಲಿ ಚೆಲುವನ್ನು ಹುಡುಕಿಕೊಳ್ಳುವುದು ರಸಿಕತೆ, ರಸೋಪಾಸನೆ, ಸೌಂದರ್ಯೋಪಾಸನೆಗೆ ಸಾಕ್ಷಿ ಅಲ್ಲವೆ? 'ಸ್ತ್ರೀ ರೂಪಮೆ ರೂಪಂ, ಶೃಂಗಾರಮೆ ರಸಂ' ಎಂದು ಕವಿ ನೇಮಿಚಂದ್ರನು ತನ್ನ 'ಲೀಲಾವತಿ' ಕಾವ್ಯದಲ್ಲಿ ಘೋಷಿಸಿಕೊಂಡಿಲ್ಲವೆ? ರಸಿಕತೆ, ಸೌಂದರ್ಯೋಪಾಸನೆ ಯಾರಿಗೆ ಬೇಡ? ಋಷಿ ಮುನಿಗಳೂ ಯೋಗಿಗಳೂ ಇದಕ್ಕೆ ಹೊರತಾದವರಲ್ಲ ಎಂದು ನಮ್ಮ ಪುರಾಣಗಳೂ, ರಾಮಾಯಣ-ಮಹಾಭಾರತಗಳೂ ಚಿತ್ರಿಸಿಲ್ಲವೆ?

ಎಂದಮೇಲೆ ಮುಖ್ಯಮಂತ್ರಿಯೊಬ್ಬರು ''ವಿಶ್ವಸುಂದರಿ'' ಸ್ಪರ್ಧೆಯಲ್ಲಿ ವಿಶ್ವ ಸೌಂದರ್ಯವನ್ನೆ ಹುಡುಕಿಕೊಂಡು ಹೋದರೆ ಅದು ಅವರ ಸೌಂದರ್ಯ ಪ್ರಜ್ಞೆಗೆ ಸಾಕ್ಷಿ ಅಲ್ಲವೆ? ವಿಶ್ವಸುಂದರಿಯನ್ನೆ ಹುಡುಕಿಕೊಂಡು ಹೋದರು-ಎಂದೇಕೆ ಹೇಳಬೇಕು? ಇದು ಆಗದವರ ಆಡಿಕೆಯ, ವಾಡಿಕೆಯ ಮಾತು. ಕಟ್ಟಿಗೆಯೊಳಗಿನ ಬೆಂಕಿಗಾಗಿ ಅಲ್ಲವೆ ನಾವು ಕಟ್ಟಿಗೆಯನ್ನು ಹುಡುಕಿಕೊಂಡು ಹೋಗುವುದು? ಕಟ್ಟಿಗೆಯೊಳಗಿಂದ ಅಗ್ನಿ ತತ್ವವನ್ನೆ ಬೇರ್ಪಡಿಸುವಂತೆ ವಿಶ್ವಸುಂದರಿಯಿಂದ ವಿಶ್ವ ಸೌಂದರ್ಯತತ್ವವನ್ನೂ ಬೇರ್ಪಡಿಸಿ ಅದರ ಪೂಜೆ ಮಾಡುವ ಚೆಲುವಿನ ಪೂಜಾರಿಗಳು ಇವರು ಎಂದೇಕೆ ತಿಳಿಯಬಾರದು?

ಒಬ್ಬ Gent typist ಗಿಂತ ಒಬ್ಬ Lady typist ಹೆಚ್ಚು ದಕ್ಷತೆ, ವೇಗ, ತತ್ಪರತೆಗಳಿಂದ ಕೆಲಸ ಮಾಡಿದಾಗ ಮುಖ್ಯಮಂತ್ರಿಗಳಲ್ಲದೆ ಇನ್ನಾರು ಶಾಬಾಸಗಿರಿ ಕೊಡಬೇಕು ಈ ಬಡ ಲೇಡಿ ಬೆರಳಚ್ಚು ಗಾರ್ತಿಗೆ? ಇಷ್ಟೊಂದು ಮೆಚ್ಚು, ಉತ್ತೇಜನ-ಇವೇ ಮುಖ್ಯ ಬಢತಿ ಅಲ್ಲವೆ C.G. One ಕಾರಕೂನರಿಗೆ? ಅದೂ ಅಲ್ಲದೆ ಪೀಠ ಮಾನ್ಯತೆಯಿಂದ ಸುಲಭ ಲಭ್ಯವಾದ ಒಬ್ಬ ಬೆಡಗುಗಾತಿಯೊಡನೆ ಒಂದಿಷ್ಟು ಚಕ್ಕಂದ ವಾಡಿದರೆ, ಆ ಸರಸಕ್ಕೆ 'ವಿರಸಮರಣ' ವೆಂಬಂತೆ ತಮಗೆ ಲಭ್ಯವಾಗಲಿಲ್ಲವಲ್ಲ ಎಂದು ಅಸಹನೆ

*ರಾಮಾವತಾರದಲ್ಲಿ ಏಕಪತ್ನೀವ್ರತ ಆಚರಿಸಿದ ಪರಮಾತ್ಮನು ಕೃಷ್ಣಾವತಾರದಲ್ಲಿ ಕಾಮದ ಕೊರತೆ ನೀಗಿಸಿಕೊಳ್ಳಲಿಲ್ಲವೇ? ಎಂತಲೇ ಮುಖ್ಯಮಂತ್ರಿಯೊಬ್ಬ ಕೃಷ್ಣಾವತಾರವನ್ನೇ ಮೆಚ್ಚಿಕೊಂಡರೆ ನಾವೇಕೆ ಹೊಟ್ಟೆಕಿಚ್ಚು ಪಡಬೇಕು?*

*ಸನ್ಯಾಸಿಯೊಬ್ಬರ ಸಂಗೀತ ಸೌರಭವನ್ನು ರಸಿಕದುಂಬಿಯೊಂದು ಮಧು ತೃಷೆಯಿಂದ ಮೆಚ್ಚಿಬಂದರೆ ಅದು ಸುಗಂಧ ಪುಷ್ಪದ ದೋಷವೇ? ತಮಗೆ ಮೇವು ನೀಡಿದ ದಾನಿಗೆ ದನಗಳು ಕೃತಜ್ಞತೆಯಿಂದ ಸಗಣ ನೀಡಿದರೆ ಅದೊಂದು ಹಗರಣವೇ ಆಗಬೇಕೆ?*



ತೋರುವುದೆ?

ಮನುಷ್ಯ ಸಂವೇದನಶೀಲ ಪ್ರಾಣಿಯಲ್ಲವೆ? ಸುತ್ತಲಿನ ಚೆಲುವಿಗೆ, ಬೆಡಗುಬಿನ್ನಾಣಕ್ಕೆ ಪ್ರತಿಕ್ರಿಯಿಸಬೇಡವೆ? ಮುಖ್ಯಮಂತ್ರಿಯೆಂದು ಇದಕ್ಕೆಲ್ಲ ಅಂಧ-ಬಧಿರನಾಗಿರಬೇಕೆ? ಎಲ್ಲ ಪ್ರತಿಕ್ರಿಯೆಗೂ ಕವಿಯೇ ಆಗಿರಬೇಕೆ? ಚೆಲುವು ಕವಿಗಳ 'ಮೊನೊಪಲಿ'ಯೆ? ಕವಿ ಎಂಬವನಿಗೊ ಒಂದು ಪ್ರಶಸ್ತಿಯೋ, ಒಂದಿಷ್ಟು ನಗದು ಮೊತ್ತವೊ ಸಾಕಲ್ಲ!

ಈ ರೀತಿ ಮಠಾಧೀಶರಾಗಲಿ, ಮಹೀಶರಾಗಲಿ ಮನುಷ್ಯರೇ ಅಲ್ಲವೆ? ವೀರ ವಿರಕ್ತಿ, ವೈರಾಗ್ಯಗಳಿಗೆ ಒಮ್ಮೊಮ್ಮೆ ಒಂದೊಂದು ಅಪವಾದಗಳುಂಟಾದರೂ ಅವುಗಳಲ್ಲಿ ಮನುಷ್ಯ ಮಾತ್ರ ಗುಣಗಳನ್ನು ಮೀರಿದ್ದೇನಿದೆ? ಸಂಗೀತಕಲೆಗೂ ಸನ್ಯಾಸವಿರುತ್ತದೆಯೆ? ಸನ್ಯಾಸಿಯೊಬ್ಬ ಸಂಗೀತಕಾರನಾಗಿ ಸೌರಭ ಬೀರಿದರೆ ಆ ಸೌರಭಕ್ಕೆ ಮೆಚ್ಚಿ ರಸಿಕದುಂಬಿಯೊಂದು ಮಧು ತೃಷ್ಣೆಯಿಂದ ಮೆಚ್ಚಿಬಂದರೆ ಅದು ಆ ಸುಗಂಧ ಪುಷ್ಪದ ದೋಷವೆ? ಎಲ್ಲಿ ಮಧುವೊ ಅಲ್ಲಿ ಮಧುಕರ! ಎಲ್ಲಿ ಸಂಗೀತವೊ ಅಲ್ಲಿ ರಸಿಕಶ್ರಾವಕ! ಇದರಲ್ಲಿ ಅನೈಸರ್ಗಿಕವಾದದ್ದೇನಿದೆ? ಒಬ್ಬ ಮಾಸ್ತರನೊ, ಉಪನ್ಯಾಸಕನೊ ಬ್ರಹ್ಮಚಾರಿಯಾಗಿದ್ದು, ಗೃಹಸ್ಥನಾಗುವ ಪ್ರಸಂಗ ಬಂತೆಂದು ಆತ ತನ್ನ ವೃತ್ತಿ, ತನ್ನ ಪೀಠವನ್ನೆ ತ್ಯಾಗ ಮಾಡಬೇಕೆಂದರೆ ಸ್ವಾಮೀ, ಆತನ ಸಂಸಾರನೌಕೆ, ಸಾಗುವ ಬಗೆ ಹೇಗೆ? ಅದೇ ರೀತಿ ಮಠಾಧೀಶನೂ ಪೀಠವನ್ನೆ ತ್ಯಜಿಸುವ ಪ್ರಮೇಯವೇಕೆ ಬರಬೇಕು? ಮನುಷ್ಯ ಮಾತ್ರರು, ಮನುಷ್ಯ ಮಾತ್ರರಂತೆ ನಡೆಯುವುದೇ ತಪ್ಪೆ? ಇದರಲ್ಲಿ ಎಂದರೆ ಸನ್ಯಾಸಿ ಸಂಗೀತಗಾರನಾಗಿರುವಲ್ಲಿ ಅಮಾನುಷವಾದದ್ದೇನಿದೆ?

ಇನ್ನು ಮಂತ್ರಿಮಾತ್ರಕ್ಕೆ ಜನರಿಂದ ಉಪಕೃತಿಯಸ್ಮೃತಿಯೆಂದು ಒಂದಿಷ್ಟು ಖುಷಿ Gratification ದೊರೆತರೆ ಅದು ಮೆಚ್ಚುಗೆಯಲ್ಲದೆ ಕ್ರಿಮಿನಲ್ ಅನ್ನುವಂತಹದೇನಿದೆ? ದನಗಳಿಗಾಗಿ ಮೇವು ನೀಡಿದ ದಾನಿ ಎಂದು ಆ ದನಗಳು ತಮ್ಮ ಕೃತಜ್ಞತೆಯದ್ಯೋತಕವಾಗಿ ಸಗಣಿ ನೀಡಿದರೆ ಅದೊಂದು ಹಗರಣವೇ ಆಗಬೇಕೆ? ಮೇವು ಮಾತ್ರದ್ದು ಒಂದು ದನಕ್ಕಲ್ಲ ೬೫೦ ಕೋಟಿ ದನಗಳಿಗೆ ಮುಟ್ಟಿದಾಗ ಅಷ್ಟು ಬೆಲೆಯ ಸಗಣಿಯನ್ನು ದಾತಾರನಿಗೆ ಅರ್ಪಿಸಿದರೆ ಅದರಲ್ಲಿ ಮಾನವೀಯತೆ ಬೇಡ, ದಾನವೀಯತೆ-ಎಂದರೆ ದನಕ್ಕೆ ಸಂಬಂಧಿಸಿದ ಸದ್ಗುಣ-ಯಾದರೂ ಇದೆಯಲ್ಲವೆ? ದನಗಳಲ್ಲಿರುವಷ್ಟು ಕೃತಜ್ಞತೆ ಮನುಷ್ಯರಲ್ಲೂ ದೊರಕಲಿಕ್ಕಿಲ್ಲ. ಅಂಥಾದ್ದು ಸುಳ್ಳೇ ಅದೊಂದು ಹಗರಣ ಎಂದುಕೊಂಡು ನಾಳ್ವಗರಣ (ನಾಡಿನ ಪಗರಣ ಎಂಬುದೊಂದು ನಾಟಕ ಪ್ರಕಾರ) ಮಾಡುವುದೆ?

ಅದೂ ಹೋಗಲಿ-ಈ ಲಂಚ, ಲಂಚ ಅನ್ನುತ್ತಾರಲ್ಲ ಅಂದರೇನು? ದೀಪಾವಳಿ ಬಂದರೆ ದೀನ ದಲಿತರಿಗೆ ಆಳುಹೋಳುಗಳಿಗೆ ಖುಷಿ ಕೊಡುವುದಿಲ್ಲವೆ ನಾವು? ಒಂದು ಎಂ.ಓ. ಬಂದಾಗ ಪೋಸ್ಟ್‌ಮನ್‌ಗೆ ಒಂದಿಷ್ಟು ಖುಷಿ ಕೊಡುವುದಿಲ್ಲವೆ? ಅದೇ ಚೆಕ್ ಒಂದು ರಿಜಿಸ್ಟರ್ ಮೂಲಕ ಬಂದಾಗಲೂ ಆ ಅಮಾಯಕ ಪೋಸ್ಟ್‌ಮನ್ ನಿಮ್ಮಿಂದ ಖುಷಿ ಅಪೇಕ್ಷಿಸುವುದಿಲ್ಲ; ಏಕೆಂದರೆ ಆ ರಿಜಿಸ್ಟರನಲ್ಲಿ ಚೆಕ್ ಇರದೆ 'ನೋಟೀಸ್' ಬಂದಿದ್ದರೆ-ಪಾಪ ಅವನಿಗೇನು ಗೊತ್ತು? ಹಾಗೆಯೆ ಎಂ.ಓ.ಹಣ ಸಂಭಾವನೆ ಇರಲಿ, ಇನ್ನೊಬ್ಬರ ಮರಳಿ ಮುಟ್ಟಿಸಿದ ಸಾಲವೇ ಇರಲಿ ಅದು ನಗದು ಹಣವೆಂದು ಆ ಅಂಚೆಯ ಜವಾನ ಖುಷಿಯ ಅರ್ಹತೆ ಪಡೆಯುತ್ತಾನೆ. ಹಿಂದಕ್ಕೆ ಬ್ರಿಟಿಷರ ಕಾಲಕ್ಕೆ, ಪೇಶ್ವೆಯರ ಕಾಲಕ್ಕೆ ದೊರೆತ ಇನಾಮೀ ಜಮೀನುಗಳೆಲ್ಲ ಉಂಬಳಿಗಳಲ್ಲದೆ ಕಂಬಳಿಗಳೆ? ನಮ್ಮ ದೇವರಾಜ ಅರಸರು ಉಳುವವನೇ ಒಡೆಯ ಎಂದು ಘೋಷಿಸಿದಾಗ ಜಮೀನುಗಳು ಕೈಬಿಟ್ಟುವು ಆ ಮಾತುಬೇರೆ. ಆದರೆ ಬ್ರಿಟಿಷರು, ಪೇಶ್ವೆ ಸರಕಾರದವರು ಖುಷಿ ಕೊಟ್ಟದ್ದನ್ನು ಕಿತ್ತಿಕೊಂಡರಲ್ಲ, ಎಂದು ನೀವೇನು ಮಾಡುವ ಹಾಗಿದ್ದೀರಿ? ಇರಲಿ. ಕೊಟ್ಟ ಖುಷಿ ತನ್ನ ಲಿಮಿಟ್-ಲಿಮಿಟೇಶನ್ ಮೀರಿದಾಗ ಅದು ಲಂಚ, ಭ್ರಷ್ಟಾಚಾರ ಎನಿಸಿಕೊಳ್ಳಬಹುದೇನೋ. ಆದರೆ ಸ್ವಾಮಿ ಶ್ರಾದ್ಧ ಮಾಡಿಸಿದ ಬ್ರಾಹ್ಮಣನಿಂದ ನೀವು ಕೊಟ್ಟ ದಕ್ಷಿಣೆಯನ್ನು ಕಿತ್ತಿಕೊಳ್ಳುತ್ತೀರಾ? ಹಾಗೆಯೆ ಇದು. ಸ್ವಾಮೀ, ಒಬ್ಬ ಕಾನ್‌ಸ್ಟೆಬಲ್‌ನಿಂದ ಹಿಡಿದು ಮುಖ್ಯಮಂತ್ರಿಯವರೆಗೂ ದಕ್ಷಿಣೆಯೆನ್ನುವುದು ಈಗ Stipulate ಆಗಿರುತ್ತದೆ. ಇದರಲ್ಲಿ ಒಂದಂಕಿ ಲಾಟ್ರಿಯಲ್ಲಿ ಒಬ್ಬ ಕಾನ್‌ಸ್ಟೆಬಲ್ ಮಾತ್ರವೇ ಅಪರಾಧಿ ಎಂದು ಹೇಗೆ ಹಿಡಿಯಲಿಕ್ಕೆ ಬರುತ್ತದೆ.

ಈಗ ಲಂಚವನ್ನು ಲೀಗಲೈಜ್ ಮಾಡಿಬಿಟ್ಟರೆ ತೀರಿತಲ್ಲ? ನಿಮ್ಮ ಭ್ರಷ್ಟಾಚಾರದ ಆರೋಪಕ್ಕೆ ಆಸ್ಪದವೇ ಇರುವುದಿಲ್ಲ. ಅದಕ್ಕೇ ನಾನು ಹೇಳಿದ್ದು Stipulation ಎಂದು!

## ಬೆಸುಗೆ

ಜೋಡಿ ಕಂಗಳ
ಮೌನದ ಮಾತು
ಹೃದಯ
ಬೆಸೆಯುವ ಸೇತು

- ಅಣ್ಣಯ್ಯ ಗಾಂವ್ಕರ

ಇಂದಿನ ಜಾಗತಿಕ ಏಕಮೇವ ಮಹಾ ಡೆಮಾಕ್ರಸಿ, ನಮ್ಮ ಮಹಾಭಾರತ! ಇಲ್ಲಿ ಲಂಚವನ್ನು Legalise ಮಾಡಬೇಕು. ಅದಕ್ಕೊಂದು ಪ್ರಮಾಣಬದ್ಧ ದಕ್ಷಿಣೆಯ ಕೋಷ್ಟಕವನ್ನು ಅರ್ಥಮಂತ್ರಿಗಳು ಪ್ರಸ್ತಾಪವೊಂದನ್ನು ಮಂಡಿಸಿ ಬಿಟ್ಟರಾಯಿತಲ್ಲ! ಬಹುಮತ ಸ್ವೀಕೃತಿ ದೊರಕುವುದೇ ಡೆಮಾಕ್ರಸಿಯ ಲಕ್ಷಣ. ಮತಿ ಇರಲಿ ಬಿಡಲಿ ಮತವಲ್ಲವೆ ಮುಖ್ಯವಾದದ್ದು? ಅದರಲ್ಲೂ ಬಹುಮತ ಎಂಬುದೊಂದಿದ್ದುಬಿಟ್ಟರೆ ಈ ಡೆಮಾಕ್ರಸಿಯಲ್ಲಿ ಯಾವುದೂ ನ್ಯಾಯಬದ್ಧವಾದೀತು.

ಲೋಕಸಭೆಯಲ್ಲಿ ಈಗ ೭೫ರಷ್ಟು ಅಮೆಂಡ್‌ಮೆಂಟ್ಸ್‌ಗಳನ್ನು ತಂದಿರಬಹುದು. ಬಹುಮತದಿಂದ ಇನ್ನೂ ನೂರಾರು ಅಮೆಂಡ್‌ಮೆಂಟ್ಸ್ ತಂದು ಸಂವಿಧಾನವನ್ನೇ ಶೂನ್ಯ ವಿಧಾನವನ್ನಾಗಿ ಮಾಡಲಿಕ್ಕೆ ಬರಬಹುದೇನೋ! ಇರಲಿ. ಲಂಚವನ್ನೂ ಅದೊಂದು 'ಖುಷಿ' - ಎಂದು ಭಾವಿಸುವುದರಿಂದ ಅದು ಅಪರಾಧವಾಗಲಿಕ್ಕಿಲ್ಲ ಎಂಬ ಒಂದು ಅಮೆಂಡ್‌ಮೆಂಟ್ ತರುವುದೇನೂ ಅಷ್ಟು ಕಷ್ಟದ್ದಲ್ಲ.

ನಮ್ಮ ಡೆಮಾಕ್ರಸಿ ಏನೇನೋ ದಕ್ಕಿಸಿಕೊಂಡಿದೆ. ಸಿ.ಬಿ.ಐ. ಚಾರ್ಜ್‌ಶೀಟ್ ಇಂತಹವೆಲ್ಲಾ ಬರಿ ಕಾಗದದ ಹುಲಿಗಳಾಗಿಬಿಟ್ಟ ಮೇಲೆ ಡೆಮಾಕ್ರಸಿ ಏನು ಮಾಡಿಯೂ ಏನನ್ನೂ ದಕ್ಕಿಸಿಕೊಳ್ಳಬಹುದು. ಅಂತರಶೂರ, ರಸಿಕ, ಕಲಾಪ್ರೇಮೀ ಮಂತ್ರಿಗಳು, ಮುಖ್ಯಮಂತ್ರಿಗಳು ಇದ್ದಮೇಲೆ ಭಾರತದ ಮಹಾಡೆಮಾಕ್ರಸಿ 'ಡೆಮನಾಕ್ರಸಿ', 'ದ್ಯಾಮವ್ವನ ಮೆರವಣಿಗೆ' (ಕವಿ ಬೇಂದ್ರೆ, ಕವನ ಶೀರ್ಷಿಕೆ) ಏನೂ ಆಗಬಹುದು.

# ವಿಶ್ವ ಸುಂದರಿಯರು ಏನು ಮಾಡುತ್ತಿದ್ದಾರೆ?

ವಿಶ್ವ ಸುಂದರಿಯಾಗಿ ಆಯ್ಕೆಯಾದರೆ ಸಾಕು. ಹೆಸರಿಗೆ ಹೆಸರು ಹಣಕ್ಕೆ ಹಣ ಹೀಗೆ ಅದೃಷ್ಟದ ಬಾಗಿಲೇ ತೆಗೆದುಬಿಡುತ್ತದೆ. ಅತ್ತ ಐಶ್ವರ್ಯ, ಇತ್ತ ಯಶಸ್ಸು. ಇವೆರಡು ದೊರೆತರೆ ಮತ್ತೇನು ಬೇಕು ಜೀವನ ಸಾಧನೆಗೆ?

ಆದರೆ ಅಂದದ ರಾಣಿಯರಾಗಿ ಯಾರೇ ಆಗಲಿ ರಾರಾಜಿಸುವುದು ಒಂದು ವರ್ಷ ಮಾತ್ರ. ಆನಂತರ ಅವರು ಏನು ಮಾಡುತ್ತಿರುತ್ತಾರೆ ಎನ್ನುವುದು ಎಲ್ಲರನ್ನು ಕಾಡುವ ಪ್ರಶ್ನೆ. ಕಳೆದ ಮೂವತ್ತು ವರ್ಷಗಳಿಂದ ಸುಂದರಿಮಣಿಯರು ಪ್ರಾಮುಖ್ಯ ನೀಡುತ್ತಿರುವ ರಂಗಗಳು ಬದಲಾಗುತ್ತಿವೆ. ಕಳೆದ ಹದಿನೈದು ವರ್ಷದಿಂದೀಚೆಗೆ ಮಿಸ್ ಇಂಡಿಯಾ ಕಿರೀಟ ಗೆದ್ದುಕೊಂಡವರು ಸೌಂದರ್ಯಕ್ಕೆ ಸಂಬಂಧವಿರುವ ರಂಗಗಳಲ್ಲಿ (ನಟನೆ, ಮಾಡೆಲಿಂಗ್ ಫ್ಯಾಷನ್ ಡಿಜೈನಿಂಗ್) ನೆಲೆ ಹೊಂದಿದರು. ಉಳಿದ ಹತ್ತು ಮಂದಿಯಲ್ಲಿ ಇಬ್ಬರು ನ್ಯಾಯವಾದಿಗಳಾಗಿ

ಚಿತ್ರ : ಕೆ.ಎಂ.ವೀರೇಶ್



**ಭಾರತ ಸುಂದರಿಯರಾಗಿ, ವಿಶ್ವ ಸುಂದರಿಯರಾಗಿ ಆಯ್ಕೆಯಾಗುವ ಲಲನೆಯರು ಅನೇಕ ನುಡಿಮುತ್ತುಗಳನ್ನು ಉದುರಿಸುತ್ತಾರೆ. ಅವರೆದುರಿನ ಹಲವು ಹಾದಿಗಳಲ್ಲಿ ಒಂದನ್ನು ಆಯ್ದುಕೊಳ್ಳುತ್ತಾರೆ. ಹೀಗೆ ಆಯ್ಕೆ ಮಾಡಿಕೊಂಡ ಹಾದಿಯಲ್ಲಿ ಈ ತಿಲೋತ್ತಮೆಯರು ಎಷ್ಟು ದೂರ ನಡೆದಿದ್ದಾರೆ? ಎಲ್ಲಿ ತಂಗಿದ್ದಾರೆ? ಆಡಿದ್ದನ್ನೆಷ್ಟು ಆಗು ಮಾಡಿದ್ದಾರೆಯೆ? ಒಂದು ಕುತೂಹಲಕಾರಿ ಪರಿಶೀಲನೆ ಇಲ್ಲಿದೆ.**

ಮುಂದುವರಿಯುತ್ತಿದ್ದಾರೆ. ಉಳಿದೆಲ್ಲಾ ಮಿಸ್ ಇಂಡಿಯಾಗಳು ಮಾಡೆಲಿಂಗ್, ನಟನಾರಂಗ ದಲ್ಲಿ ನೆಲೆ ನಿಂತರು. ಕೆಲವರು ಮಾಡೆಲಿಂಗ್ ನಲ್ಲಿ ಮುಂದುವರಿದರೂ ತಮಗಿಷ್ಟವಾದ ವಿದ್ಯಾಭ್ಯಾಸವನ್ನು ಮುಂದುವರಿಸುವುದಾಗಿ ಹೇಳುತ್ತಿದ್ದಾರೆ. ಮನ್‌ಪ್ರಿತ್‌ಬ್ರಾರ್ ಮಾಡೆಲ್ಲಾಗಿ ಎಷ್ಟು ಬಿಜಿ ಇದ್ದರೂ ಎಂ.ಬಿ.ಎ. ಯನ್ನು ಪೂರ್ತಿಗೊಳಿಸುವುದು ತಮ್ಮ ಧ್ಯೇಯ ವಾಗಿದೆ ಎನ್ನುತ್ತಿದ್ದಾರೆ. ಸಿನಿಮಾರಂಗದಲ್ಲಿ ಅವಕಾಶಗಳು ಸಿಕ್ಕರೂ, ಪ್ರಮುಖವಲ್ಲದ ಪಾತ್ರಗಳಲ್ಲಿ, ಕಥಾಬಲವಿಲ್ಲದ ಸಿನಿಮಾಗಳಲ್ಲಿ ನಟಿಸುವುದು ಇಷ್ಟವಿಲ್ಲದಿದ್ದರಿಂದ ನಿರಂತರವಾಗಿ ಈ ರಂಗವನ್ನು ತಿರಸ್ಕರಿಸಿದರು. ಪುಸ್ತಕ ಪ್ರಿಯೆಯಾದ ರಾಣಿ ಜಯರಾಜ್ ಬಿ.ಎ. ಪೂರ್ಣಗೊಳಿಸಿದರು. ಮಾಸ್‌ಕಮ್ಯುನಿಕೇಷನ್ ಡಿಪ್ಲೊಮಾದಲ್ಲಿ ತಮ್ಮ ದೃಷ್ಟಿ ಹರಿಸಿದ್ದಾರೆ. ನಂತರ ಟಿ.ವಿ. ಪತ್ರಕರ್ತೆಯಾಗಿ ರಾಣಿ ಸಧ್ಯದಲ್ಲಿ ರಾರಾಜಿಸುತ್ತಿದ್ದಾರೆ. ಮಾಡೆಲಿಂಗ್, ಫ್ಯಾಷನ್ ಪ್ರಪಂಚದಲ್ಲಿ ಯಾವ ಗಂಧವಿಲ್ಲದೆ ಮಿಸ್ ಇಂಡಿಯಾ-ಏಶಿಯಾ ಪೆಸಿಫಿಕ್ ಗೆದ್ದುಕೊಂಡರು ಮಿನಿ ಮೀನನ್. ಇವರಿಗೆ ಫೋಟೋಗ್ರಫಿ ಪರ್ಯಟನೆ ಎಂದರೆ ಮಹಾ ಪ್ರೀತಿ. ಮಿಸ್ ಇಂಡಿಯಾ ಆದ್ದರಿಂದ ಮಾಡೆಲಿಂಗ್ ಅವಕಾಶ ಒದಗಿಬಂದಿತು. ಆದರೂ ಮಾಡೆಲಿಂಗ್‌ನಲ್ಲಿ ಸ್ಥಿರತೆ ಪಡದೆ ವಿದೇಶಗಳಲ್ಲಿ ಉನ್ನತ ವಿದ್ಯಾಭ್ಯಾಸ ಮಾಡ ಬೇಕೆನ್ನುವ ಹಟವಿದೆ. ಸಂಧ್ಯಾ ಜಿಬ್‌ಗೆ ಸಾಹಸ ಕಾರ್ಯಗಳನ್ನು ಮಾಡಬೇಕೆಂಬ ಹಂಬಲ. ಹದಿನೈದು ವರ್ಷಕ್ಕೆ ಸಂಧ್ಯಾ ಮೋಟಾರ್ ಬೈಕನ್ನು ನಡೆಸುತ್ತಿದ್ದರಂತೆ. ಟ್ರಕ್ಕಿಂಗ್, ಟ್ರಾವಲಿಂಗ್ ಈಕೆಗೆ ಪ್ರಿಯವಾದ ಹವ್ಯಾಸ ಗಳು. ಮಿಸ್ ಇಂಡಿಯಾ ಸ್ಪರ್ಧೆಯಿಂದಾಗಿ ಪದವಿ ಮಾಡಲಿಲ್ಲವಾದರೂ ಸಪ್ಲಿಮೆಂಟರಿ ಪರೀಕ್ಷೆ ತೆಗೆದುಕೊಂಡು ಪದವಿ ಪಡೆದ ನಂತರವೇ ಮಾಡೆಲಿಂಗ್ ಜೀವನದ ಕುರಿತು ಗಂಭೀರವಾಗಿ ಆಲೋಚಿಸುತ್ತಾರಂತೆ. ರೇಡಿಯೊದಲ್ಲಿ ಕೆಲಸ ಮಾಡುವುದು ಸಂಧ್ಯಾಗೆ ಇಷ್ಟವಾದ್ದುದಂತೆ. ಸುಂದರಿಯರ ಕಿರೀಟ ದೊಂದಿಗೆ ಸಾಕಷ್ಟು ಬಹುಮಾನ, ಮಾಡೆಲಿಂಗ್ ಆಹ್ವಾನ ಬಂದರೂ ಕೆಲವರು ಧನಕ್ಕಾಗಿ ಆಸೆ ಪಡದೇ ಇರುವುದು ಹರ್ಷ ಪಡಬೇಕಾದ ವಿಷಯವಾಗಿದೆ. ಹಲವರು ಮುಂದೆ ನಿಂತು ಇದು 'ಮಿಸ್ ಇಂಡಿಯಾ' ಮುಖ ಎಂದು ಬೀಗದೆ, ದಿನದಲ್ಲಿ ಪಾಲುಗೊಳ್ಳಬೇಕಾದ ರಿಹರ್ಸಲ್‌ಗೆ, ಶೂಟಿಂಗ್‌ಗೆ ದೌಡಾಯಿಸುತ್ತಿರು ತ್ತಾರೆ. ಭವಿಷ್ಯತ್ ಜೀವನ ಕುರಿತು ಯೋಜನೆ ಯನ್ನು ರೂಪಿಸಿಕೊಂಡವರಿದ್ದಾರೆ.



ಚಿತ್ರ : ಕೆ.ಎಂ.ವೀರೇಶ್

೨೫ ವರ್ಷಗಳಿಗಿಂತಲೂ ಹೆಚ್ಚು ಸ್ಪರ್ಧೆಗಳ ನಿರ್ವಾಹಕರಾಗಿ ಕೆಲಸ ಮಾಡುತ್ತಿರುವ ವಿಮಲ್‌ಪಾಟೀಲ್‌ರವರ ಮಾತನ್ನು ಒಮ್ಮೆ ನೆನಪಿಸಿಕೊಳ್ಳುವುದು ಅವಶ್ಯವಾಗಿದೆ. 'ಮಿಸ್ ಇಂಡಿಯಾ'ಗಳು ಅಂದವಾಗಿ, ಆರೋಗ್ಯವಂತರಾಗಿ, ಆಧುನಿಕ ಭಾರತದ ಪ್ರಾತಿನಿಧಿಕ ಸ್ತ್ರೀಯಾಗಿ ಇರಬೇಕು. ಬುದ್ಧಿವಂತಿಕೆಯಲ್ಲೂ ಚುರುಕಾಗಿರಬೇಕು.

ಸುಸ್ಮಿತಾ ಜೀವನ ತೆಗೆದುಕೊಂಡರೆ ಆಕೆ ತಂದೆ ನಿವೃತ್ತ ಏರ್‌ಫೋರ್ಸ್ ಆಫಿಸರ್. ಈಕೆ ವಿಶ್ವಸುಂದರಿಯಾಗಿ ಆಯ್ಕೆಯಾದ ಮೇಲೆ ಸಂದ ಪಾರಿತೋಷಕಗಳು ಅಷ್ಟಿಷ್ಟಲ್ಲ. ವಿಶ್ವಸುಂದರಿ ಕಿರೀಟದೊಂದಿಗೆ ಈಕೆಗೆ ೭೨ ಲಕ್ಷ ರೂ ಪಾರಿತೋಷಕ ಲಭಿಸಿತು. ಆ ವರ್ಷ ಆಕೆಗೆ ೧೬ ಲಕ್ಷ ರೂ. ಗಳ ವೇತನ ಸಹ ಲಭಿಸಿತು. ವಿಶ್ವಸುಂದರಿಯಾಗಿ ಆಕೆ 'ಮಾಡೆಲಿಂಗ್' ಮೂಲಕ ಸಿನಿಮಾದಲ್ಲಿ ನಟಿಸುವುದರ ಮೂಲಕ ಸಂಪಾದನೆ ಮಾಡಿದರು. ಹೀಗೆ ಆಕೆ ವರ್ಷಕ್ಕೆ ೫೦ ಲಕ್ಷಕ್ಕೂ ಹೆಚ್ಚು ಆದಾಯಗಳಿಸುತ್ತಿದ್ದಾರೆ ಎಂಬುದು ಕೆಲವರ ಹೇಳಿಕೆ.

ಐಶ್ವರ್ಯ ರೈ ವಿಶ್ವಸುಂದರಿಯಾಗಿ ಆಯ್ಕೆ ಯಾಗುವ ಮುಂಚೆ 'ಭಾರತ ಸುಂದರಿ'ಯಾಗಿ

ಆಯ್ಕೆಯಾದರು. ಈಕೆ ಮಿಸ್ ಇಂಡಿಯಾ ಆದಾಗಲೇ ಹೆಚ್ಚು ಫೀಜ್ ವಸೂಲಿ ಮಾಡುತ್ತಿದ್ದರು. ವಿಶ್ವಸುಂದರಿಯಾದ ಮೇಲೆ ಆಕೆಯ ಒಂದು ಫೋಟೊಗೆ ೨೫ ಸಾವಿರ ಚಾರ್ಜ್ ಮಾಡಿದರು. ಈಗ ಈಕೆ ಒಂದು ಮಾಡ್ ಫಿಲಂ ಮಾಡಲು ೩ ಲಕ್ಷ ರೂ. ಕೇಳುತ್ತಿದ್ದಾರೆ. ವಿಶ್ವಸುಂದರಿ ಜೊತೆಗೆ ಈಕೆಗೆ ೧.೬ ಕೋಟಿ ರೂ. ಬಹುಮಾನ ಬಂದಿತು.

## ಯಾವ ಸುಂದರಿ ಯಾವ ವೃತ್ತಿಯಲ್ಲಿ?

೧೯೬೪ - **ಮೆಹರ್ ಕಾಜೆಲಿನ್** - ಮಾಡೆಲ್ ಕೋ ಆರ್ಡಿನೇಟರ್, ಡಿಜೈನರ್ ಜರ್ನಲಿಸ್ಟ್
೧೯೬೫ - **ಪೆರ್ಸಿಸ್ ಖಂಬಾಟಾ** - ಹಾಲಿವುಡ್ ತಾರೆ
೧೯೬೬ - **ಯಾಸ್ಮಿನ್‌ದಾಜಿ** - ವಿದೇಶಗಳಲ್ಲಿ ನೆಲೆ ಹೊಂದಿದರು.
೧೯೬೭ - **ನಾಯರಾಮರ್ಝಾ** - ಮದುವೆ ಮಾಡಿಕೊಂಡು ಲಕ್ನೊದಲ್ಲಿ ನೆಲೆಸಿದರು.
೧೯೬೮ - **ಅಂಜುಂ ಮುಂತಾಜ್‌ಬೇಗ್** - ಹೈದರಾಬಾದಿನಲ್ಲಿ ನೆಲೆಸಿದರು.
೧೯೬೯ - **ಕವಿತಾ ಬಂಬಾನಿ** - ಇಂಟಿರಿಯರ್ ಡಿಜೈನರ್
೧೯೭೦ - **ವೀಣಾ ಸಜ್ನಾನಿ** - ಫ್ಯಾಷನ್ ಡಿಜೈನರ್, ಬೆಂಗಳೂರು
೧೯೭೧ - **ರಾಜ್‌ಗಿಲ್** - ನ್ಯಾಯವಾದಿ, ದೆಹಲಿ
೧೯೭೨ - **ರೂಪಾ ಸತ್ಯಂ** - ಬೆಂಗಳೂರಿನಲ್ಲಿ ನರ್ಸರಿಶಾಲೆ ನಡೆಸುತ್ತಿದ್ದಾರೆ.
೧೯೭೩ - **ಫರ್ಜಾನಾ ಹಬೀದ್** - ಲಕ್ನೊ
೧೯೭೪ - **ಶಾಲಿನಿ ಧೊಲಕಿಯಾ** - ಮಾಡೆಲ್
೧೯೭೫ - **ಮೀನಾಕ್ಷಿ ಕುರ್ವಾದ್** - ಎಲ್ಲಿದ್ದಾರೊ ಗೊತ್ತಿಲ್ಲ
೧೯೭೬ - **ನೈನಾ ಬಲ್ಸಾವರ್** - ಮಾಡೆಲ್, ಬ್ಯೂಟಿ ಕನ್ಸಲ್ಟೆಂಟ್, ಟಿ.ವಿ.ತಾರೆ
೧೯೭೭ - **ನಳಿನಿ ವಿಶ್ವನಾಥನ್** - ಮದುವೆ ಮಾಡಿಕೊಂಡು ಮದ್ರಾಸಿನಲ್ಲಿ ನೆಲೆಸಿದ್ದಾರೆ
೧೯೭೮ - **ಅಲಂಜಿತ್ ಚೌಹಾನ್** - ಸುಪ್ರಿಂಕೋರ್ಟ್ ನ್ಯಾಯವಾದಿ
೧೯೭೯ - **ಸ್ವರೂಪ್ ಸಂಪತ್** - ಟಿ.ವಿ. ಥಿಯೇಟರ್ ನಟಿ, ಮುಂಬೈ
೧೯೮೦ - **ಸಂಗಿತ ಬಿಜಲಾನಿ** - ಮಾಡೆಲ್, ಸಿನಿಮಾ ತಾರೆ
೧೯೮೧ - **ರಚಿತ ಕುಮಾರ್** - ವಾಣಿಜ್ಯೋದ್ಯಮಿಯನ್ನು ಮದುವೆ ಮಾಡಿಕೊಂಡರು
೧೯೮೨ - **ಪಮೆಲ್ಲಾ ಸಿಂಗ್** - ಪ್ರಸ್ತುತ ವಾರ್ತೆ ಓದುತ್ತಾರೆ
೧೯೮೩ - **ರೇಖಾ ಹಂಡೆ** - ಮಾಡೆಲ್
೧೯೮೪ - **ಜೂಹಿ ಚಾವ್ಲಾ** - ಸಿನಿಮಾ ತಾರೆ
೧೯೮೫ - **ಸೋನುವಾಲಿಯಾ** - ಸಿನಿಮಾ ತಾರೆ
೧೯೮೬ - **ಮೆಹರ್‌ಜೆಸಿಯಾ** - ಉತ್ತಮ ಮಾಡೆಲ್
೧೯೮೭ - **ಪ್ರಿಯದರ್ಶಿನಿ ಪ್ರಧಾನ್** - ಮಾಡೆಲ್
೧೯೮೮ - **ಡಾಲಿ ಮಿನ್ವಾಸ್** - ಸಿನಿಮಾ ತಾರೆ
೧೯೮೯/೯೦ - **ಸುಜನ್ನ ಸಬ್‌ಲೋಕ್** - ಮಾಡೆಲ್
೧೯೯೧ - **ಕ್ರಿಸ್ಟಾಬೆಲ್ ಹೋವೆ** - ಮದ್ರಾಸಿನಲ್ಲಿದ್ದಾರೆ.
೧೯೯೨ - **ಮಧುಸಪ್ರೆ** - ಉತ್ತಮ ಮಾಡೆಲ್
೧೯೯೩ - **ನಮ್ರತಾ ಶಿರೋಡ್ಕರ್** - ಉತ್ತಮ ಮಾಡೆಲ್
೧೯೯೪ - **ಸುಸ್ಮಿತಾ ಸೇನ್** - ಮಾಡೆಲ್, ಮಿಸ್‌ಯೂನಿವರ್ಸ್
೧೯೯೫ - **ಮಾನ್‌ಪ್ರಿತ್‌ಬ್ರಾರ್** - ಮಾಡೆಲ್
೧೯೯೬ - **ಸಂಧ್ಯಾ ಬಿಚ್** - ಮಾಡೆಲ್

ಇದಲ್ಲದೆ ಗಿಫ್ಟ್ ರೂಪದಲ್ಲಿ ಅದೆಷ್ಟು ಬಂದಿದೆಯೋ ಲೆಕ್ಕವಿಲ್ಲ.

ಈಗ ಮಿಸ್ ಇಂಡಿಯಾ ಆಗಿ ಗೆದ್ದವರು ಸಹ ಮಾಡಲಿಂಗ್‌ಗೆ ೧೫ ಸಾವಿರ ರೂಪಾಯಿ ಬೇಡಿಕೆಯಿಡುತ್ತಿದ್ದಾರೆ. ಹೀಗೆ ಸುಂದರಿಯರ ಆದಾಯ ಹೆಚ್ಚುತ್ತಲೇ ಹೋಗುತ್ತಿದೆ.

ವಿಶ್ವಸುಂದರಿ ಕಿರೀಟ ಧರಿಸಿದ ಸುಂದರಿಯರು ಹಿಂದೆ ಬಹಳ ಮಂದಿ ಸಿನಿಮಾದಲ್ಲಿ ನಟಿಸಿದರು. ಹಾಗೆಯೇ ಸುಸ್ಮಿತಾಸೇನ್ ಹಾಗೂ ಐಶ್ವರ್ಯ ರೈ ಈಗ ಸಿನಿಮಾದಲ್ಲಿ ನಟಿಸುತ್ತಿದ್ದಾರೆ. ಈ ಸೌಂದರ್ಯವತಿಯವರ ಅಂತಿಮ ಗುರಿ ಸಿನಿಮಾರಂಗವೇ ಆಗಲಿದೆಯೇನೊ ಕಾದುನೋಡಬೇಕು.

**ಸೇವಾಕರ್ತೆ ಐಶ್ವರ್ಯ ರೈ :** ವಿಶ್ವಸುಂದರಿ ಕಿರೀಟ ಸಂದುವ ತುದಿಕ್ಷಣದಲ್ಲಿ ಐಶ್ವರ್ಯ ರೈ ಸಮಾಜ ಸೇವೆ ಕುರಿತಾದ ನುಡಿಗಳನ್ನು ಆಡಿದರು. ಅನೇಕರು ದಾರಿದ್ರ್ಯದ ಕುರಿತು, ಬಡತನ, ಬಾಲಕಾರ್ಮಿಕರ ಕುರಿತು ಮಾತನಾಡುತ್ತಾರೆ. ಆದರೆ ಆಚರಣೆಗೆ ಬರುವಾಗ ಎಲ್ಲರೂ ಧನದ ಸಂಪಾದನೆಯಲ್ಲಿ ಮುಳುಗುತ್ತಾರೆ. ೧೯೯೪ರಲ್ಲಿ ವಿಶ್ವಸುಂದರಿ ಕಿರೀಟ ಧರಿಸಿದ ಮಂಗಳೂರಿನ ಐಶ್ವರ್ಯ ರೈ ತಾನು ಭಾರತದ ಬಾಲಕಾರ್ಮಿಕರ ಏಳಿಗೆಗಾಗಿ ದುಡಿಯುವುದಾಗಿ ತಿಳಿಸಿದರು. ಅವರ ಸಾಮಾಜಿಕ ಕಳಕಳಿಯ ಆಲೋಚನೆಗಳಿಗೆ ಭಾರತ ಅಭೂತಪೂರ್ವ ಸ್ವಾಗತ ನೀಡಿತು.

ಟಿ.ವಿ.ಯ ಸಾಕಷ್ಟು ಚಾನೆಲ್‌ಗಳಲ್ಲಿ 'ಲುಕಿಂಗ್ ಎ ಗ್ರೀನ್ ಐ' ಎಂದು ಬರುವ ಜಾಹಿರಾತಿನ ಪ್ರಭಾವ ಸಾಕಷ್ಟು ಜನತೆ ಮೇಲೆ ಉಂಟಾಗಿದೆ. ಐಶ್ವರ್ಯರೈ ಈ ಜಾಹೀರಾತಿನಲ್ಲಿ ಕಾಣಿಸಿಕೊಂಡು 'ನೇತ್ರದಾನ' ಮಾಡಬೇಕೆಂದು ವಿನಂತಿಸಿರುವುದು ಎಲ್ಲರನ್ನು ಆಕರ್ಷಿಸುತ್ತದೆ. ಕಳೆದ ಕೆಲವು ತಿಂಗಳುಗಳ ಹಿಂದಿನಿಂದ ಈಕೆ ನೀಡುತ್ತಿರುವ ಪ್ರಚಾರದಿಂದಾಗಿ ಸಾಕಷ್ಟು ಸಂಖ್ಯೆಯಲ್ಲಿ ನೇತ್ರದಾನ ನಡೆದಿವೆ. ಭಾರತ ದೇಶದ ೧೦,೦೦೦ ಮಂದಿ ಸೈನಿಕರು 'ಕಣ್ಣಿನ ದಾನ' ನೀಡುವುದಾಗಿ ಮುಂದೆ ಬಂದಿದ್ದಾರೆ. ವಿಶ್ವಸುಂದರಿ ಪಟ್ಟ ಪಡೆದ ಕೆಲವರಲ್ಲಿ ಮಾತ್ರ ಇಂಥ ಸಾಮಾಜಿಕ ಕಳಕಳಿ ಇರಲು ಸಾಧ್ಯ.

ಸುಂದರಿಯರು ಇಂತಹ ಸಾಮಾಜಿಕ ಕಾರ್ಯಕ್ರಮದಲ್ಲಿ ಭಾಗವಹಿಸಲೆಂದು ಜನತೆ ಆಶಿಸುತ್ತದೆ.

**○ ಕೆ. ಶಾಂತಕುಮಾರಿ**

# ಕ್ವಿಜ್-೨ರ ಬಹುಮಾನ ವಿಜೇತರು

## ಪ್ರಥಮ ಬಹುಮಾನ
ರೂ. ೫೦೦-೦೦



**ಈರಮ್ಮ ಯು.ಸಿ.**
D/o ಚಂದ್ರಶೇಖರಪ್ಪ,
ಚನ್ನಬಸವ ನಿಲಯ
೬ನೇ ಕ್ರಾಸ್, ಭಗತ್‌ಸಿಂಗ್ ನಗರ,
ಡಾಂಗೇ ಪಾರ್ಕ್ ಎದುರು, ದಾವಣಗೆರೆ-೨.

## ದ್ವಿತಿಯ ಬಹುಮಾನ
ರೂ. ೨೦೦-೦೦

**ಎಂ. ಅಜ್ಜಪ್ಪ,** ಶಿಕ್ಷಕರು
ಸರಕಾರಿ ಹಿರಿಯ ಪ್ರಾಥಮಿಕ ಶಾಲೆ
ಜೆ.ಮ್ಯಾಸರಹಟ್ಟಿ - ೫೮೩ ೧೨೬
ತಾ : ಕೂಡ್ಲಿಗಿ, ಜಿಲ್ಲೆ : ಬಳ್ಳಾರಿ

*ಕ್ವಿಜ್-೨ರ ಸರಿಯುತ್ತರ :*

೧. ೧೯೭೩ ನವೆಂಬರ್ ೧ ರಂದು
೨. ಮುಧೋಳ
೩. ಹೊಸಪೇಟೆ, ಮಲ್ಲಾಪುರ, ಮುನಿರಾಬಾದ್
೪. ಕೋಲಾರ ಮತ್ತು ಹಟ್ಟಿ
೫. ಸರ್. ಎಂ.ವಿಶ್ವೇಶ್ವರಯ್ಯನವರು

## ಸಮಾಧಾನಕರ ಬಹುಮಾನಗಳು

**ತಲಾ ರೂ. ೧೦೦/-**

**ಮಂಜುನಾಥ ಬಾಪು ಮುರನಾಳ**
C/o ಬಾಪುರಾಯ ಪ.ಮುರನಾಳ
ಬಬಲೇಶ್ವರ - ೫೮೬ ೧೧೩, ಬಿಜಾಪುರ ಜಿಲ್ಲೆ

**ಎಸ್.ಎ. ಶೈಲಜ**
C/o ಎ.ಗಿರೀಶ್
ನಿಂಬಳಗೇರೆ -೫೮೩ ೧೩೬
ತಾ : ಕೂಡ್ಲಿಗಿ, ಜಿಲ್ಲೆ : ಬಳ್ಳಾರಿ

**ಎನ್. ಅರ್ಪಣಾ**
D/o ಕೆ. ನಾಗೇಶರಾವ್
C/o ಬಿ. ಸೂರ್ಯನಾರಾಯಣರಾವ್, ಅಗ್ರಹಾರ,
ರಾಮು ಅಂಗಡಿ ಹತ್ತಿರ,
ಸಾಗರ - ೫೭೭ ೪೦೧ ಶಿವಮೊಗ್ಗ ಜಿಲ್ಲೆ

---

| | |
|---|---|
| ಮೊದಲ ಬಹುಮಾನ | ರೂ. ೫೦೦/- |
| ಎರಡನೇ ಬಹುಮಾನ | ರೂ. ೨೦೦/- |
| ಸಮಾಧಾನಕರ ಬಹುಮಾನಗಳು (ಮೂರು) | ರೂ. ೧೦೦/- |

**ವಿವರ :**

- ಪಕ್ಕದಲ್ಲಿ ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಆಯಾ ಪ್ರಶ್ನೆಯ ಕೆಳಗೆ ನೀಡಲಾದ ಸ್ಥಳದಲ್ಲಿ ಬರೆಯಿರಿ.
- ಒಬ್ಬರು ಎಷ್ಟು ಪ್ರವೇಶ ಪತ್ರಗಳನ್ನಾದರೂ ಕಳಿಸಬಹುದು. ಆದರೆ ಪಕ್ಕದಲ್ಲಿರುವ ಪ್ರವೇಶ ಕೂಪನ್ನನ್ನೇ ಬಳಸಬೇಕು. ಜೆರಾಕ್ಸ್ ಪ್ರತಿ ಪರಿಗಣಿಸುವುದಿಲ್ಲ.
- ಪ್ರಥಮ-ದ್ವಿತಿಯ ಬಹುಮಾನ ಪಡೆದವರ ಭಾವಚಿತ್ರ ಪ್ರಕಟಿಸಲಾಗುವುದು.
- ಸರಿಯುತ್ತರಗಳ ಪ್ರವೇಶ ಪತ್ರಗಳನ್ನೆಲ್ಲಾ ಸೇರಿಸಿ ಲಾಟರಿ ಮೂಲಕ ಬಹುಮಾನಗಳನ್ನು ನಿರ್ಧರಿಸಲಾಗುವುದು.
- ಪ್ರವೇಶ ಪತ್ರ ತಲುಪಲು ಅಂತಿಮ ದಿನಾಂಕ ೦೧-೦೯-೧೯೯೭

# ಕ್ವಿಜ್ - ೩

೧. ಕರ್ನಾಟಕ ಏಕೀಕರಣ ನಂತರದ ಮೊದಲ ಮುಖ್ಯ ಮಂತ್ರಿ ಯಾರು?

..........................................

೨. ದಾದಾ ಸಾಹೇಬ ಫಾಲ್ಕೆ ಪ್ರಶಸ್ತಿ ಪಡೆದ ಕನ್ನಡ ನಟ ಯಾರು?

..........................................

೩. ಚಾಲುಕ್ಯರ ರಾಜಧಾನಿ ಯಾವುದಾಗಿತ್ತು?

..........................................

೪. ಜಗತ್ಪ್ರಸಿದ್ಧ ಶಿಲಾ ಬಾಲಕಿಯರನ್ನು ಕೆತ್ತಿರುವ ದೇವಾಲಯ ಯಾವ ಊರಿನಲ್ಲಿದೆ?

..........................................

೫. ಜೋಗ ಜಲಪಾತ ಯಾವ ಜಿಲ್ಲೆಯಲ್ಲಿದೆ?

..........................................

ಹೆಸರು..........................................
ವಿಳಾಸ..........................................
..........................................
..........................................
ಪಿನ್ ಕೋಡ್.............................. ದೂರವಾಣಿ..............................
ಪ್ರವೇಶ ಪತ್ರಗಳನ್ನು ಕಳುಹಿಸಬೇಕಾದ ವಿಳಾಸ :
ಸಂಪಾದಕರು, ಬಿಸಿಲ ಬದುಕು, ಅಂಚೆ ಪೆಟ್ಟಿಗೆ ೭೯೫೧, ಬಸವೇಶ್ವರ ನಗರ, ಬೆಂಗಳೂರು-೭೯.

# ಕ್ಲಾಸ್ ರೂಂ

## ತಿರುಗುಬಾಣ !

ಒಂದು ದಿನ ವರ್ಗದ ಗುರುಗಳು ತರಗತಿಗೆ ಬಂದರು. ನನ್ನ ಸ್ನೇಹಿತ 'ಸಾರ್' ಎಂದು ಕೂಗಿದ. ಒಮ್ಮೆಲೇ ಮೇಷ್ಟ್ರು 'ಏನಲೇ' ಎಂದು ಗದರಿಸಿದರು. ಮಲ್ಲೇಶಿಯು ಸುಮ್ಮನಿರದೇ, ''ಯಾಕೆ ಸಾರ್ ಇವತ್ತು ಬಹಳ ಸಿಟ್ಟಿನಿಂದಿದ್ದೀರಾ?'' ಎಂದು ಕೇಳಿದ. ಮೇಷ್ಟ್ರು ''ನಿನಗ್ಯಾಕೆ ಬೇಕಲೇ?'' ಅಂದರು. ''ನೀವೇ ತಾನೆ ನಿನ್ನೆ ಲೇ ಅಂತ ಅನ್ನಬಾರದು ಎಂದು ಹೇಳಿದ್ದಿರಿ, ಇವತ್ತು ನೀವೇ ಲೇ ಅಂತೀರಲ್ಲ ಸಾರ್?'' ಎಂದಾಗ ಹುಡುಗರೆಲ್ಲಾ ನಕ್ಕರು. ಗುರುಗಳು ಮಾತ್ರ ಸಿಟ್ಟಿನಿಂದಿದ್ದರು.

– ಎಂ.ಬಿ. ವೀರನಗೌಡ,
ಮಲಿಯಾಬಾದ್

## ಕಿಸ್ !

ನಾನು ಒಂಬತ್ತನೆ ತರಗತಿ ಓದುತ್ತಿದ್ದೆ. ನಡು ಸಾಲಿನ ಎರಡನೇ ಬೆಂಚಿನ ಕೊನೆಗೆ ಕೂಡ್ರುತ್ತಿದ್ದೆ. ಕೊನೆ ಸಾಲಿನ ಎರಡನೇ ಬೆಂಚಿಗೆ ಒಬ್ಬ ಹುಡುಗಿ ಕೂಡ್ರುತ್ತಿದ್ದಳು.

ಒಂದ್ಸಾ ದಿನ ನಾನು ಅವಳಿಗೆ ಕಣ್ಣು ಹೊಡೆದೆ. ಆಗ ಅವಳು ಗುರುಗಳಿಗೆ ಹೇಳಿದಳು. ಗುರುಗಳು ನನ್ನನ್ನು ನಿಲ್ಲಿಸಿ, ''ಯಾಕೋ ಅವಳಿಗೆ ಕಣ್ಣು ಹೊಡೆದೇ'' ಅಂತ ಕೇಳಿದರು. ಇಲ್ಲ ಸರ್ ಸುಳ್ಳೆ ಹೇಳತಾಳೆ ಅಂತಾ ಹೇಳಿದೆ. ಆಗ ಆಕೆ ''ಏ, ಯಾಕೋ ಖರೆ ಹೇಳು. ಸುಳ್ಳು ಹೇಳಬೇಡ.'' ಅಂತ ನನಗೆ ಹೇಳಿದಳು. ನಾನು ಎಷ್ಟು ಸಲ ಇಲ್ಲ ಅಂದರೂ ಕೇಳಲಿಲ್ಲ. ಆಗ ನಾನು ಗುರುಗಳ ಹತ್ತಿರ ಹೋದೆ. ''ಅವಳನ್ನ ಇಲ್ಲಿ ಕರಿರಿ ಸರ್'' ಎಂದೆ. ''ಯಾಕೆ?'' ಅಂತ ಕೇಳಿದ್ರು. ''ನಿಜ ಹೇಳ್ತಿನಿ ಸರ್ ಆದ್ಕೆ'' ಅಂದೆ. ಆಗ ಗುರುಗಳು ಕರೆದರು. ಆಕೆ ಬಂದ್ಲು. ಆಗ ಗುರುಗಳಿಗೆ ಹೇಳಿದೆ ''ಸರ್ ನಾನು ಮೊನ್ನೆ ಮನೆಗೆ ಹೋಗುವಾಗ ನನಗೆ ಈಕೆ ಕಣ್ಣು ಹೊಡೆದಳು. ಇಷ್ಟೆ ಅಲ್ಲ ಸರ್ ಇವಳು ನನ್ನ ಹತ್ತಿರ ಬಂದು ಆಯ್ ಲವ್ ಯೂ ಎನ್ನುತ್ತ ನನ್ನ ಬಾಯಿಯಲ್ಲಿ ಬಾಯಿ ಇಟ್ಲು ಸರ್'' ಎನ್ನುತ್ತ ಗುರುಗಳ ಹಾಗೂ ಎಲ್ಲ ಹುಡುಗರ ಎದುರಿಗೆ ಅವಳ ಬಾಯಲ್ಲಿ ಬಾಯಿ ಇಟ್ಟೆ. ಅವಳು ಅಳುತ್ತ ತಲೆ ತಗ್ಗಿಸಿ ಮನೆಗೆ ಹೋದಳು. ''ಎಷ್ಟೊ ಧೈರ್ಯ ಹೀಗ್ಮಾಡ್ದಿ'' ಅಂತ ಗುರುಗಳು ಕೇಳಿದ್ರು. ಆಗ ನಾನು, ''ನಿಜ ಹೇಳ್ದೆ ಸರ್'' ಎಂದೆ. ಸುಮ್ಮನಾದ್ರು.

ಮರು ದಿನ ಹೈಸ್ಕೂಲಿಗೆ ಬಂದಾಗ ಹುಡುಗರೆಲ್ಲ ಅವಳಿಗೆ ಅಪಹಾಸ್ಯ ಮಾಡಿದ್ರು. ಆಗ ಅವಳು ಹೌದು ಕಣ್ರೊ, ನನ್ನ ಲವ್ವರ್ ಈ ಶಿವಪುತ್ರಾನೆ ಎನ್ನುತ್ತ ನನ್ನ ಹತ್ತಿರ ಬಂದು ಕೆನ್ನೆಗೆ ಕಿಸ್ ಕೊಟ್ಲು.

– ಕಲಾವಿದ ಶಿವಪುತ್ರ,
ಹುಣಶ್ಯಾಳ ಪಿ.ಬಿ.

## ಸುಧಾರಣೆ

ಪ್ರೈಮರಿ ಸ್ಕೂಲಿನಲ್ಲಿ ಇನ್‌ಸ್ಪೆಕ್ಷನ್‌ಗೋಸ್ಕರ ಬಂದ ಇನ್‌ಸ್ಪೆಕ್ಟರ್ ೫ನೇ ತರಗತಿಗೆ ಹೋಗಿ ಅಲ್ಲಿನ ಹುಡುಗರ ಪೈಕಿ ಒಬ್ಬನಲ್ಲಿ ೧೨x೬ ಅಂದರೆ ಎಷ್ಟು ಅಂತ ಕೇಳಿದರು.

ಆದಕ್ಕೆ ಅವನು ೭೮ ಅಂದ. ಅದಕ್ಕವರು ಉಪಾಧ್ಯಾಯರನ್ನು ಉದ್ದೇಶಿಸಿ ಏನ್ರಿ ಕಲಿಸಿದ್ದೀರಾ ಮಕ್ಕಳಿಗೆ ಅಂಥ ಕೇಳಿದರು ಅದಕ್ಕೆ ಉಪಾಧ್ಯಾಯರು-''ಇವಾಗಲೇ ಸ್ವಲ್ಪ ಸುಧಾರಿಸಿದೆ ಸಾರ್. ಮೊದಮೊದಲು ೨೦೦-೩೦೦ ಅಂಥ ಹೇಳುತ್ತಿದ್ದರು'' ಅಂದರು.

– ರಾಮಚಂದ್ರ ಸಿ. ಆಚಾರ್,
ಶ್ರೀನಗರ (ಸಾಲಿಗ್ರಾಮ)

## ಪ್ಯಾಂಟಿನ ಜಿಪ್

ನಾನು ಒಂಬತ್ತನೇ ತರಗತಿಯಲ್ಲಿ ಓದುತ್ತಿದ್ದೆ. ನನಗೆ ಮೊದಲನೇ ಸಾಲಿನಲ್ಲಿ ಇರುವ ಡೆಸ್ಕಿನ ಮೇಲೆ ಕೂರುವ ಆಸೆ. ಒಂದು ದಿನ ನಮ್ಮ ಗುರುಗಳ ಎದುರುಗಡೆ ಇರುವ ಡೆಸ್ಕಿನ ಮೇಲೆ ಕೂಳಿತುಕೊಂಡಿದ್ದೆ. ಆ ದಿವಸ ಅವರು ತಮ್ಮ ಪ್ಯಾಂಟಿನ ಚೈನು (ಜಿಪ್) ಹಾಕಿಕೊಂಡು ಬಂದಿರಲಿಲ್ಲಾ. ಅದನ್ನು ಕಂಡು ನಾನು ಮತ್ತು ನನ್ನ ಗೆಳೆಯರು ನಗ ತೊಡಗಿದೆವು. ಆಗ ನಮ್ಮ ಗುರುಗಳು ನಮಗೆ, ನೀವೇಕೆ ಸುಮ್ನೆ ನಗುತ್ತೀರಾ ಎಂದು ಕೇಳಿದರು. ಆಗ ನಾವು ಸರ್ ನೀವು ನಿಮ್ಮ ಪ್ಯಾಂಟಿನ ಚೈನು (ಜಿಪ್) ಹಾಕಿಕೊಂಡಿಲ್ಲ ಅಂತಾ ಹೇಳಿದೆವು. ಆಗ ಅವರು ಬೇಗನೆ ಎದ್ದು ಹೊರಗೆ ಹೋಗಿ ಚೈನ್ ಹಾಕಿಕೊಂಡು ಬಂದು ಪಾಠವನ್ನು ಮುಂದುವರಿಸಿದರು. ಆ ದಿವಸ ನಾವು ಸಾಕಷ್ಟು ನಕ್ಕೆವು. ಅದು ಜೀವನದಲ್ಲಿ ಮರೆಯಲಾಗದ ಘಟನೆ.

– ಮೆಹಬೂಬ ಗಡೇದ
ಹಾಗೂ ಗೆಳೆಯರು,
ಹುನಗುಂದ.

## ದುಡುಕು

ನಾನು ಏಳನೇ ತರಗತಿಯಲ್ಲಿ ಓದುತ್ತಿದ್ದಾಗ ನಡೆದ ಘಟನೆಯಿದು. ಎಲ್ಲದನ್ನೂ ಎಲ್ಲರನ್ನೂ ನಂಬಿಬಿಡುವ ದುಡುಕು ಸ್ವಭಾವ ನನ್ನದು.

ಒಂದೊಮ್ಮೆ ಸ್ನೇಹಿತ ಮೌನೇಶಿ ಬಂದು, ''ನಾನೊಂದು ಕೊಡ್ತಿನಿ ಮುಚ್ಚಿ ತೊಗೊಂಡು ಮುಚ್ಚಿ ತಿನ್ನು, ಬಹಳ ಇಲ್ಲಾ ಬೇರೆಲ್ಲರಿಗೂ ಕೊಡೊಕೆ'' ಎಂದು ನನ್ನ ಮುಷ್ಟಿಗೆ ತನ್ನ ಮುಷ್ಟಿಯಿಂದ ಮುಚ್ಚಿಯೇ ಕೈ ಬದಲಾಯಿಸಿದ. ನಾನೂ ಕೂಡ ಹಿಂದು ಮುಂದು ನೋಡದೇ - ವಿಚಾರಿಸದೇ ಬಾಯಲ್ಲಿ ಹಾಕ್ಕೊಂಡು ಜಗಿದೇ ಬಿಟ್ಟೆ!

ಬಾಯೆಲ್ಲಾ ವಿಷ. ಅಳು ಮೋರೆ ಮಾಡಿ ಪೆಚ್ಚಾಗಿ ನಿಂತಾಗ ಅಂವಾ ಒಂದು ಮಾತು ಹೇಳಿದ. ''ದುಡುಕು ಬಲು ಕೆಡುಕು. ಯಾವುದೇ ಕೆಲಸ ಮಾಡುವಾಗಲೂ ನಿಧಾನವಾಗಿರು. ಯೋಚಿಸಿ ಹೆಜ್ಜೆ ಇಡು''.

ಬೇವು ಬೀಜದ ವಿಷ ತಿಂದು ಕಕ್ಕಿದಾಗ ಸುತ್ತಲಿದ್ದವರು ನಗೆಹಾಯಿಸಿದರು. ಆದರೆ ನಿಜ ಸ್ನೇಹದ ಅಮೃತಧಾರೆ ಮೌನೇಶಿ ಹರಿಸಿದ್ದ.

– ಜೆ.ಎಂ. ರಾಜಶೇಖರ,
ಚೌಡಯ್ಯದಾನಪುರ.

## ಕೊರತೆ – ಕನಸುಗಳ ನಡುವೆ

# ಹೊಸ ಹಾವೇರಿ ಜಿಲ್ಲೆ




ಜನಸಂಖ್ಯೆಯ ದೃಷ್ಟಿಯಿಂದ ಹಾಗೂ ಭೌಗೋಲಿಕ ದೃಷ್ಟಿಯಿಂದ ಧಾರವಾಡ ಜಿಲ್ಲೆ ವಿಶಾಲವಾಗಿತ್ತು. ಅದನ್ನು ವಿಭಾಗಿಸಿ ಹಾವೇರಿ ಜಿಲ್ಲೆಯನ್ನಾಗಿ ಮಾಡಲಾಗಿದೆ. ಹಾವೇರಿ ಜಿಲ್ಲೆ ಆಗುವುದಕ್ಕಿಂತ ಪೂರ್ವದಲ್ಲಿ ಹಿರೇಕೆರೂರು, ಬ್ಯಾಡಗಿ, ರಾಣೆಬೆನ್ನೂರು, ಹಾನಗಲ್ ಹಾಗೂ ಹಾವೇರಿ ತಾಲೂಕುಗಳ ಜನತೆಗೆ ತಮ್ಮ ಸರಕಾರಿ ಕೆಲಸ ಕಾರ್ಯಗಳಿಗೆ ಬಹುದೂರದ ಧಾರವಾಡಕ್ಕೆ ಹೋಗಬೇಕಾಗುತ್ತಿತ್ತು. ಹಾವೇರಿ ಜಿಲ್ಲೆಯ ರಚನೆಯಿಂದ ಎಲ್ಲ ತಾಲೂಕುಗಳು ೩೦ ಕಿ.ಮಿ. ಅಂತರದಲ್ಲಿದ್ದು ಸಾಕಷ್ಟು ಅನುಕೂಲವಾಗಿದೆ.

ಆಗಸ್ಟ್ ೨೪ರಿಂದ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬರುವ ಹಾವೇರಿಯಲ್ಲಿ ಹಾನಗಲ್, ಶಿಗ್ಗಾಂವ್, ಸವಣೂರ, ಬ್ಯಾಡಗಿ, ರಾಣೇಬೆನ್ನೂರು ಹಾಗೂ ಹಿರೇಕೆರೂರು ತಾಲೂಕುಗಳು ಸೇರ್ಪಡೆಗೊಳ್ಳುವುದರ ಮೂಲಕ ಧಾರವಾಡ ಜಿಲ್ಲೆಯ ವಿಸ್ತಾರವು ಕುಗ್ಗಲಿದೆ. ೧೩೭೮೨೦೦ ಹೆಕ್ಟೇರ ವಿಸ್ತಾರವುಳ್ಳ ಧಾರವಾಡ ಜಿಲ್ಲೆಯಲ್ಲಿ ಹಾವೇರಿಗೆ ೪೭೧೮೪೬ ಪ್ರದೇಶ ಲಭ್ಯವಾಗಲಿದೆ.

ಧಾರವಾಡ ಜಿಲ್ಲೆಯ ಉತ್ತರ ಭಾಗ ಅಭಿವೃದ್ಧಿ ಹೊಂದಿಲ್ಲ ಎಂಬ ಬಗ್ಗೆ ಎರಡು ಮಾತಿಲ್ಲ, ಆದರೆ ಅದರ ದಕ್ಷಿಣ ಭಾಗದ (ಈಗಿನ ಹಾವೇರಿ ಜಿಲ್ಲೆ) ಎಲ್ಲ ತಾಲೂಕುಗಳು ವಿಶಿಷ್ಟಪೂರ್ಣವಾಗಿವೆ. ರಾಣೇಬೆನ್ನೂರಿನ ಕೃಷ್ಣಮೃಗ ಅಭಯಾರಣ್ಯ, ಬ್ಯಾಡಗಿ ಮೆಣಸಿನಕಾಯಿ, ಸವಣೂರಿನ ವೀಳ್ಯೆದೆಲೆ, ಹಿರೇಕೆರೂರಿನ ಹತ್ತಿ, ಹಾನಗಲ್‌ನ ಭತ್ತ ಹಾಗೂ ಹಾವೇರಿಯ ಏಲಕ್ಕಿ ವ್ಯಾಪಾರ ನಾಡಿನಾದ್ಯಂತ ಪ್ರಸಿದ್ಧಿ ಪಡೆದಿದ್ದರೂ ಸ್ಥಳಿಯ ಸಂಪನ್ಮೂಲಗಳ ವೈಜ್ಞಾನಿಕ ಹಾಗೂ ಅರ್ಥಪೂರ್ಣ ಬಳಕೆಗೆ ಸರಕಾರದ ತಾಂತ್ರಿಕ ಹಾಗೂ ಆರ್ಥಿಕ ಪ್ರೋತ್ಸಾಹ ದೊರೆಯದೆ ಆರ್ಥಿಕ ಅಭಿವೃದ್ಧಿ ಸಾಕಷ್ಟು ಸಾಧಿಸಿಲ್ಲ. ತುಂಗಾ ಮೇಲ್ದಂಡೆ ಯೋಜನೆಯ ಕಾರ್ಯ ತ್ವರಿತ ಗತಿಯಲ್ಲಿ ನಡೆಯದೆ ಇರುವುದರಿಂದ ೮೬೩೪೫ ಹೆಕ್ಟೆರ ಜಮೀನು ನೀರಾವರಿಗೊಳ್ಳದೆ ಹಾಗೇ ಇದೆ. ಹಾವೇರಿ ಜಿಲ್ಲೆಯಲ್ಲಿ ಬರುವ ಎಲ್ಲ ತಾಲೂಕುಗಳು ಹತ್ತಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯುತ್ತಿದ್ದರೂ ಈ ಭಾಗದಲ್ಲಿ ಒಂದು ಹತ್ತಿ ಬಟ್ಟೆಯ ಕೈಗಾರಿಕೆ ಇಲ್ಲದಿರುವುದು ದುರ್ದೈವದ ಸಂಗತಿ. ಹಾವೇರಿ ಜಿಲ್ಲೆಯಲ್ಲಿ ಅನೇಕ ಪ್ರೇಕ್ಷಣೀಯ ಸ್ಥಳಗಳಿವೆ. ವಿಶೇಷವಾಗಿ ಬ್ಯಾಡಗಿ ತಾಲೂಕಿನ ಕಾಗಿನೆಲೆಯ ಆದಿಕೇಶವ ದೇವಸ್ಥಾನ ಹಾಗೂ ಕನಕಗುರು

ಪೀಠ. ಕದರಮಂಡಲಗಿಯ ಕಾಂತೇಶ (ಹನುಮಂತ) ದೇವರಗುಡಿ, ರಾಣೇಬೆನ್ನೂರ ತಾಲೂಕಿನ ದೇವರುಗುಡ್ಡದ ಮಾಲತೇಶ ದೇವರು, ಚೌಡದಾನಪುರದ ಮುಕ್ತೇಶ್ವರ ದೇವಸ್ಥಾನ, ಹಾನಗಲ್‌ದ ತಾರಕೇಶ್ವರ ದೇವಸ್ಥಾನ ಹಾಗೂ ಮಕರಳ್ಳಿಯ ಪಕ್ಷಿಧಾಮ, ಶಿಗ್ಗಾಂವಿ ತಾಲೂಕಿನ ಶಿಶುನಾಳ ಶರೀಫರ ನೆಲೆ, ಬಂಕಾಪುರದ ನಗರೇಶ್ವರ ದೇವಾಲಯ ಹಾಗೂ ಅಲ್ಲಿಯ ಅನೇಕ ಮುಸ್ಲಿಂ ಸಮುದಾಯದ ಮಸೀದಿಗಳು, ಕನಕದಾಸರ ಜನ್ಮಸ್ಥಳ ಬಾಡ ಹಾಗೂ ಗಂಗೀಭಾವಿ ಶ್ರೀ ಕ್ಷೇತ್ರ, ಹಾವೇರಿಯ ಸಿದ್ದೇಶ್ವರ ದೇವಾಲಯ, ಶ್ರೀ ಶಿವಲಿಂಗ ಮಹಾಸ್ವಾಮಿಗಳ ಹುಕ್ಕೇರಿ ಮಠ, ಇಲ್ಲಿಗೆ ಸಮಿಪದ ಅಗಡಿಯ ಆನಂದವನ, ಪರಳಳ್ಳಿಯ ಶ್ರೀ ಸೋಮನಾಥಗುಡಿ, ಗಳಗನಾಥದಲ್ಲಿಯ ಶ್ರೀಗಳಗೇಶ್ವರ ಗುಡಿ, ಕನವಳ್ಳಿಯ ಶ್ರೀ ಪರಮೇಶ್ವರ ಗುಡಿ ಪ್ರಸಿದ್ಧಿಯಾಗಿವೆ. ಈ ಪ್ರಮುಖ ಸ್ಥಳಗಳಿಗೆ ಪ್ರವಾಸೋದ್ಯಮದ ಅಭಿವೃದ್ಧಿ ಚಟುವಟಿಕೆಗಳು ಅತಿ ಅವಶ್ಯಕ ವಾಗಿದೆ. ಇಂತಹ ಕುಂದು ಕೊರತೆಗಳನ್ನು ನಮ್ಮ ಘನ ಸರಕಾರ ಅರಿತು ಹೊಸ ಹಾವೇರಿ ಜಿಲ್ಲೆಗೆ ಹೊಸ ರಚನಾತ್ಮಕ ಕಾರ್ಯಕ್ರಮಗಳನ್ನು ಹಾಕಿಕೊಂಡು ಅನುಷ್ಠಾನಗೊಳಿಸಿ ಅಭಿವೃದ್ಧಿ ಮಾಡುವ ಗುರುತರ ಜವಾಬ್ದಾರಿಯನ್ನು ಹೊತ್ತು ಕೊಳ್ಳಬೇಕು. ಅಂದಾಗ ಮಾತ್ರ ಹೊಸ ಜಿಲ್ಲೆಯ ರಚನೆ ರಚನಾತ್ಮಕವಾಗುತ್ತದೆ.

○ ಎಸ್.ಎಚ್. ಕಬ್ಬಿಣಕಂತಿಮಠ



## ಹಲಗೆಯ ಕಲೆಗೆ ಜೀವ ತುಂಬಿದ

# ಹಾದಿಮನಿ ನಿಂಗಪ್ಪ

ಚರ್ಮವಾದ್ಯಗಳಲ್ಲೆಲ್ಲ ಅತ್ಯಂತ ಪ್ರಾಚೀನತೆ ಪಡೆದಿರುವ ಹಲಗೆಗೆ ಪ್ರಾದೇಶಿಕ ವಾಗಿ ಪಟಹ, ತಮ್ಮಟ, ತಪ್ಪಡಿ, ಹರೆ ಮೊದಲಾದ ನಾಮಗಳಿಂದ ನಿರ್ದೇಶಿಸುವು ದುಂಟು. ಹಳ್ಳಿಯ ಜನಪದ ಜೀವನದ ಎಲ್ಲ



ಸಾಂಸ್ಕೃತಿಕ ಸಂದರ್ಭಗಳಲ್ಲಿ ಪ್ರಮುಖ ಸ್ಥಾನ ಹಲಗೆಯದು. ಜಾತ್ರೆ-ಉತ್ಸವ, ಹಬ್ಬ-ಹರಿದಿನ, ಮದುವೆ-ಮೆರವಣಿಗೆ, ಹಾಡು-ಕುಣಿತ, ಮರಣ ಸಂಸ್ಕಾರ ಮೊದಲಾದ ಶುಭ ಅಶುಭ ಕಾರ್ಯಕ್ರಮಗಳಿಗೆಲ್ಲ ಹಲಗೆ ಅವಶ್ಯಕ ವಾದ ವಾದ್ಯ. ಹಲಗೆಗಳಲ್ಲಿ ರಣ ಹಲಗೆ, ಜಗ್ಗಲಿಗೆ, ಕಣಿಹಲಗೆ, ಬೆಟ್ಟಲಗೆ ಎಂಬ ಪ್ರಮುಖ ಬಗೆಗಳು. ಈ ಮೇಲಣ ಎಲ್ಲ ಸಂದರ್ಭದಲ್ಲೂ ಹಗಲು ಇರುಳೆನ್ನದೆ ರಣ-ಕಣಿ ಹಲಗೆಯನ್ನು ಬಾರಿಸಿ ಜನಮನ ಗೆದ್ದಿರುವ ಪ್ರತಿಭಾವಂತ ಕಲಾವಿದ ಹಾದಿಮನಿ ನಿಂಗಪ್ಪ.

ಹಲಗಿ ಬಾರಿಸೊ ನಿಂಗಪ್ಪನೆಂದೇ ಪ್ರಸಿದ್ಧಿ ಪಡೆದ ನಿಂಗಪ್ಪ ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿಯವನು. ಹಲಗೆ ಬಾರಿಸಿ ಬಾಗೇವಾಡಿಯ ಕೀರ್ತಿಯನ್ನು ಉತ್ತುಂಗಕ್ಕೇರಿಸಿದ್ದಾನೆ. ಅಸ್ಪೃಶ್ಯ ಜನಪದ ವೃಂದದ ಕುಟುಂಬವೊಂದರಲ್ಲಿ ಲಕ್ಷ್ಮಣ ಅವರ ಮಗನಾಗಿ ಬಾಲ್ಯದಿಂದಲೇ ಈ ಹಲಗೆ ವೃತ್ತಿಯಲ್ಲಿ ನಿರತನಾಗಿ ನಿಪುಣನಾದವನು. ನಮ್ಮ ಹೊಲೆ-ಮಾದಿಗರಿಗೆ ಕೊಂಬು ಹೊಡೆವ ಹಲಗೆ ಬಾರಿಸುವ ವೃತ್ತಿ ಅಂದು ಕಡ್ಡಾಯ ವಾಗಿತ್ತು. ದೃಢಕಾಯದ ನಿಂಗಪ್ಪ ಹಲಗೆಯನ್ನು ಹೆಗಲಿಗೇರಿಸಿ ಬಾರಿಸಲು ನಿಂತನೆಂದರೆ, ಅವನ ಸುತ್ತಲಿನ ಇತರ ವಾದ್ಯಗಳ ಸದ್ದೇ ಅಡಗಿ ಹೋಗುತ್ತದೆ ನೆಲದ ಮೇಲಿನ ಹರಳುಗಳು ನೃತ್ಯ ಮಾಡುತ್ತವೆ. ನಿಂತು ನೋಡುವವರ ಕಾಲು ಕುಣಿಯುತ್ತವೆ. ಮನ ತಣಿಯುತ್ತವೆ. ಅಂತಹ ಮೋಡಿ ಮಂತ್ರವನ್ನು ಹಲಗೆ ನುಡಿಸುವುದರಲ್ಲಿ ತೋರುತ್ತಾನೆ.

ಹಲಗೆಯೊಂದರಲ್ಲಿಯೇ ತನ್ನ ಕೈಚಳಕ ತೋರಿಸಿ ವಿವಿಧ ಹಲಗೆಯ ಗತ್ತು, ಡೊಳ್ಳಿನ ವಾದ್ಯ, ನಡುವಾಲಗ, ಆಡುವ ಗೋಣಿವಾಲಗ, ದಮಡಿವಾದ್ಯ, ನಗಾರಿವಾದ್ಯ, ಹೀಗೆ ಹತ್ತಾರು ವಾದ್ಯಗಳನ್ನು ನುಡಿಸುತ್ತಾನೆ. ಇದಲ್ಲದೆ ಕೆಲವು ಕಸರತ್ತಿನ ಆಟಗಳನ್ನು ಮಾಡುತ್ತಾನೆ. ಹತ್ತು ಸುರತಿ ನಾಣ್ಯ ಕಣ್ಣಿನಿಂದ ಎತ್ತುವುದು; ೧೨ ಐವತ್ತು ಪೈಸೆ ಕಣ್ಣಿನಿಂದ ಎತ್ತುವುದು; ಹತ್ತು ೨೦ ಪೈಸೆಗಳನ್ನು ಹಣೆಯಿಂದ ಕಣ್ಣಿನಿಂದ ಎತ್ತುವುದು, ೨ ಕೊಡ ನೀರು ತುಂಬಿದ ದೊಡ್ಡ ಬೋಗುಣಿ ಇಲ್ಲವೆ ಕಬ್ಬಿಣ ಬುಟ್ಟಿಯ ಬಣ್ಣದ ನೀರಲ್ಲಿಯ ಸೂಜಿಯನ್ನು ಹಲಗೆ ಬಾರಿಸುತ್ತ, ತಾಳ ಬಿಡದೆ ತಲೆ ಮುಳುಗಿಸಿ ಬಾಯಿಂದ ತೆಗೆಯುವುದು-ಇಂತಹ ಹತ್ತು ಹಲವಾರು ಚಮತ್ಕಾರಗಳನ್ನು ಒಂದರನಂತರ ಒಂದರಂತೆ ನೆರೆದ ಜನ ಸಮೂಹಕ್ಕೆ ಚಕಚಕನೆ ತೋರಿಸಿ ಬೇಷ್ ಎನಿಸಿಕೊಂಡ ಕಲಾವಿದ.

ಹಲಗೆಯಲ್ಲಿಯೇ ತನ್ನ, ತಂದೆಯ ಹಾಗೂ ಹುಟ್ಟೂರಿನ ಹೆಸರನ್ನು ಹೇಳುವ ಈ ಬಡ ದಲಿತ ಕಲಾವಿದನ ಬದುಕು ಚಿಂತಾಜನಕವಾಗಿದೆ. ನಾಲ್ಕು ಜನ ಮಕ್ಕಳು ತಂದೆಯೊಂದಿಗೆ ಕಷ್ಟಕಡಲಲ್ಲಿಯೇ ಈಜುತ್ತ, ಜನತೆಗೆ ಮನ ರಂಜನೆ ಒದಗಿಸಿ ತಾನು ಮಾತ್ರ ಕಣ್ಣೀರಿನ ಲ್ಲಿಯೇ ಕೈತೊಳೆವ ಈ ಪ್ರತಿಭಾವಂತ ಕಲಾವಿದ ನಿಗೆ ಜನಪದ ಅಕಾಡೆಮಿ ಸಹಾಯಧನ ನೀಡಿ ಜೀವ ಉಳಿಸಬಹುದೇ? ಇದೆಲ್ಲ ಬಸವನ ಬಾಗೇವಾಡಿ ತಾಲೂಕು ಶಾಸಕ ಮಹಾಶಯರಿಗೆ ತಿಳಿದಿಲ್ಲವೆ?

– ಡಾ. ಅರ್ಜುನ ಗೊಳಸಂಗಿ, ಹುಲಕೋಟಿ.




ಉಷಾ ನವರತ್ನರಾಮ್

## ಸಂಬಂಧದಲ್ಲಿ ಮದುವೆ

*ನಾನು ನನ್ನ ಮಾವನ ಮಗನ ಜೊತೆಗೆ ಇನ್ನು ಕೆಲವೇ ತಿಂಗಳಿನಲ್ಲಿ ಮದುವೆಯಾಗಲಿದ್ದೇನೆ. ನನ್ನ ಪ್ರಶ್ನೆ ಏನೆಂದರೆ ನನ್ನ ಮದುವೆ ರಕ್ತ ಸಂಬಂಧದಲ್ಲಿ ಆಗುತ್ತಿರುವುದರಿಂದ ನಮಗೆ ಹುಟ್ಟುವ ಮಗುವಿಗೆ ಏನಾದರೂ ತೊಂದರೆಗಳಿವೆಯಾ? ದಯವಿಟ್ಟು ಬೇಗ ತಿಳಿಸಿ.*

*ಹೆಸರು ಬೇಡ, ಧಾರವಾಡ*

### ಸಲಹೆ

ಅಕ್ಕನ ಮಗಳನ್ನು ಮದುವೆಯಾಗುವುದು, ಸೋದರಿಕೆಯ ಸಂಬಂಧಗಳು, ಮಾವನ ಮಗಳ ಜೊತೆ ವಿವಾಹವಾಗುವುದು ನಮ್ಮ ಸಮಾಜದಲ್ಲಿ ಅನಾದಿಕಾಲದಿಂದಲೂ ನಡೆದುಬರುತ್ತಿದೆ. ಇದರಲ್ಲಿ ಸಂಬಂಧಗಳು ಚೆನ್ನಾಗಿ ಬೆಸೆಯುವುದಾದರೂ ಮುಂದಿನ ಜನಾಂಗದ ಆರೋಗ್ಯಕರ ವಾತಾವರಣಕ್ಕೆ ಹಾಗೂ ವ್ಯಕ್ತಿಗಳ ಆರೋಗ್ಯ, ಅವರಿಗೆ ಹುಟ್ಟುವ ಮಕ್ಕಳ ಬಗ್ಗೆ ಕಾಳಜಿ ಮುಖ್ಯವಾಗುತ್ತದೆ. ಇಂತಹ ಸೋದರಿಕೆ ಸಂಬಂಧಗಳಲ್ಲಿ ಅನುವಂಶಿಕವಾಗಿರುವ ಕಾಯಿಲೆಗಳು, ಸೋಂಕುಗಳು ಬಲಾಢ್ಯವಾಗತೊಡಗುತ್ತವೆ. ಎನಿಮಿಯಾ, ರಕ್ತಹೀನತೆಯು ತಲೆದೋರ ಬಹುದು. ಗಿಡಗಳನ್ನು ಕಸಿ ಮಾಡುವಾಗ ಒಳ್ಳೆಯ ಬಲವುಳ್ಳ ತಳಿ ಹಾಗೂ ಸಾಧಾರಣ ತಳಿಗಳ ಮಿಶ್ರಣದಿಂದ ಬಹಳ ಉತ್ತಮ ತಳಿಗಳನ್ನು ಹೊರತರು ವಂತೆ, ರಕ್ತ ಸಂಬಂಧ ಬಿಟ್ಟು ಹೊರಗಿನ ಸಂಬಂಧಗಳನ್ನು ಗೌರವಿಸಿ ವಿವಾಹವಾಗುವುದಾದರೆ ಉತ್ತಮ, ಬಲಾಢ್ಯ ಮಕ್ಕಳನ್ನು ಪಡೆಯಬಹುದು. ಮಾನವ ಕುಲದಲ್ಲಿನ ಕೀಳು ಮೇಲುಗಳನ್ನು ಅಳಿಸಿ ಹಾಕಬಹುದು. ನೀವು ನಿಮ್ಮ ಹಾಗೂ ಮದುವೆಯಾಗಲಿರುವ ಮಾವನ ಮಗನ ರಕ್ತ ತಪಾಸಣೆ ಮಾಡಿಸಿಕೊಳ್ಳಿ, ಮಕ್ಕಳನ್ನು ಪಡೆಯುವ ಮುಂಚೆ ತಜ್ಞ ವೈದ್ಯರಲ್ಲಿ ತಪಾಸಣೆ ಮಾಡಿಸಿ. ಈಗಾಗಲೇ ಮದುವೆ ನಿಶ್ಚಯವಾಗಿರುವುದರಿಂದ ನೀವಿಬ್ಬರೂ ಜಾಗರೂಕತೆ ವಹಿಸಿ, ವಿವೇಚಿಸಿ ಮದುವೆಯಾಗಿ ತಜ್ಞ ವೈದ್ಯರ ಸಲಹೆಯಂತೆ ನಡೆದಲ್ಲಿ ನಿಮಗೆ ಹುಟ್ಟುವ ಮಕ್ಕಳಿಗೆ ತೊಂದರೆಗಳೇನಾದರೂ ಇದ್ದಲ್ಲಿ ಪರಿಹರಿಸಬಹುದು. ಮುಂದಾದರೂ ಇಂತಹ ಸಂಬಂಧಗಳಿಂದ ದೂರವಿರಲು ಯತ್ನಿಸಿ.

## ಒಲ್ಲೆನ್ನುವ ಹೆಣ್ಣುಗಳು

*ನಾನು ೨೬ ವಯಸ್ಸಿನ ಯುವಕ. ನನ್ನ ವಯಸ್ಸಿನವರಿಗೆಲ್ಲಾ ಮದುವೆಯಾಗಿ ಮಕ್ಕಳು ಹೆತ್ತಿದ್ದಾರೆ. ನಾನು ನೋಡಲು ಕುರೂಪಿಯೇನಲ್ಲ. ನೋಡಲು ಸುಂದರವಾಗಿದ್ದೇನೆ. ಓದಿದ್ದೇನೆ. ಫ್ಯಾಕ್ಟರಿಯಲ್ಲಿ ಹೆಲ್ಪರ್ ಅಂತ ಕೆಲಸ ಮಾಡುತ್ತಿದ್ದೇನೆ. ನಾನು ನೋಡಲು ಹೋದ ಹೆಣ್ಣುಗಳು ಮೊದಲು ಮದುವೆ ಮಾಡಿಕೊಳ್ಳಲು ಒಪ್ಪುತ್ತಾರೆ. ಆ ಮೇಲೆ ಒಲ್ಲೆಂದು ಹೇಳುತ್ತಾರೆ. ನಾನು ಇನ್ನು ಅವಿವಾಹಿತನಾಗಿ ಇದ್ದೇನೆ. ನನಗೆ ಆದಷ್ಟು ಬೇಗ ಮದುವೆ ಮಾಡಿಕೋಬೇಕೆಂಬ ಆಸೆ. ನನ್ನ ಗೆಳೆಯರು ಹಾಗೂ ಸಹೋದ್ಯೋಗಿಗಳು ಹೇಳುತ್ತಾರೆ : ''ನೀನು ಹುಡುಗಿಯರು ಕಂಡರೆ ಮಾತಾಡಿಸುವದಿಲ್ಲ, ಹುಡುಗಿಯರು ಕಂಡರೆ ಅಸಹ್ಯ ಮಾಡಿಕೊಳ್ಳುತ್ತಿ ಹಾಗೂ ತುಂಬಾ ಸರಳಜೀವಿ. ಫ್ಯಾಷನ್ ಮಾಡುವದಿಲ್ಲ ಕಲರ್ ಬಟ್ಟೆ ಹಾಕುವದಿಲ್ಲ'' ಇಷ್ಟೆಲ್ಲ ಸಮಸ್ಯೆಗಳಿಂದ ಪಾರಾಗಿ ದಾಂಪತ್ಯ ಜೀವನಕ್ಕೆ ಕಾಲಿಡಲಿಕ್ಕೆ ದಯಮಾಡಿ ದಾರಿ ತೋರಿಸಿ.*

*ಈ ಸಮಸ್ಯೆಗಳಿಂದ ಪಾರಾಗುವದು ಹೇಗೆ ತಿಳಿಸಿ.*

*ಎಸ್. ಆರ್. ಶಿವಶರಣನ್, ಊರು ಬೇಡ,*

### ಸಲಹೆ

ನೀವು ವೃಥಾ ಆತಂಕ ಪಡುತ್ತಿದ್ದೀರಿ. ನಿಮ್ಮದು ಒಂದು ದೊಡ್ಡ ಸಮಸ್ಯೆಯೇನಲ್ಲ. ನಿಮಗಿನ್ನೂ ಇಪ್ಪತ್ತಾರು ವರ್ಷವೆಂದು ಹೇಳಿರುವಿರಿ. ನಿಮ್ಮ ವಯಸ್ಸಿನ ಹೆಣ್ಣು ಮಕ್ಕಳಿಗೇ ಈಗಿನ ಕಾಲದಲ್ಲಿ ಮದುವೆಯಾಗಿರುವುದಿಲ್ಲ. ನಿಮಗೆ ನೌಕರಿಯಿದೆ. ಗೆಳೆಯರಿದ್ದಾರೆ. ನಿಮ್ಮ ದೃಷ್ಟಿಕೋನವೂ ಇನ್ನೂ ಪ್ರೌಢವಾಗಬೇಕು. ಹೆಣ್ಣುಗಳು ಮೊದಲಿಗೆ ಒಪ್ಪಿ ಆ ಮೇಲೆ ಬೇಡ ಎನ್ನಲು ಬೇರೇನೋ ಕಾರಣವಿರಬೇಕು. ನಿಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಪ್ರಯತ್ನಿಸಿ. ರೂಪು, ಯೌವನ ನೌಕರಿಯಿದ್ದು ಕೀಳರಿಮೆ ಏಕೆ? ಹುಡುಗಿಯರೊಂದಿಗೆ ಮಾತಾಡಿದರೆ ತಪ್ಪೇನೂ ಇಲ್ಲ. ಕಾಲಕ್ಕೆ ತಕ್ಕಂತೆ ಬಾಳಲು ಕಲಿಯಿರಿ. ಫ್ಯಾಶನ್ ಮಾಡಲೇಬೇಕೆಂದಿಲ್ಲ. ನಿಮ್ಮ ವ್ಯಕ್ತಿತ್ವಕ್ಕೆ ತಕ್ಕಂತೆ ಶುಚಿ, ಶುಭ್ರವಾದ, ನಿಮಗೊಪ್ಪುವ ಉಡಿಗೆ ತೊಡಿಗೆ ಏಕೆ ಹಾಕಬಾರದು? ನಾಲ್ಕು ಮಂದಿಯಲ್ಲಿ ಸ್ನೇಹ, ಸಲಿಗೆಯಿಂದ ಬೆರೆಯಲು ಕಲಿಯಿರಿ. ನಿಮ್ಮ ಅನಿಸಿಕೆಗಳನ್ನು ಮನಸ್ಸಿನ ಭಾವನೆಗಳನ್ನು ಸ್ಪಷ್ಟವಾಗಿ ಹೇಳಲು ಧೈರ್ಯ ಬೆಳೆಸಿಕೊಳ್ಳಿ, ಸ್ಪಷ್ಟ ನಿಲುವನ್ನು ನಿರ್ಧಾರಿಕವಾಗಿ ಮಾತಾಡಲು ಕಲಿಯಿರಿ. ಒಳ್ಳೆಯ ಹವ್ಯಾಸಗಳನ್ನು ಬೆಳೆಸಿಕೊಳ್ಳಿ, ಇತರರ ಮಾತಿಗೆ ಕಿವಿಗೊಡಬೇಡಿ. ನಿಮಗೆ ನಿಮ್ಮ ಬಗ್ಗೆಯೇ ಏನಾದರೂ ಕೀಳರಿಮೆಯಿದ್ದರೆ ಅದನ್ನು ಕಿತ್ತೊಗೆಯಿರಿ. ದಾಂಪತ್ಯ ಜೀವನಕ್ಕೆ ಕಾಲಿಡಲು ಬೇಕಾದಷ್ಟು ಸಮಯವಿದೆ. ನಿಮ್ಮನ್ನರಿತು ಬಾಳುವ ಹುಡುಗಿಯ ಕೈ ಹಿಡಿಯುವಿರಿ. ಅವಸರವೇಕೆಂದು ಅರ್ಥವಾಗುವುದಿಲ್ಲ. ನಿಮ್ಮ ಗೆಳೆಯರು ವಿವಾಹವಾಗಿದ್ದಾರೆ, ಅವರಿಗಾಗಲೇ ಮಕ್ಕಳೂ ಇದ್ದಾರೆ ಎನ್ನುವುದು ನಿಮ್ಮ ವಿವಾಹಕ್ಕೆ ಪೂರಕವಾಗಬಾರದು.

## ತಂಗಿಯನ್ನು ಮದುವೆಯಾಗಬಹುದೆ?

*ನಾನು ಕಳೆದ ೫ ವರ್ಷಗಳಿಂದ ಒಂದು ಹುಡುಗಿಯನ್ನು ಪ್ರೀತಿಸುತ್ತಿದ್ದೇನೆ. ಅವಳು ನನಗೆ ದೂರದ ಸಂಬಂಧಿಯಾಗಬೇಕು. ಸಂಬಂಧದಲ್ಲಿ ಅವಳು ನನಗೆ ಚಿಕ್ಕಮ್ಮನ ಮಗಳಾಗಬೇಕು. ನಾವಿಬ್ಬರೂ ಪರಸ್ಪರ ಪ್ರೀತಿಸುತ್ತಿದ್ದೇವೆ. ಆದರೆ ಈ ವಿಷಯವು ನಮ್ಮಿಬ್ಬರ ಮನೆಯವರಿಗೂ ತಿಳಿದಿಲ್ಲ. ದೈಹಿಕ ಸಂಪರ್ಕವಿಲ್ಲ. ನಾವಿಬ್ಬರೂ ಮದುವೆಯಾಗಬೇಕೆಂದು ನಿಶ್ಚಯಿಸಿದ್ದೇವು. ಆದರೆ ನಾವು ಸಮಾಜಕ್ಕೆ*

ಹೆದರಿ ಮದುವೆಯಾಗದೇ ಇದ್ದೇವೆ. ಅವಳ ಅಭಿಪ್ರಾಯದ ಪ್ರಕಾರ ನಾವಿಬ್ಬರೂ ಮದುವೆಯಾಗಿ ಬೇರೆ ಧರ್ಮವನ್ನು ಸ್ವೀಕರಿಸುವುದು ಒಳಿತು. ಆದರೆ ನಾನು ಇದಕ್ಕೆ ಒಪ್ಪದೇ ನಾವಿಬ್ಬರೂ ಮದುವೆಯಾಗಿ ದೈಹಿಕ ಸಂಪರ್ಕವಿಲ್ಲದೇ ಹಾಗೇ ಬಾಳುವ ಎಂದು ಅಭಿಪ್ರಾಯ ಪಟ್ಟಿದ್ದೇನೆ. ಆದರೆ ಈ ವಿಷಯವು ಸಮಾಜದ ಮುಂದೆ ಬಂದರೆ ಅದರ ಪ್ರತಿಕ್ರಿಯೆಯನ್ನು ಹೇಗೆ ನಾವು ಎದುರಿಸಬೇಕೆಂದು ಅರ್ಥವಾಗುತ್ತಿಲ್ಲ. ಆದುದರಿಂದ ನಿಮ್ಮ ಪ್ರತಿಕ್ರಿಯೆಯನ್ನು ಕೂಡಲೇ ತಿಳಿಸಿ.

*ಆಂಡಿ, ಶಿವಮೊಗ್ಗ.*

## ಸಲಹೆ

ನೀವು ಮಾಡುತ್ತಿರುವುದು ತಪ್ಪೆಂದು ತಿಳಿದೂ ಅದನ್ನು ಸಮರ್ಥಿಸಿಕೊಳ್ಳುವುದರಲ್ಲಿ ಅರ್ಥವಿಲ್ಲ. ವಾಡಿಕೆಯಲ್ಲಿ ನೀವು ಪ್ರೀತಿಸಿದ ಹುಡುಗಿ ನಿಮ್ಮ ತಂಗಿಯಾಗುತ್ತಾಳೆ. ನಮ್ಮ ಹಿಂದೂ ಸಂಸ್ಕೃತಿಯಲ್ಲಿ ಹೆಣ್ಣು ಬರಿಯ ಲೈಂಗಿಕ ಸಂಕೇತವಲ್ಲ. ಅವಳಿಗೊಂದು ವಿಶಿಷ್ಟ ಸ್ಥಾನವಿದೆ. ಅವಳನ್ನು ತಾಯಿ, ಸೋದರಿ, ಮಗಳು, ಹೆಂಡತಿ ಮುಂತಾದ ಗೌರವಯುತ ಸ್ಥಾನಗಳನ್ನು ಅಲಂಕರಿಸುತ್ತಾಳೆ. ಹೆಂಡತಿಯನ್ನು ಬಿಟ್ಟು ಪರಸ್ತ್ರೀ ಮಾತೃ ಸಮಾನವೆಂಬ ಉಲ್ಲೇಖವಿದೆ. ಸೋದರಿಕೆಯ ಸಂಬಂಧಗಳಲ್ಲಿ ವಿವಾಹದ ಕಟ್ಟುಪಾಡು ಜಾರಿಯಲ್ಲಿದೆಯೇ ವಿನಾ ಸೋದರಿಯನ್ನೇ ಪ್ರೀತಿಸಿ ಮದುವೆಯಾಗುವುದು ಕಾನೂನು ಬಾಹಿರ. ನೀವು ನಿಮ್ಮ ಪ್ರೀತಿಯನ್ನೇ ತಪ್ಪು ಕಲ್ಪನೆ ಮಾಡಿಕೊಂಡಿರಬಹುದು. ಭಾರತದ ಹಿಂದೂ ವಿವಾಹದಲ್ಲೂ ತಂಗಿಯನ್ನು ಮದುವೆಯಾಗಲು ಅನುಮತಿಯಿಲ್ಲ. ಒಂದು ಕಾನೂನು ಬಾಹಿರ ಹಾಗೂ ಅನಾರೋಗ್ಯ ಸಂಬಂಧವನ್ನು ಬಲಪಡಿಸಿಕೊಳ್ಳಲು ಧರ್ಮದ ಬದಲಾವಣೆಯಿಂದ ಸರಿ ಹೋಗುವುದಿಲ್ಲ. ಮಾನವ ಧರ್ಮಕ್ಕೂ ಪಶುಪ್ರಾಣಿಗಳ ಧರ್ಮಕ್ಕೂ ವ್ಯತ್ಯಾಸವೇ ಇಲ್ಲದಂತಾಗುತ್ತದೆ. ನೀವು ಮದುವೆಯಾಗಿ ಸನ್ಯಾಸಿಯಾಗಿ ಅವಳೊಡನೆ ದೇಹ ಸಂಪರ್ಕವಿಲ್ಲದೇ ಹಾಗೇ ಬದುಕುವುದಾದರೆ ಮದುವೆಯೇಕೆ? ಮನಸ್ಸಿನ ತುಂಬಾ ತಪ್ಪು ಕಲ್ಪನೆ, ಕಾಮನೆಗಳನ್ನಿಟ್ಟುಕೊಂಡು ನಿಮ್ಮನ್ನು ನೀವೇ ತಪ್ಪು ದಾರಿಯಲ್ಲಿ ಎಡವಿ ಬೀಳುವಂತೆ ಮಾಡಿಕೊಳ್ಳುತ್ತೀರಿ. ಅದರ ಬದಲು ಆಕೆಯನ್ನು ಅಷ್ಟು ಪ್ರೀತಿಸುವಂತಿದ್ದಲ್ಲಿ ಅವಳನ್ನು ತಿದ್ದಿ ಬೇರೆ ಯುವಕನನ್ನು ಮದುವೆಯಾಗಿ ಸುಖದಾಂಪತ್ಯ ನಡೆಸುವಂತೆ ಒಪ್ಪಿಸಿ ಆಕೆಯ ಬದುಕನ್ನು ಹಸನುಮಾಡಿ ನಿಮ್ಮ ಪ್ರೀತಿಯ ಆಳ ತೋರಿಸಿ. ನೀವೂ ಕಾನೂನು ಬಾಹಿರವಾದ ಸಂಬಂಧವನ್ನು ತ್ಯಜಿಸಿ ಬದುಕಿನ ಮೌಲ್ಯಗಳನ್ನು ಅರಿಯಲು ಯತ್ನಿಸಿ. ಮನ ಒಂದು ಮರ್ಕಟ. ಆದರೆ ಮಾನವ ಮರ್ಕಟನಾಗಬಾರದಲ್ಲವೇ?

## ಮನೆಯವರ ವಿರೋಧ

ನಾನು ಒಬ್ಬ ಸರ್ಕಾರಿ ನೌಕರಿದಾರ. ಇನ್ನೂ ಅವಿವಾಹಿತ. ಈಗ ಹೆಣ್ಣು ನೋಡಲಾಗಿದೆ. ಆದರೆ ನಮ್ಮ ಮನೆಯಲ್ಲಿಯ ಹಿರಿಯರ ವಿಚಾರಧಾರೆ ಬೇರೆ, ನನ್ನದೇ ಬೇರೆ. ಅದೇನೆಂದರೆ ಸಾಧಾರಣವಾಗಿ ಯಾವುದಾದರೂ ಸಾಮೂಹಿಕ ವಿವಾಹದಲ್ಲಿ ಮದುವೆಯಾಗಬೇಕು ಎಂಬುದು ನನ್ನಾಸೆ. ಇದಕ್ಕೆ ಮನೆಯವರ ವಿರೋಧ ಉಂಟು. ಇದಕ್ಕೇನು ಮಾಡಬೇಕು ಎಂಬುದು ನನಗೆ ತಿಳಿಯದಾಗಿದೆ. ಹೆಣ್ಣಿನವರು ಇಂತಹ ವಿವಾಹಕ್ಕೆ ಒಪ್ಪುವುದಿಲ್ಲ ಎಂಬ ಮಾತು ಕೇಳಿ ಬರುತ್ತಿದೆ. ಇದಕ್ಕೇನು ಮಾಡಬೇಕು ಎಂಬುದು ನನಗೆ ತಿಳಿಯದಾಗಿದೆ. ದಯವಿಟ್ಟು ನನ್ನ ಸಮಸ್ಯೆಗೆ ಪರಿಹಾರ ಒದಗಿಸಿಕೊಡಿ.

*ಶಂಕರ್ ಬಿ. ಕುಂದಗೋಳ್, ಹಾನಗಲ್ಲು ಧಾರವಾಡ.*

## ಸಲಹೆ

ನಿಮ್ಮ ಆಸೆಯೇನೋ ಸ್ವಾಗತಾರ್ಹ. ಸಾಮೂಹಿಕ ವಿವಾಹಗಳನ್ನು ಮಾಡುವುದು ಸರಳಿಕೆಗಾಗಿ, ವರದಕ್ಷಿಣೆ ಪಿಡುಗನ್ನು ತಡೆಯಲು ಹಾಗೂ ಜಾತಿ, ವಿಜಾತಿಗಳ ಮೇಲರಿಮೆ, ಕೀಳರಿಮೆಯನ್ನು ತಡೆಯಲು. ನೀವು ಸಾಮೂಹಿಕ ವಿವಾಹಕ್ಕಾಗಿ ನಿಮ್ಮ ಮನೆಯವರ ಹಾಗೂ ಹುಡುಗಿಯರ ಮನೆಯವರನ್ನು ಮನವೊಲಿಸಲು ಪ್ರಯತ್ನಿಸಿ. ಅದೂ ಅಲ್ಲದೇ ನೀವು ಒಂದು ಸಂಸಾರದಲ್ಲಿನ ಸದಸ್ಯರಾಗಿ, ಪರಿಸರ, ಸಮಾಜದ ಜವಾಬ್ದಾರಿ ತಿಳಿದವರಾಗಿರುತ್ತೀರಿ. ಇತರರ ಭಾವನೆಗಳಿಗೆ ಆಸೆಗಳಿಗೆ ಇಷ್ಟಾರ್ಥಗಳಿಗೆ ಗೌರವ, ಮನ್ನಣೆ ನೀಡುವುದನ್ನು ಕಲಿಯಬೇಕಲ್ಲವೇ? ಹುಡುಗಿಯ ಮನಸ್ಸಿನಲ್ಲೇನಿದೆ ಎಂದು ತಿಳಿಯಬೇಡವೇ? ನೀವೂ ಅತಿ ಸರಳ ವಿವಾಹವನ್ನು ಮಾಡಿಕೊಂಡು ಇತರರಿಗೆ ಮಾದರಿಯಾಗಬಹುದು.

ಉಷಾ ನವರತ್ನರಾಮ್ ಅವರೊಡನೆ

## ಆಪ್ತ ಸಮಾಲೋಚನೆ

ಬದುಕಿನ ಹಾದಿಯಲ್ಲಿ ಎದುರಾಗುವ ಸಮಸ್ಯೆಗಳು ಒಂದೆರಡಲ್ಲ. ಸಮಸ್ಯೆ ಎದುರು ನಿಂತು ಘರ್ಜಿಸಿದಾಗ ಹಣೆಗೆ ಕೈಹೊತ್ತು ಕೂತರೆ ಪರಿಹಾರ ತಂತಾನೇ ಹೊಳೆಯಲಾರದು. ಸಮಸ್ಯೆ ಖಾಸಗಿ ಬದುಕಿಗೆ ಸಂಬಂಧಿಸಿದ್ದರಂತೂ ನುಂಗಲೂ ಆಗದೆ ಉಗುಳಲೂ ಆಗದೆ ತೊಳಲಾಡುವವರೇ ಹೆಚ್ಚು. ಇಂತಹ ಸಂದರ್ಭದಲ್ಲಿ ಒಳಗಿನ ಗೋಳನ್ನೆಲ್ಲ ತೋಡಿಕೊಳ್ಳಲು ಒಬ್ಬ ಆಪ್ತ ವ್ಯಕ್ತಿ ಸಿಕ್ಕರೆ ಅರ್ಧ ದುಃಖ ಶಮನಗೊಳ್ಳುತ್ತದೆ. ನಿಮ್ಮ ತೀರಾ ಖಾಸಗಿ ಸಮಸ್ಯೆಗಳಿಗೆ ಪರಿಹಾರ ಸೂಚಿಸಲು ಈ ಅಂಕಣ ಪ್ರಾರಂಭಿಸುತ್ತಿದ್ದೇವೆ.

ನಿಮ್ಮ ಯಾವುದೇ ವೈಯಕ್ತಿಕ ಸಮಸ್ಯೆ, ಸಾಮಾಜಿಕ-ಕೌಟುಂಬಿಕ ಬಿಕ್ಕಟ್ಟು ಕುರಿತು ಚುಟುಕಾಗಿ, ನಿರ್ದಿಷ್ಟವಾಗಿ ಬರೆದು ಕಳಿಸಿ. ಇದು ಕೇವಲ ಹೆಂಗಸರಿಗೇ ಮೀಸಲಾದ ಅಂಕಣವಲ್ಲ. ಈ ವಿಭಾಗಕ್ಕೆ ಗಂಡಸರೂ ತಮ್ಮ ಸಮಸ್ಯೆಗಳನ್ನು ಬರೆದು ಕಳಿಸಬಹುದು. ಅನುಭವೀ ಬರಹಗಾರ್ತಿ ಉಷಾ ನವರತ್ನರಾಮ್ ಅವರು ನಿಮ್ಮ ಪ್ರಶ್ನೆಗಳಿಗೆ, ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತಾರೆ. ಪತ್ರದಲ್ಲಿ ನಿಮ್ಮ ಹೆಸರು, ವಿಳಾಸ ನಮೂದಿಸುವ ಅಗತ್ಯವಿಲ್ಲ.

ವಿಳಾಸ:

**ಬಿಸಿಲ ಬದುಕು ಮಾಸ ಪತ್ರಿಕೆ**

**ಆಪ್ತ ಸಮಾಲೋಚನೆ ವಿಭಾಗ,** ಅಂಚೆ ಪೆಟ್ಟಿಗೆ ೭೯೫೧

ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

# ಮೇವ್ರೂ ಪ್ರಸಾದ್




○ ಎಂ.ಎಸ್.ನರಸಿಂಹಮೂರ್ತಿ

**ಮೇವ್ರೂ ಪ್ರಸಾದ್ ಎಂಬುವವರು ಸೀಟಿಂದ ಕೆಳಗೆ ಇಳಿದರಲ್ಲ? ಅವರಿಗೆ ಯಾಕೆ ತೊಂದರೆಯಾಯಿತು?**

**ಸಾವಿರ ಕೋಟಿ ಮೇಯ್ದ ಮೇಲೇ ಮೇವ್ರು ವಿರೋಧಿ ಶಕ್ತಿ ಬರುತ್ತದೆ. ಆದರೆ ಮೇವ್ರೂ ಪ್ರಸಾದ್ ೯೫೦ ಕೋಟಿಗೆ ನಿಲ್ಲಿಸಿಬಿಟ್ಟರು. ಇದೇ ಅವರ ತಪ್ಪು!**

''ಅದೃಷ್ಟ ಜನರ ರೂಪದಲ್ಲೇ ಬರಬೇಕು ಎಂದೇನಿಲ್ಲ; ಅದು ದನದ ರೂಪದಲ್ಲೂ ಬರಬಹುದು. ದನ ಇರುವುದರಿಂದಲೇ ದನದ ಮೇವು ಇದೆ. ದನದ ಮೇವು ದನ ಮಾತ್ರ ಮೇಯಬೇಕು ಎಂಬ ಕಾನೂನು ಇಲ್ಲ. ಜನರು ಸಹ ದನದ ಮೇವನ್ನು ಮೇಯಬಲ್ಲರು. ಆದರೆ ಅದನ್ನು ಲಕ್ಷಗಳಲ್ಲಿ ತಿನ್ನಬಾರದು; ಕೋಟಿಗಳಲ್ಲಿ ಮೇಯಬೇಕು! ಸಾವಿರ ಕೋಟಿಯ ಸರದಾರ ಆದ ಕೂಡಲೇ ಇಂದ್ರಪದವಿ'' ಎಂದು ರಾಮಣ್ಣ ವಿವರಣೆ ನೀಡುತ್ತ ಹೋದ.

ವಿಶ್ವನು ರಾಮಣ್ಣನ ಪರಮಾಪ್ತ ಗೆಳೆಯ. ಇಂದ್ರಪದವಿ ಎಂದರೆ ಇಂದಿರಾ ಇದ್ದ ಪದವಿ ಎಂದವನು ಬಲ್ಲ. ಪಿ.ಎಂ. ಆಗಬೇಕಾದರೆ ಎ.ಎಂ.ಆರಕ್ಕೆಲ್ಲ ಎದ್ದು ಮೇವು ತಿನ್ನಲು ಶುರು ಮಾಡಬೇಕು ಎಂದುಕೊಂಡ.

''ರಾಮಣ್ಣಾ, ದನಗಳ ಮೇವನ್ನ ನಾವು ತಿಂದರೆ ಜನ ನಗೊಲ್ಲವೇ?''

''ಖಂಡಿತಾ ಇಲ್ಲ. ನೀನು ಪ್ರಖ್ಯಾತಿ ಪಡೆಯುತ್ತೀಯ. ನೀನು ಮೇವು ತಿನ್ನುತ್ತಿರುವ ಫೋಟೋ ಪತ್ರಿಕೆಗಳಲ್ಲಿ ಪ್ರಕಟವಾಗುತ್ತೆ. ಇದೊಂದು ಹಗರಣ ಆಗುತ್ತೆ. ಇದಕ್ಕೆ 'ಮೇವು ಹಗರಣ' ಅನ್ನೋ ಹೆಸರು ಬರುತ್ತೆ. ಈ ಬಗ್ಗೆ ಲೋಕದಲ್ಲಿ ಕೋಲಾಹಲವಾಗುತ್ತದೆ. ಲೋಕಸಭೆಯಲ್ಲಿ ವಿಷಯ ಚರ್ಚೆಗೆ ಬರುತ್ತದೆ. ಆ ವೇಳೆಗೆ ನೀನು ಸಾವಿರ ಕೋಟಿ ಮೇಯ್ದು ಮುಗಿಸಿರಬೇಕು. ನಿನ್ನನ್ನು ಯಾರೂ ಕದಲಿಸೋಲ್ಲ. ಆನೆ ದಿನಕ್ಕೆ ಅರ್ಧ ಕ್ವಿಂಟಾಲ್ ಮೇಯುತ್ತೆ. ಅದಕ್ಕೆ ಆನೆ ಬಲಶಾಲಿ. ಅದರ ಬಾಲ ಹಿಡಿದು ಜಗ್ಗಿ ಜೋಕಾಲಿ ಆಡಬಹುದು. ಆದರೆ ಅದನ್ನು ಕದಲಿಸಲು ಸಾಧ್ಯವಿಲ್ಲ''

ವಿಶ್ವನಿಗೆ ಅನುಮಾನ ಶುರುವಾಯಿತು.

ಉತ್ತರ ಭಾರತದ ಪ್ರತಿಷ್ಠಿತ ರಾಜ್ಯವಾದ ಬಿಹಾರದಲ್ಲಿ ಆಹಾರ ಕಡಿಮೆ ಇದ್ದರೂ ಮೇವು ಹೆಚ್ಚಿದ್ದು ಅದನ್ನು ತಿಂದ ಮುಖ್ಯಮಂತ್ರಿಗಳು ಜೀರ್ಣಿಸಿಕೊಳ್ಳಲಾಗದೆ ಒದ್ದಾಡಿದ್ದು ನೆನಪಾಯಿತು.

''ಮೇವೂ ಪ್ರಸಾದ ಅನ್ನೋವರು ಸೀಟಿಂದ ಕೆಳಗೆ ಇಳಿದರಲ್ಲ? ಅವರಿಗೆ ಯಾಕೆ ತೊಂದರೆ ಆಯಿತು?''

''ಆಗಲೇ ಹೇಳಿದೆ ವಿಶ್ವಾ ೧೦೦೦ ಕೋಟಿ ಮುಗಿಸಿದ ಮೇಲೇ ಮೇವು ವಿರೋಧಿ ಶಕ್ತಿ ಬರುತ್ತದೆ ಎಂದು. ಆದರೆ ಮೇವೂ ಪ್ರಸಾದ್ ೯೫೦ಕ್ಕೆಲ್ಲಾ ನಿಲ್ಲಿಸಿಬಿಟ್ಟರು. ಇದು ಅವರ ತಪ್ಪು''

''ಮುಖ್ಯಮಂತ್ರಿಗಳೇ ಯಾಕೆ ಅಷ್ಟು ತಿಂದರು?''

''೧೯೭೩ರಲ್ಲಿ ಅವರಿಗೆ ಮದುವೆ ಆದಾಗ 'ಫ್ಯಾಮಿಲಿ ಪ್ಲಾನಿಂಗ್' ಬಗ್ಗೆ ಕೇಂದ್ರ ಸರ್ಕಾರ ಒತ್ತಿ ಹೇಳುತ್ತಿತ್ತು. ಅನಂತರ ಕತ್ತರಿ ಹಿಡಿದು ಸಂಜಯಪ್ಪ ಬಂದು ಒಂದೇ ಮಗು ಸಾಕು ಎಂದು ಹೆದರಿಸಿದರು. ಯಾವ ಸರ್ಕಾರಕ್ಕೂ ನಾನು ತಲೆ ಬಾಗುವುದಿಲ್ಲ ಎಂದು ತೋರಿಸಲು ಮೇವೂ ಪ್ರಸಾದ್ ಮುಕ್ಕಾಲು ಡಜನ್ ಮಕ್ಕಳಿಗೆ ತಂದೆಯಾದರು''

''ಮುಕ್ಕಾಲು ಡಜನ್!'' ವಿಶ್ವ ಗಾಬರಿ ಆದ.

''ಹೌದು. ಏಳು ಹೆಣ್ಣು, ಎರಡು ಗಂಡು. ಅಷ್ಟು ದೊಡ್ಡ ಕುಟುಂಬಕ್ಕೆ ಎಷ್ಟು ಮೇವು ಬೇಕಾಗುತ್ತೆ ಗೊತ್ತಾ? ಮೇವೂ ಪ್ರಸಾದ್ ತಮ್ಮ ಮಾವನೊಂದಿಗೆ ಸವಾಲು ಮಾಡಿ ಸೃಷ್ಟಿ ಕಾರ್ಯದಲ್ಲಿ ಇಳಿದಿದ್ದರು''

''ಮೇವೂ ಮಾವನಿಗೆ ಎಷ್ಟು ಮಕ್ಕಳು?''

''ಎಂಟು ಮಕ್ಕಳು. ಅದರಲ್ಲಿ ಹಿರಿಯ ಹೆಣ್ಣುಮಗಳು ಈ ದಿನ ಬಿಹಾರದ ಮುಖ್ಯಮಂತ್ರಿ!''

''ಆಕೆ ಏನು ಓದಿದ್ದಾರೆ?''

''೧೪ಕ್ಕೆಲ್ಲಾ ಮದುವೆಯಾಯ್ತು. ಮೊದಲ ವರ್ಷ ಗರ್ಭಿಣಿ, ಎರಡನೇ ವರ್ಷ ಬಾಣಂತಿ. ಮತ್ತೆ ಮುಂದಿನ ವರ್ಷ ಗರ್ಭಿಣಿ. ಈ ಸರಪಳಿಗೆ ಸಿಕ್ಕಿದ್ದರಿಂದ ನಾಲ್ಕನೇ ಕ್ಲಾಸಿನ ಮೇಲೆ ಓದಲಾಗಿಲ್ಲ! ಆದರೇನು? ಮುಖ್ಯಮಂತ್ರಿಯೇ ಆಗಿದ್ದಾರಲ್ಲ?''

''ಗಂಡ ಬೇರೆಯವರ ಕೈಗೆ ಬೀಗದ ಕೈ ಕೊಡದೆ ತನ್ನ ಹೆಂಡತಿಗೇ ಕೊಟ್ಟಿದ್ದು ಒಳ್ಳೇದಾಯ್ತು. ಪದವಿ ಆದೇ ಮನೇಲಿ ಉಳೀತು. ಗಂಡ ಈಗ ಅಡಿಗೆ ಮನೇಲಿ, ಹೆಂಡತಿ ಸದನದಲ್ಲಿ''

''ಆಕೆ ಎಂ.ಎಲ್.ಎ., ಎಂ.ಪಿ. ಏನಾದರೂ?''

''ಏನೂ ಇಲ್ಲ, ಪಾಪ ಮನೆಯಿಂದ ಆಚೆ ಬಂದವರಲ್ಲ. ಗಂಡ ಮೇವು ತಿಂದಿದ್ದಕ್ಕೆ ಲಾಟರಿ ಬಹುಮಾನದಂತೆ ಮುಖ್ಯಮಂತ್ರಿ ಪದವಿ ಸಿಕ್ಕಿದೆ. ಏನು ಮಾಡಬೇಕೋ ಗೊತ್ತಿಲ್ಲ''

ವಿಶ್ವ ತಬ್ಬಿಬ್ಬಾಗಿ ಬಿಟ್ಟ, ಯಾವುದೇ ಓದು, ಬರಹ, ಅನುಭವ, ಸದಸ್ಯತ್ವ ಇಲ್ಲವಾದರೂ ಆಕೆ ಒಮ್ಮೆಗೇ ಮುಖ್ಯಮಂತ್ರಿ ಆದ ಬಗ್ಗೆ ಆಶ್ಚರ್ಯಪಟ್ಟ. ಇಡೀ ರಾಜ್ಯಾನ ಯಾವ ರೀತಿ ಆಕೆ ಸುಧಾರಿಸಲು ಸಾಧ್ಯ ಎಂದು ಯೋಚಿಸಿದ.

''ಆಕೆಯ ಮುಂದಿನ ಯೋಜನೆಗಳೇನು ರಾಮಣ್ಣಾ?''

''ಪತಿದೇವರನ್ನು ಹಗರಣದಿಂದ ಬಿಡಿಸಬೇಕು. ಸಾವಿತ್ರಿ ಯಮನ ದವಡೆಯಿಂದ ಸತ್ಯವಾನನನ್ನು ಉಳಿಸಿದ ಕತೆ ನಮ್ಮಲ್ಲಿದೆ. ಹೆಂಗಸಿನ ಪ್ರಾರ್ಥನೆಗೆ ದೇವರು ಒಲಿಯುವ. ಕೇಳಿದ್ದೆಲ್ಲ ಕೊಡುವ''

''ಕೇಳಿದ್ದು ಅಂದರೆ ಏನು ಕೇಳಬಹುದು?''

''ಹೇ ದೇವಾ, ನಾನು ಎಂದಿನಂತೆ ಸಾರಿಗೆ ಒಗ್ಗರಣೆ ಹಾಕುತ್ತಿದ್ದೆ. ನನ್ನ ಪತಿದೇವರು ಬಂದು ''ಎಲ್ಲೆ ಮಡದಿಯೇ, ನಾನು ಇಲ್ಲಿ ಇರುತ್ತೇನೆ. ನೀನು ಅಲ್ಲಿಗೆ ಹೋಗಿ ಸದನ ನಡೆಸು'' ಎಂದರು. ಅಡಿಗೆಯಿಂದ ಮುಕ್ತಿ ದೊರೆಯುವುದೇನೋ ಎಂದು ಒಪ್ಪಿದೆ. ಅನಂತರ ತಿಳಿಯಿತು. ಅವರನ್ನು ಕೋರ್ಟಿಗೆ ಎಳೆದು ಅವಮಾನ ಮಾಡಲು ಈ ದೇಶದ ಜನ ಪ್ರಯತ್ನಿಸಿದ್ದಾರೆ ಎಂದು. ಮುಖ್ಯಮಂತ್ರಿ ಪದವಿಯನ್ನು ನೀನು ದಯಪಾಲಿಸಿದೆ. ಆದರೆ ನಮ್ಮ ಮನೆಯ ಯಜಮಾನರೇ ಜೈಲು ಸೇರುವುದು ಸರಿಯಲ್ಲ. ನನ್ನ ಪ್ರಾರ್ಥನೆ ಮನ್ನಿಸು-ಅಂತ ಕೇಳ್ತಾರೆ. ದೇವರು ಯೋಚಿಸ್ತಾನೆ. 'ತಥಾಸ್ತು' ಅನ್ನಬೇಕು, ಅಷ್ಟರಲ್ಲಿ ವಿರೋಧ ಪಕ್ಷದವರು ದೇವರ ಗಮನ ಬೇರೆಡೆ ಸೆಳೆದು 'ಯಥಾಸ್ತು' ಅನ್ನಿಸಿಬಿಡ್ತಾರೆ. ಆದರೂ ಈಕೆ ಬಿಡೊಲ್ಲ''

''ಹೌದು, ಈ ಪದವಿ ತಾನೇ ಇನ್ನೆಷ್ಟು ತಿಂಗಳು? ಪಾಪ ಏನು ತಿಳಿದಿದೆ ಅವರಿಗೆ? ಸದನದ ಸದಸ್ಯರ ಸಂಖ್ಯೆಯೇ ತಿಳಿಯದು. ಇನ್ನು ಏನು ರಾಜ್ಯಭಾರ ಮಾಡುತ್ತಾರೆ?'' ಎಂದು ವಿಶ್ವ ದನಿಗೂಡಿಸಿದ.

ವಿಶ್ವನ ಮಡದಿ ವಿಶಾಲೂ ದಿನಪತ್ರಿಕೆ ಹಿಡಿದು ಬಂದಳು. ಅವಳ ಮುಖದಲ್ಲಿ ಸಂತಸವಿತ್ತು.

''ರೀ, ಮಹಿಳೆಯರಿಗೆ ಮೀಸಲಾತಿ ಕೊಡಬೇಕು ಅಂತ ಜನ ಬಾಯಲ್ಲಿ ಹೇಳ್ತಾರೆ. ಆದರೆ ನಮ್ಮ ಮೇವೂ ಪ್ರಸಾದ್ ತಮ್ಮ ಸ್ಥಾನಾನೇ ಬಿಟ್ಟುಕೊಟ್ಟಿದ್ದಾರೆ'' ಎಂದು ವಿಶಾಲೂ ಶ್ಲಾಘಿಸಿದಳು.

''ಅದಕ್ಕೆ ನಾನೇನು ಮಾಡಬೇಕು ಈಗ?''

''ನೀವು ಸಹ ಮೇವು ತಿನ್ನೋಕೆ ಶುರು ಮಾಡಿ, ಒಂದಿಲ್ಲ ಒಂದಿನ ನಾನೂ ಸಹ ಮುಖ್ಯಮಂತ್ರಿ ಆಗ್ತೀನಿ'' ಎಂದು ತನ್ನಾಸೆಯನ್ನು ಗಂಡನಿಗೆ ತಿಳಿಸಿದಳು.

●



# ಅಡುಗೆ ಮನೆ

## ಆಲೂಗಡ್ಡೆ ಜಾಮೂನ್

**ಬೇಕಾಗುವ ಸಾಮಗ್ರಿಗಳು :**

೧/೨ ಕೆ.ಜಿ. ಆಲೂಗಡ್ಡೆ, ಎರಡು ಬಟ್ಟಲು ಸಕ್ಕರೆ, ಒಂದು ಬಟ್ಟಲು ತುಪ್ಪ, ೧/೨ ಟೀ ಚಮಚ ಕೇಸರಿ ಕಲರ್, ಎರಡು ಚಮಚ ಯಾಲಕ್ಕಿ ಪುಡಿ, ನಾಲ್ಕು ಹನಿ ಗುಲಾಬಿ ಎಸೆನ್ಸ್.



**ಮಾಡುವ ವಿಧಾನ**

ಆಲೂಗಡ್ಡೆಯನ್ನು ಚೆನ್ನಾಗಿ ಬೇಯಿಸಬೇಕು. ಅದರ ಸಿಪ್ಪೆ ತೆಗೆದು, ತುಪ್ಪದಲ್ಲಿ ಕೆಂಪು ಬಣ್ಣ ಬರುವಷ್ಟು ಕರಿದು ಇಟ್ಟುಕೊಂಡಿರಬೇಕು. ನಂತರ ಎಳೆಯ ಸಕ್ಕರೆ ಪಾಕ ಮಾಡಿಟ್ಟುಕೊಂಡಿರುವುದೊಳಗೆ ಕೇಸರಿ ಬಣ್ಣ, ಯಾಲಕ್ಕಿಪುಡಿ, ಗುಲಾಬಿ ಎಸೆನ್ಸ್ ಹಾಕಬೇಕು. ತುಪ್ಪದಲ್ಲಿ ಕರಿದಿದ್ದ ದುಂಡು ದುಂಡಾದ ಆಲೂಗಡ್ಡೆಯನ್ನು ಸಕ್ಕರೆಯ ಪಾಕದಲ್ಲಿ ಹಾಕಿ ಕನಿಷ್ಠ ಅರ್ಧ ಗಂಟೆಯ ಕಾಲದವರೆಗೆ ನೆನೆಸಿಟ್ಟು ಅವುಗಳನ್ನು ಹಾಲಿನೊಂದಿಗೆ ಆಲೂಗಡ್ಡೆ ಜಾಮೂನನ್ನು ತಿನ್ನಬಹುದು.

## ಸೋಹನಾ ಲಾಡು

**ಬೇಕಾಗುವ ಸಾಮಗ್ರಿ :**

೧/೨ ಕೆ.ಜಿ. ಮೈದಾಹಿಟ್ಟು, ೧/೨ ಕೆ.ಜಿ. ಸಕ್ಕರೆ, ಮುಕ್ಕಾಲು ಕೆ.ಜಿ. ತುಪ್ಪ, ೫೦.ಗ್ರಾಂ, ಗೋಡಂಬಿ, ೫೦ ಗ್ರಾಂ. ದ್ರಾಕ್ಷಿ ೭ ಏಲಕ್ಕಿ ಕಾಯಿ.

**ಮಾಡುವ ವಿಧಾನ**

ಮೈದಾಹಿಟ್ಟನ್ನು ಚೊಕ್ಕಟವಾಗಿ ಜರಡಿ ಹಿಡಿದು ೫ ಚಮಚ ತುಪ್ಪ ಹಾಕಿ ನೀರಲ್ಲಿ ಪೂರಿ ಹಿಟ್ಟಿನ ಹದದಲ್ಲಿ ಕಲಸಿಟ್ಟು ಕೊಳ್ಳುವುದು. ಆಮೇಲೆ ಅದನ್ನು ಚಪಾತಿಯಂತೆ ಮಸೆದ ಮೇಲೆ ಲಟ್ಟಣಿಗೆಯಿಂದ ಲಟ್ಟಿಸುವುದು. ಪೂರಿ ಅಳತೆಯಷ್ಟು ಲಟ್ಟಿಸಿದ ಚಪಾತಿಗಳನ್ನು ತುಪ್ಪದಲ್ಲಿ ಗರಿಗರಿಯಾಗಿ ಕರಿದಿಟ್ಟುಕೊಳ್ಳಬೇಕು. ಆಮೇಲೆ ಸಕ್ಕರೆಯನ್ನು ನೀರಿನೊಂದಿಗೆ ಸಕ್ಕರೆಯ ದಾರದ ಪಾಕ ಮಾಡಿಕೊಳ್ಳಬೇಕು. ಕರಿದಿಟ್ಟು ಕೊಂಡ ಚಪಾತಿಗಳನ್ನು ಸಣ್ಣಗೆ ಪುಡಿ ಪುಡಿಮಾಡಿ ಸಕ್ಕರೆಯ ಪಾಕಕ್ಕೆ ಹಾಕಬೇಕು. ನಂತರ ತುಪ್ಪದಲ್ಲಿ ಹುರಿದ ಗೋಡಂಬಿ, ಏಲಕ್ಕಿ ಪುಡಿ, ದ್ರಾಕ್ಷಿಯನ್ನು ಹಾಕಿ ಕೈ ಆಡಿಸಿ ಅದು ಸ್ವಲ್ಪ ಆರುತ್ತಿರುವಾಗ ಉಂಡೆಗಳನ್ನು ಕಟ್ಟಿಡಬಹುದು. ಇದು ಕನಿಷ್ಠ ೫-೬ ದಿನಗಳವರೆಗೂ ಕೆಡುವುದಿಲ್ಲ. ಮಾಡಿದ ೩-೪ನೇ ದಿನದಲ್ಲಿ ಇದರ ರುಚಿ ಬಹಳವಾಗಿರುತ್ತದೆ. ಆದರೆ ಇದಕ್ಕೆ ತೇವ ತಗುಲದಂತೆ ನೋಡಿಕೊಳ್ಳುವುದು. ಅವಶ್ಯಕ.

– ನಿರ್ಮಲ. ಬ. ಹಿರೇಮಠ,
ಯಲಬುರ್ಗಾ

## ಸೌತೇಕಾಯಿ ಪರೋಟ

**ಬೇಕಾಗುವ ಸಾಮಗ್ರಿ :**

೧/೪ ಕೆ.ಜಿ. ಮೈದಾಹಿಟ್ಟು, ೩/೪ ಕೆ.ಜಿ. ಗೋಧಿಹಿಟ್ಟು, ೫ ದಪ್ಪ ಸೌತೇಕಾಯಿ, ೩ ಹಸಿಮೆಣಸು, ಸಣ್ಣಗೆ ಹೆಚ್ಚಿದ ಈರುಳ್ಳಿ, ಕೊತ್ತಂಬರಿ ಸೊಪ್ಪು ಮತ್ತು ರುಚಿಗೆ ತಕ್ಕಷ್ಟು ಉಪ್ಪು.

**ಮಾಡುವ ವಿಧಾನ**

ಮೈದಾಹಿಟ್ಟು ಮತ್ತು ಗೋಧಿಹಿಟ್ಟನ್ನು ಬೆರೆಸಿ ಚಪಾತಿ ಹಿಟ್ಟಿನ ಹದಕ್ಕೆ ಕಲಸಿಡಬೇಕು. ಸೌತೇಕಾಯಿಯ ಸಿಪ್ಪೆ ತೆಗೆದು ತಿರುಳನ್ನು ಚೆನ್ನಾಗಿ ತುರಿದು ಉಪ್ಪು ಬೆರೆಸಿ ಇಡಬೇಕು. ಸ್ವಲ್ಪ ಸಮಯದ ನಂತರ ಆ ತಿರುಳಿಗೆ ಹೆಚ್ಚಿದ ಈರುಳ್ಳಿ, ಹಸಿಮೆಣಸಿನಕಾಯಿ ಮತ್ತು ಕೊತ್ತಂಬರಿ ಸೊಪ್ಪನ್ನು ಹಾಕಿ ಕಲಸಬೇಕು. ನಂತರ ಕಲಸಿಟ್ಟ ಹಿಟ್ಟನ್ನು (ನಿಂಬೆಗಾತ್ರದ) ಸ್ವಲ್ಪ ಲಟಿಸಿ ಅದರೊಳಗೆ ಸೌತೇಕಾಯಿಯ ಮಿಶ್ರಣವನ್ನು ತುಂಬಿ ಲಟಿಸಿ ಕಾದ ಹಂಚಿನ ಮೇಲೆ ಹಾಕಿ ಎರಡೂ ಬದಿಗೆ ಎಣ್ಣೆ ಸವರಿ ಬೇಯಿಸಬೇಕು.

## ಹುಳಿ ಅವಲಕ್ಕಿ

**ಬೇಕಾಗುವ ಸಾಮಗ್ರಿ :**

ಸಾಂಬಾರ ಪುಡಿ ೨ ಅಥವಾ ೩ ಚಮಚ, ಹುಣಿಸೇಹಣ್ಣು (ನಿಂಬೆಹಣ್ಣಿ ಗಾತ್ರದ್ದು), ಬೆಲ್ಲ, ಕರಿಬೇವು, ಎಣ್ಣೆ, ದಪ್ಪ ಅವಲಕ್ಕಿ, ಶೇಂಗಾ ಬೀಜ, ಕಡ್ಲೆಬೇಳೆ, ಉದ್ದಿನ ಬೇಳೆ, ಸಾಸಿವೆ, ಎಳ್ಳು ಮತ್ತು ಒಂದು ಹೋಳು ಕಾಯಿ ತುರಿ.

**ಮಾಡುವ ವಿಧಾನ**

ದಪ್ಪ ಅವಲಕ್ಕಿಯನ್ನು ಸ್ವಲ್ಪ ಮಿಕ್ಸಿಯಲ್ಲಿ ಪುಡಿ ಮಾಡಿಕೊಂಡು ಅದಕ್ಕೆ ಹುಣಿಸೇಹಣ್ಣನ್ನು ನೆನೆಸಿ ರಸವನ್ನು ಅವಲಕ್ಕಿಗೆ ಹಾಕಬೇಕು. ಅವಲಕ್ಕಿಯನ್ನು ನೆನೆಸಿಡಬೇಕು. ಅದಕ್ಕೆ ಎಳ್ಳು ಹುರಿದು ಪುಡಿಮಾಡಿ ಹಾಕಬೇಕು. ಆಮೇಲೆ ಎಣ್ಣೆಯಲ್ಲಿ ಸಾಸಿವೆ, ಕಡ್ಲೆಬೇಳೆ, ಶೇಂಗಾ ಉದ್ದಿನಬೇಳೆ, ಕರಿಬೇವು, ಉಪ್ಪು, ಬೆಲ್ಲ ಮತ್ತು ಸಾಂಬಾರ ಪುಡಿ ಹಾಕಿ ಒಗ್ಗರಣೆ ಮಾಡಿ ಅದನ್ನು ನೆನೆಸಿಟ್ಟು ಅವಲಕ್ಕಿಗೆ ಹಾಕಿ ಕಲಸಬೇಕು. ಆಮೇಲೆ ಕಾಯಿ ತುರಿದು ಹಾಕಬೇಕು.

– ಎಂ. ಶಾಂತಲಾ, ಸಾಗರ

# ಅನಾರಸ

**ಬೇಕಾಗುವ ಸಾಮಗ್ರಿ:**

ಒಂದು ಸೇರು ಅಕ್ಕಿ, ಒಂದು ಸೇರು ಬೆಲ್ಲ, ೧೦/೧೫ ಪುಡಿ ಮಾಡಿದ ಏಲಕ್ಕಿ, ಕರಿಯಲು ಎಣ್ಣೆ ಸ್ವಲ್ಪ ಗಸಗಸೆ ಕಾಳು.



**ಮಾಡುವ ವಿಧಾನ**

ಅಕ್ಕಿಯನ್ನು ಚೆನ್ನಾಗಿ ತೊಳೆದು ಮೂರು ದಿನಗಳವರೆಗೆ, ನೆನೆಯಲು ಬಿಡಿ. ಆಗಾಗ ನೀರು ಬದಲಾಯಿಸುತ್ತಾ ಇರಬೇಕು. ಮೂರುದಿನಗಳ ನಂತರ, ಅಕ್ಕಿಯನ್ನು ಮತ್ತೆ ಚೆನ್ನಾಗಿ ತೊಳೆದು ಬಿಳಿ ಕಾಟನ್ ಅರಿವೆ ಯೊಂದರ ಮೇಲೆ ೫ ನಿಮಿಷಗಳವರೆಗೆ ಗಾಳಿಯಾಡಲು ಬಿಡಿ. ಅಕ್ಕಿಯಿಂದ ನೀರು ಕೊಂಚ ಹೋಗಿದಂತಾಗಲು, ಅಕ್ಕಿಯನ್ನು ಒರಳಿನಲ್ಲಿ ಚೆನ್ನಾಗಿ ಹಿಟ್ಟಾಗುವವರೆಗೆ ಕುಟ್ಟಿ, ಸಣ್ಣ ತೂತಿರುವ (ಪಿಟ್ಟೆದ ಹಿಟ್ಟಿನ ಸಾಣಿಗೆ) ಸಾಣಿಗೆಯಲ್ಲಿ ಹಿಟ್ಟನ್ನು ಸಾಣಿಸಿಕೊಳ್ಳಿ, ಹೀಗೆ ಹಿಟ್ಟೆಲ್ಲವನ್ನು ಜರಡಿ ಹಿಡಿದ ನಂತರ, ಸೇರುಬೆಲ್ಲವನ್ನು ಪುಡಿ ಮಾಡಿಕೊಂಡು. ಒರಳಿನಲ್ಲಿ ಹಿಟ್ಟು ಮತ್ತು ಬೆಲ್ಲಹಾಕಿ ಎರಡೂ ಹದವಾಗಿ ಬೇರೆಯುವಂತೆ ಕುಟ್ಟಿ, ಮೃದುವಾದ ಕಣಕವಾಗುವಂತೆ ಚೆನ್ನಾಗಿ ಕುಟ್ಟಿಕೊಂಡು. ಒಂದು ಪಾತ್ರೆಯಲ್ಲಿ ಒಂದು ಚಿಕ್ಕ ಸ್ಪೂನಿನಷ್ಟು ಗಟ್ಟಿಹಾಲು ಹಾಕಿ ಕಣಕದೊಂದಿಗೆ ಮೃದುವಾಗಿ ನಾದಿ. ಗಾಳಿಯಾಡದ ಡಬ್ಬವೊಂದರಲ್ಲಿ ೪-೫ದಿನಗಳವರೆಗೆ ಮತ್ತೆ ನೆನೆಯಲು ಬಿಡಿ. (ಎರಡುದಿನಕ್ಕೊಮ್ಮೆ ಕಣಕವನ್ನು ಗಟಿಯಾಗಿ ದೆಯಾ ಎಂದು ನೋಡಿ ಹಾಗೇನಾದರೂ ಗಟ್ಟಿಯಾಗಿದ್ದರೆ, ಮತ್ತೆ ಸ್ಪೂನ್ ಹಾಲು ಬೆರೆಸಿ, ನಾದಿ ಮುಚ್ಚಿಟ್ಟು, ಕಣಕವನ್ನು ತಿಂಗಳವರೆಗೆ ತೆಗೆದಿರಿಸಿದರೂ, ಕೆಡಲಾರದು.

೪-೫ ದಿನಗಳ ನಂತರ ಬಾಣಲೆಯಲ್ಲಿ ಎಣ್ಣೆ ಕಾಯಿಸಿ ದಪ್ಪ ಕಣ್ಣಿರುವ ಪಾತ್ರೆಯೊಂದನ್ನು ತಟ್ಟೆಯಲ್ಲಿರಿಸಿ. ಈಗ ಏಲಕ್ಕಿ ಪುಡಿ ಬೆರೆಸಿ. ಕಣಕ ಮೃದುವಾಗಿದ್ದರೆ ಸರಿ ಇಲ್ಲದಿದ್ದರೆ ಸ್ಪೂನ್‌ನಷ್ಟು ಹಾಲಿನಿಂದ ಬೇಕಾದರೆ ನಾದಿ. ಗೋಲಿಯಾ ಕಾರದ ಉಂಡೆ ಮಾಡಿ. ದಪ್ಪ ಪ್ಲಾಸ್ಟಿಕ್ ಕವರಿಗೆ ಚೆನ್ನಾಗಿ ಎಣ್ಣೆ ಸವರಿ. ಉಂಡೆಯನ್ನು ಅದರ ಮೇಲಿರಿಸಿ ಬೆರಳಿನಿಂದ ಸಾಧ್ಯವಾದಷ್ಟು ಅಗಲವಾಗಿ ತಟ್ಟಿ. ಕಾದ ಎಣ್ಣೆಯಲ್ಲಿ ಬಿಡುವ ಮುಂಚೆ ಚಿಟಿಕೆ ಗಸಗಸೆ ಕಾಳುಗಳನ್ನು ಅದರ ಮೇಲೆ ಅಂಟುವಂತೆ ಬಿತ್ತಿ. ನಂತರ ಎಣ್ಣೆಯಲ್ಲಿ ಹೊಂಬಣ್ಣಬರುವಂತೆ ಕರಿದು, ದಪ್ಪಕಣ್ಣಿರುವ ಅಗಲ ಪಾತ್ರೆಯಲ್ಲಿ ಹಾಕಿ. ಏಕೆಂದರೆ, ಎಣ್ಣೆಯಿಂದ ತೆಗೆದ "ಅನಾರಸ" ಪಾತ್ರೆಯಲ್ಲಿ ಹಾಕಿದಾಗ ಎಣ್ಣೆಯನ್ನು ಬಿಡುತ್ತೆ. ಹೀಗೆಯೇ ಎಲ್ಲ ಕಣಕವನ್ನು ಗೋಲಿಯಾಕಾರದ ಗಾತ್ರದಷ್ಟು ತೆಗೆದುಕೊಂಡು ತಟ್ಟುತ್ತಾ ಹೊಂಬಣ್ಣ ಬರುವಂತೆ ಗರಿಗರಿಯಾಗಿ ಕರಿದು, ಬಂದ ಅತಿಥಿಗಳಿಗೆ ಕುರುಕಲು ತಿಂಡಿ ಕೊಟ್ಟು ಹೊಗಳಿಸಿಕೊಳ್ಳದೇ ಇರಲಾರಿರಿ.

# ಗಜ್ಜರಿ ಹಲ್ವಾ

**ಬೇಕಾಗುವ ಸಾಮಗ್ರಿ:**

೧ ಕೆ.ಜಿ. ಕೆಂಪನೆಯ ಸಿಹಿ ಗಜ್ಜರಿ. ೩೫೦ ಗ್ರಾಂ ಸಕ್ಕರೆ, ೨೦ರಿಂದ ೨೫ ಏಲಕ್ಕಿ, ೧೦ ಲವಂಗ (ಪುಡಿ ಮಾಡಿದ್ದು). ೧೫೦ ಗ್ರಾಂ ಖೋವಾ, ಚಿಟಿಕೆ ಕೇಸರಿಬಣ್ಣ, ಒಂದು ಬಟ್ಟಲು ತಾಜಾ ತುಪ್ಪ, ಬಟ್ಟಲು ಹಾಲು ೫೦ ಗ್ರಾಂ ಗೋಡಂಬಿ.

**ಮಾಡುವ ವಿಧಾನ**

ಮೊದಲು ಕೆಂಪನೆಯ ಗಜ್ಜರಿಗಳನ್ನು ನೀರಲ್ಲಿ ತೊಳೆದು ನಾರು ತೆಗೆದು, ನಂತರ ಸಣ್ಣಗೆ ತುರಿದು ಒಂದು ದಪ್ಪ ತಳವಿರುವ ಪಾತ್ರೆಯಲ್ಲಿ ಹಾಲುಹಾಕಿ, ಚೆನ್ನಾಗಿ ಮೆದುವಾಗುವಂತೆ ಬೇಯಿಸಿ, ಹಾಲು ಆಗಾಗ ಇಂಗಿದರೆ, ಮತ್ತೆ ಅಳತೆಗೆ ಅಲ್ಲದಿದ್ದರೂ, ಗಜ್ಜರಿಮೆತ್ತಗಾಗಲು ಹಾಲು ಬೆರೆಸಿ. ಈಗ ಗಜ್ಜರಿ ಮೆತ್ತಗಾಗಿದೆ ಎಂದೆನಿಸಿದಾಗ, ಅದರಲ್ಲಿ ಸಕ್ಕರೆ, ಹಾಕಿ ಸೌಟಿನಿಂದ ಬೆರೆಸುತ್ತಾ ಇರಿ. ಗಜ್ಜರಿ, ಸಕ್ಕರೆ ಸೇರಿ ಹದವಾಗಿ ಬೇಯುತ್ತಿರುವಾಗ, (ಸಣ್ಣ ಉರಿಯಮೇಲೆ) ಏಲಕ್ಕಿ, ಲವಂಗ ಪುಡಿ ಚಿಟಿಕೆ ಕೇಸರಿ ಬಣ್ಣ, ಕೋವಾ ಹಾಕಿ ಹಾಗೆಯೇ ಬಿಟ್ಟುಬಿಡದಹಾಗೇ ಕೈಯಾಡಿಸುತ್ತಾ ಇರಿ. ಅದರಲ್ಲಿ ಮೇಲಿಂದ ಮೇಲೆ, ಸ್ಪೂನಿನಿಂದ ತುಪ್ಪ ಸುರಿಯುತ್ತ ಇರಿ. ಚಿಕ್ಕ ಚಿಕ್ಕ ಭಾಗಗಳನ್ನಾಗಿ ಮಾಡಿದ ಗೋಡಂಬಿ ಚೂರುಗಳನ್ನು ಅರ್ಧಹಾಕಿ. ಯಾವುದೇ ಕಾರಣಕ್ಕೂ ಕೈಯಾಡಿಸುವುದನ್ನು ನಿಲ್ಲಿಸದಿರಿ. ತುಪ್ಪಹೆಚ್ಚಾಗುವುದೆಂಬ ಚಿಂತೆ ಬೇಡ. ಹೀಗೆಯೇ ಪಾತ್ರೆಯಲ್ಲಿ ಹಲ್ವಾ ಹದವಾಗಿ ಬೇಯುತ್ತಾ, ಬೇರೆಯುತ್ತಾ, ತುಪ್ಪ ಹೀರಿಕೊಂಡು ಪಾತ್ರೆಯ ತಳ ಬಿಡುತ್ತಿರುವಾಗ, ಒಂದು ತಟ್ಟೆಗೆ ತುಪ್ಪ ಸವರಿ, ಹಲ್ವಾ ಅದರ ತುಂಬ ಸಮನಾಗಿ ಹರಡಿ, ಮೇಲೆ ಉಳಿದ ಅರ್ಧಗೋಡಂಬಿ ಚೂರುಗಳನ್ನು ಉದುರಿಸಿ, ಸ್ವಲ್ಪ ಹೊತ್ತು ಆರಲು ಬಿಟ್ಟು, ಡೈಮಂಡ್ ಆಕಾರದಲ್ಲಿ ಕತ್ತರಿಸಿ, ಬಿಸಿ ಬಿಸಿ ಇರುವಾಗಲೇ ಹೊಳೆಯುವ ಸುಂದರ ಬಟ್ಟಲುಗಳಲ್ಲಿ ಅಲಂಕರಿಸಿ, ಬಂದ ವಿಶೇಷ ಅತಿಥಿಗಳಿಗೆ ಬಡಿಸಿ ನೋಡಿ.

**- ಲೀಲಾ ಬಳ್ಳಾರಿ, ಬಾಗಲಕೋಟೆ**

## ಮನೆ ಮದ್ದು

### ಅರೆ ತಲೆ ನೋವಿಗೆ

*ಕೆಲವರಿಗೆ ಈ ಅರೆ ತಲೆ ನೋವು ಬಹಳ ದಿನಗಳವರೆಗೆ ಇರುತ್ತದೆ. ಪರಿಣಿತ ವೈದ್ಯರಿಗೆ ತೋರಿಸಿದರು ಗುಣವಾಗುವುದಿಲ್ಲ. ನಮ್ಮ ಮನೆಯಲ್ಲಿ ಇರುವ ಈ ಕೆಳಕಂಡ ವನಸ್ಪತಿ ಗಳಿಂದ ನಿವಾರಣೆ ಮಾಡಿಕೊಳ್ಳಬಹುದು.*

*ಇಂಗಲಾರದ ಮೇಣ, ಜಿನ ಮೇಣ ಮತ್ತು ಸುವುಳು ಇವು ಮೂರು ಪದಾರ್ಥಗಳನ್ನು ಸಮ ಪ್ರಮಾಣದಲ್ಲಿ ಬೆರೆಸಿ ನಂತರ ಪುಡಿಯಾಗುವವರೆಗೆ ಅರೆದು, ಪುಡಿಯನ್ನು ಒಂದು ಬಿಳಿ ಕಾಗದಕ್ಕೆ ಅಂಟಿಸಬೇಕು. ನಂತರ ಬಿಸಿಲಿಗೆ ಒಣಗಿಸ ಬೇಕು. ಒಣಗಿದ ಮೇಲೆ ಕಾಗದವನ್ನು ಸುಡಬೇಕು. ಹೀಗೆ ಸುಡುವಾಗ ಅದರಿಂದ ಬರುವ ಹೊಗೆಯನ್ನು ಶಾಖ ತೆಗೆದು ಕೊಳ್ಳಬೇಕು. ಈ ಕ್ರಮವನ್ನು ಅರೆ ತಲೆ ನೋವು ಇರುವವರು ದಿನಕ್ಕೊಂದು ಬಾರಿಯಂತೆ ಮೂರು ದಿನ ಮಾಡಿದರೆ ಅರೆ ತಲೆ ನೋವು ನಿವಾರಣೆಯಾಗುತ್ತದೆ.*

**- ಜ.ಮ. ಆರ್ಚಾರಿ, ಕುಂದೂರ**

ಸುಂದರ ವ್ಯಕ್ತಿತ್ವ ರೂಪಿಸಿಕೊಳ್ಳಬೇಕು ಎಂದೆವು. ವ್ಯಕ್ತಿತ್ವ ವಿಕಾಸಕ್ಕಿರುವ ಮಹತ್ವವೇ ಹೀಗೆ ನಿರ್ಧರಿಸಲು ಕಾರಣ. ಅದರ ಬಗೆಗೆ ಈಗ ಇನ್ನಷ್ಟು ಚಿಂತನೆ ಮಾಡುವಾ.

ಆಕೆ ಜೀವನದಲ್ಲಿ ಸುಖಿ; ಆತ ಯಶಸ್ವಿ ಎಂದು ಹೊಗಳುವಾಗಲೆಲ್ಲ ನಾವು ಅವರ ಸುಂದರ ವ್ಯಕ್ತಿತ್ವವನ್ನು ಪ್ರಶಂಸಿಸುತ್ತಿದ್ದೇವೆಂಬುದನ್ನು ನೆನಪಲ್ಲಿಡಿ. ಇಂಥವರು ಮೂರು ಗುಣಗಳನ್ನು ಪ್ರಮುಖವಾಗಿ ಹೊಂದಿರುತ್ತಾರೆ. ಅವರು ಎಲ್ಲರಿಗೂ ಬೇಕು; ಎಲ್ಲರೊಡನೆಯೂ ಹೊಂದಾಣಿಕೆ ಅವರಿಗೆ ಸಾಧ್ಯ; ಎಲ್ಲರ ಮೇಲೂ ಅವರ ಪ್ರಭಾವವಿದೆ. ನೌಕರಿ ಮಾಡುವಾಗ, ವೃತ್ತಿ ಕೈಗೊಂಡಾಗ, ಸರಕು ಮಾರುವಾಗ, ಬೋಧಿಸುವಾಗ, ಸ್ನೇಹಿತರನ್ನು ಗಳಿಸಲು ಪ್ರಯತ್ನಿಸುತ್ತಿರುವಾಗ ನಾವು ಯಶಸ್ವಿಯಾಗಲು ಈ ಮೂರೂ ಸೂತ್ರಗಳು ಅವಶ್ಯ. ಸಂಸಾರದಲ್ಲಂತೂ ಗಂಡ ಹೆಂಡತಿಯರಿಬ್ಬರೂ ಇವುಗಳನ್ನು ಪ್ರಯತ್ನಪೂರ್ವಕ ಅಳವಡಿಸಿಕೊಳ್ಳಬೇಕು.

ವ್ಯಕ್ತಿತ್ವ ವಿಕಾಸದ ರಚನಾತ್ಮಕ ಪ್ರಯತ್ನವೆಂದರೆ ನಮ್ಮನ್ನು ಜೀವನ ಪರ್ಯಂತವೂ ಆತ್ಮಾವಲೋಕನಕ್ಕೊಳಪಡಿಸಿಕೊಳ್ಳುವದು. ಇದು ನಿನ್ನೆ ಪ್ರಾರಂಭಿಸಿ, ಇಂದು ಮುಕ್ತಾಯಗೊಳಿಸಿ ನಾಳೆಯಿಂದ ಫಲ ಪಡೆಯುವ ಕೆಲಸವಲ್ಲ. ನಮ್ಮತ್ತ ನಾವು ಆಂತರಿಕವಾಗಿ ತಿರುಗಿಕೊಂಡಾಗ ಈ ಪ್ರಶ್ನೆಗಳೊಡನೆ ಮುಖಾಮುಖಿಯಾಗುತ್ತೇವೆ. :

೧. ಜನ ನನ್ನನ್ನು ನನ್ನಷ್ಟಕ್ಕೇ ಬಿಡಲು ಏಕೆ ಇಷ್ಟಪಡುತ್ತಾರೆ?
೨. ನನ್ನನ್ನೇಕೆ ತಪ್ಪಿಸಿ ಓಡಾಡುತ್ತಾರೆ?
೩. ನಾನು ಇತರರಿಗೇಕೆ ಇಷ್ಟವಾಗುವುದಿಲ್ಲ?
೪. ಇತರರು ಕೇವಲ ನನ್ನನ್ನು ಸಹಿಸುತ್ತಾರೆ; ನನ್ನೊಡನೆ ಏನನ್ನೂ ಹಂಚಿಕೊಳ್ಳಲಿಚ್ಚಿಸುವುದಿಲ್ಲ, ಏಕೆ?
೫. ನನ್ನನ್ನೇಕೆ ಬೇರೆಯವರು ಅರಸಿಬರುವುದಿಲ್ಲ?
೬. ನಾನು ಊಹಿಸಿದ್ದಕ್ಕಿಂತಲೂ ಕಡಿಮೆ ಪ್ರಭಾವಶಾಲಿಯಾಗಿ ಏಕೆ ಬೆಳೆಯುತ್ತಿದ್ದೇನೆ?

ಈ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು, ನಂತರ ನಮ್ಮ ಲೋಪಗಳನ್ನು ತಿದ್ದಿಕೊಳ್ಳಲು ನಮಗೆ ಸಾಧ್ಯವಾದರೆ, ನಮ್ಮ ಸಾಮಾಜಿಕ ಹಿನ್ನಡೆ, ಅಪಯಶಸ್ಸು ಅಥವಾ ಆಮೆಗತಿಯ ಪ್ರಗತಿಗಳನ್ನು ನಿವಾರಿಸಿಕೊಳ್ಳಬಹುದು.

**ಕಳೆದ ಸಲ ವ್ಯಕ್ತಿತ್ವ ಬಲಪಡಿಸುವದು ಸಾಧ್ಯವೆಂಬುದನ್ನಲ್ಲದೇ ಅದನ್ನು ಕಾರ್ಯಗತಗೊಳಿಸುವ ಬಗೆಗೆ ತಿಳಿದುಕೊಂಡೆವು. ನನ್ನೊಡನೆ ಈಗ ಎರಡನೆಯ ಹೆಜ್ಜೆಯನ್ನಿರಿಸಲು ಸಿದ್ಧರಾಗಿ.**




## ಹೆಜ್ಜೆ - ೨

**ನಾವು ಮೊಟ್ಟಮೊದಲು ತಿಳಿದುಕೊಳ್ಳಬೇಕಾದುದೆಂದರೆ ನಮ್ಮ ಜೀವನ ಪದ್ಧತಿಯಲ್ಲಿ ಬಹುಮುಖ ಬದಲಾವಣೆಯಾಗಿದೆ ಎಂಬುದು. ತನ್ನೆಲ್ಲ ಅಗತ್ಯಗಳನ್ನೂ ತಾನೇ ಪೂರೈಸಿಕೊಳ್ಳಬೇಕೆಂಬ 'ರಾಬಿನ್‌ಸನ್ ಕ್ರೂಸೋ ಜೀವನ ವಿಧಾನ' ಈಗಿಲ್ಲ.**

ನಾವು ಮೊಟ್ಟಮೊದಲು ತಿಳಿದುಕೊಳ್ಳಬೇಕಾದುದೆಂದರೆ ನಮ್ಮ ಜೀವನ ಪದ್ಧತಿಯಲ್ಲಿ ಬಹುಮುಖ ಬದಲಾವಣೆಯಾಗಿದೆ ಎಂಬುದು. ತನ್ನೆಲ್ಲ ಅಗತ್ಯಗಳನ್ನೂ ತಾನೇ ಪೂರೈಸಿಕೊಳ್ಳಬೇಕೆಂಬ 'ರಾಬಿನ್‌ಸನ್ ಕ್ರೂಸೋ ಜೀವನ ವಿಧಾನ' ಈಗಿಲ್ಲ. 'ಶಾಲೆ-ಕೆಲಸ-ಮನೆ-ನಿದ್ರೆ-ಹಸಿವೆ'ಗಳ ಚಕ್ರವೂ ಈಗಿನ ಜೀವನವಲ್ಲ. ಬಹಳಷ್ಟು ಹಿರಿಯರು ಈಗ ತಮ್ಮ ಮಕ್ಕಳ ಜೀವನ ಸಂಗಾತಿಗಳ ಆಯ್ಕೆಯಲ್ಲಿ ಪ್ರಮುಖ ಪಾತ್ರ ವಹಿಸುವುದಿಲ್ಲ. ವಿಚ್ಛೇದನ ಈಗ 'ತಿರಸ್ಕೃತ ಮೌಲ್ಯ' ಅಲ್ಲವಾದುದರಿಂದ ಒಲ್ಲದ ಗಂಡ/ಹೆಂಡತಿಯೊಡನೆ ಅನಿವಾರ್ಯವಾಗಿ ಜೀವನ ಸವೆಸಬೇಕಿಲ್ಲ.

ವ್ಯಕ್ತಿತ್ವವು ಒಳಗೊಂಡ ತತ್ವಗಳ ಅಧ್ಯಯನದ ಮೂಲಕ ನಮಗೆ ಉಚಿತವಾದ ರೀತಿಯಲ್ಲಿ ವ್ಯಕ್ತಿತ್ವ ಬದಲಾವಣೆ ಸಾಧ್ಯ ಎಂದು ಇಂದು ತಿಳಿದಿದೆ. ಮಗುವಿಗೆ 'ಅತಿ ಚುರುಕುತನ ಪ್ರದರ್ಶಿಸಬೇಡ' ಎಂದು ಹಾಗೂ ಯುವತಿಗೆ 'ಎಳೆನಿಂಬೇಕಾಯಿಯಂತೆ ವರ್ತಿಸಬೇಡ' ಎಂದು ಎಚ್ಚರಿಸಿದರೆ ಅವರಿಗೆ ''ನನ್ನ ಬಗೆಗೆ ಇತರರ ಪ್ರತಿಕ್ರಿಯೆ ಸರಿಯಿಲ್ಲ''ವೆಂಬುದು ಅರ್ಥವಾಗುತ್ತದೆ.

'ಶಿಕ್ಷಣವು ವ್ಯಕ್ತಿತ್ವ ವಿಕಾಸದ ಮಹತ್ತರ ಸಾಧನ' ಎಂಬುದು ಶಾಲೆಯಲ್ಲಿಯೇ ತಿಳಿಯತೊಡಗುತ್ತದೆ. ಜನಪ್ರಿಯ ಸಹಪಾಠಿಯ ವ್ಯಕ್ತಿತ್ವ ನಮ್ಮ ಮೇಲೆ ಪ್ರಭಾವ ಬೀರುತ್ತದೆ. ಮಗು ಬೆಳೆದಂತೆಲ್ಲ, ಒಳ್ಳೊಳ್ಳೆಯ ಬಟ್ಟೆ ಧರಿಸಿದಾಗ, ಇತರರೊಡನೆ ಸೌಜನ್ಯಯುತವಾಗಿ ವರ್ತಿಸಿದಾಗ, ಜ್ಞಾನದ ಹರವನ್ನು ಹೆಚ್ಚಿಸಿಕೊಳ್ಳುತ್ತ ನಡೆದಂತೆ ಇತರರೊಡನೆಯ ತನ್ನ ಸಂಬಂಧ ಉತ್ತಮಗೊಳ್ಳುತ್ತ ಹೊರಟಿರುವುದರರಿವಾಗಿ ವ್ಯಕ್ತಿತ್ವ ವಿಕಾಸವಾಗುತ್ತಿರುವುದು ತಿಳಿಯತೊಡಗುತ್ತದೆ.

ತಾರುಣ್ಯದಲ್ಲಿ ಕಾಲಿರಿಸಿದ ಯುವಕ ಯುವತಿಯರಿಗೆ ಕೇವಲ ತನಗಾಗಿ ಎಲ್ಲ ಚಟುವಟಿಕೆಗಳಲ್ಲೂ ತೊಡಗಿಕೊಳ್ಳುತ್ತಿದ್ದ ಹಿಂದಿನ ಜೀವನ ಪದ್ಧತಿ ಮಾಯವಾಗಿ ಸಾಮಾಜಿಕವಾಗಿ ತಮ್ಮನ್ನು ತೊಡಗಿಸಿಕೊಳ್ಳುವದರ ಅನಿವಾರ್ಯತೆ ಅರ್ಥವಾಗುತ್ತದೆ. 'ವ್ಯಕ್ತಿತ್ವ ವಿಕಾಸವೇ ಸುಖ ಜೀವನಕ್ಕೆ ಸಿದ್ಧೌಷಧ'ವೆಂಬ ಬೆಳಕು ಬೀಳುತ್ತದೆ. ನಿಯತಕಾಲಿಕೆ-ಪುಸ್ತಕಗಳ ನಿಯಮಿತ ಪಠಣ, ಯಶಸ್ವೀ ವ್ಯಕ್ತಿಗಳ ಸದ್ಗುಣಾನುಕರಣ,

ಹಿತೈಷಿಗಳ ಉಪದೇಶ, ಸಲಹೆ-ಸೂಚನೆಗಳಿಗೆ ಸ್ಪಂದಿಸುವದು ಜೀವನ ಸಾಫಲ್ಯದ ಮಾರ್ಗ ಗಳೆಂಬುದು ಗೋಚರಿಸುತ್ತದೆ.

ಜೀವನ ನಿರ್ವಹಣೆಗಾಗಿ ಸಂಘಟಿತ ಕಾರ್ಯಗಳಲ್ಲಿ-ವಾಣಿಜ್ಯ ಉದ್ದಿಮೆ ಸಂಸ್ಥೆ ಗಳಲ್ಲಿ-ತಮ್ಮನ್ನು ತೊಡಗಿಸಿಕೊಂಡಾಗ ವರಿಷ್ಠರ ಮೇಲೆ ತಮ್ಮ ವಿಶಿಷ್ಟ 'ಛಾಪ್' ಮೂಡಿಸುವದು ಅವಶ್ಯಕವಾಗಿ ಕಾಣುತ್ತದೆ. ಯಶಸ್ಸಿನ ಏಣಿ ಏರಲು ಕೇವಲ ಕೌಶಲ್ಯ, ಬುದ್ಧಿ ಮತ್ತೆ ಅಥವಾ ಕಾರ್ಯಕ್ಷಮತೆಗಳ ಎತ್ತರ ಸಾಲದೆ ಒಟ್ಟು ವ್ಯಕ್ತಿತ್ವದ ಪ್ರಗತಿ ಅನಿವಾರ್ಯವಾಗಿ ತೋರುತ್ತದೆ.

ತಮ್ಮ ಜೀವನ ಸಂಗಾತಿಗಳನ್ನು ತಾವೇ ಆಯ್ದುಕೊಳ್ಳುವ ಸ್ವಾತಂತ್ರ್ಯದೊಡನೆ ಹೀಗೆ ಆಯ್ದುಕೊಂಡ ಸಂಗಾತಿಯೊಡನೆ ಜೀವನ ಪೂರ್ತಿ ಸಹಬಾಳ್ವೆ ನಡೆಯಿಸುವ ಜವಾಬ್ದಾರಿಯೂ ಸಹ ಇದೆ ಎಂಬುದು ಮನಗಾಣುತ್ತದೆ. ವಿವಾಹ ಸಾಮಾಜಿಕ ಬಂಧನವಾಗಿರುವ ಇಂದಿನ ಕಾಲದಲ್ಲಿ ವಿವಾಹ ಮುರಿದು ಬಿದ್ದರೆ ಅದಕ್ಕೆ ಸಾಮಾಜಿಕ ಗ್ರಾಹ್ಯತೆಯನ್ನು ದೊರಕಿಸುವದಕ್ಕಾಗಿ ತಾನು ತಪ್ಪಿತಸ್ಥನಲ್ಲ ಎಂದು ಸಿದ್ಧಪಡಿಸಲು ವ್ಯಕ್ತಿತ್ವ ವನ್ನು ಶುಚಿಯಾಗಿಟ್ಟುಕೊಳ್ಳುವದರ ಅಗತ್ಯದ ಅರಿವು ಮೂಡುತ್ತದೆ.

ಈ ಎಲ್ಲ ಅಂಶಗಳೂ ವ್ಯಕ್ತಿತ್ವ ವಿಕಾಸದ ಮಹತ್ವವನ್ನು ಸಾರುತ್ತವೆ. ವ್ಯಕ್ತಿತ್ವ ವಿಕಸನದ ಪ್ರಕ್ರಿಯೆಯೆಂದರೆ ವ್ಯಕ್ತಿತ್ವದಲ್ಲಿನ ಘಟಕಗಳನ್ನು ಉತ್ತಮಗೊಳಿಸುತ್ತ ನಡೆಯುವದೇ ಆಗಿದೆ. ಆದುದರಿಂದ ಈಗ ಪ್ರಸ್ತುತವಾಗುವುದು ವ್ಯಕ್ತಿತ್ವ ಒಳಗೊಂಡಿರುವ ಮಹತ್ವದ ಘಟಕಗಳ ಅವಲೋಕನ. ಇದನ್ನೀಗ ಮಾಡುವಾ.

ವ್ಯಕ್ತಿತ್ವವನ್ನು ನಿರ್ಮಿಸುವ ಮಹತ್ವದ ಘಟಕಗಳು ನಾಲ್ಕು. ಅವು: ದೈಹಿಕ; ಮಾನಸಿಕ; ಭಾವನಾತ್ಮಕ ಹಾಗೂ ಸಾಮಾಜಿಕ. ಇತರ ಅನೇಕ ಪ್ರಭಾವಗಳೂ ಇರಬಹುದು.

ಯಾವನೊಬ್ಬನ ವ್ಯಕ್ತಿತ್ವ ಪೂರ್ಣರೂಪ ದಲ್ಲಿ ನಮಗೆ ತಿಳಿಯುವುದಕ್ಕಿಂತ ಮೊದಲು ನಾವು ಅವನನ್ನು ನೋಡುತ್ತೇವೆ ಎಂಬುದನ್ನು ನೆನಪಿಡಬೇಕು. ಹಾಗಾಗಿ ಆತನ ದೇಹ ರಚನೆ ನಮಗೆ ಮಹತ್ವದ್ದಾಗುತ್ತದೆ.

ತಜ್ಞರ ಅಭಿಪ್ರಾಯದಲ್ಲಿ ಎತ್ತರದವರು, ಸ್ಥೂಲಕಾಯರು ಪ್ರಭಾವಿಗಳು. ಜಾಗತಿಕ ನೇತಾರರಲ್ಲಿ ಇವರು ಬಹುಸಂಖ್ಯರು. ಸರಾಸರಿ ಅಥವಾ ಅದಕ್ಕಿಂತ ಸ್ವಲ್ಪ ಹೆಚ್ಚು ಅಥವಾ ಕಡಿಮೆ



**ದೇಹದ ಲಕ್ಷಣಗಳು ಹೆಚ್ಚು ಮಹತ್ವದವೋ, ಮನಸ್ಸು ಹೆಚ್ಚು ಮುಖ್ಯವೋ ಎಂಬ ಚರ್ಚೆ ಸಲ್ಲ. ಒಂದು ಕಿಲೋ ಗ್ರಾಂ ಅರಳೆಯು ಹೆಚ್ಚೋ ಅಥವಾ ಒಂದು ಕಿಲೋ ಗ್ರಾಂ ಕಬ್ಬಿಣ ಹೆಚ್ಚೋ ಎಂಬಂತೆ ಈ ಪ್ರಶ್ನೆ.**

ಎತ್ತರ ಅದಕ್ಕೆ ಪ್ರಮಾಣಬದ್ಧವಾದ ತೂಕ, ಆರೋಗ್ಯವಂತ ಚರ್ಮ, ಸಶಕ್ತತೆಯ ಕಳೆ, ಆಕರ್ಷಕ ಆದರೆ ಸ್ವಾಭಾವಿಕ ನಡೆ, ಶುಚಿಯಾದ ಮತ್ತು ಸಾಂದರ್ಭಿಕ ಬಟ್ಟೆ-ಬರೆಗಳು ಇವುಗಳೆಲ್ಲ ಅಪೇಕ್ಷಿತ. ಸರಾಸರಿಗಿಂತ ಬಹಳ ಆಚೀಚಿನ ದೈಹಿಕ ಲಕ್ಷಣಗಳು ಪ್ರತಿಕೂಲವೆಂಬ ನಂಬಿಕೆ. ತುಳಸೀಗಿಡದಷ್ಟು ಕುಳ್ಳರಿರಬಾರ ದೆಂಬುದರ ಅರ್ಥ ತೆಂಗಿನ ಮರದಷ್ಟು ಎತ್ತರವಿರಬೇಕೆಂಬುದಲ್ಲ! ಶಾಶ್ವತ ಅನಾರೋಗ್ಯಕರ ಸ್ಥಿತಿ ಅಥವಾ ಅಂಗವಿಕಲತೆ ಸಹಾನುಭೂತಿ, ಪ್ರೀತಿ, ಉತ್ತೇಜನಗಳನ್ನು ಪಡೆದರೂ ಅಂಥವರ ವ್ಯಕ್ತಿತ್ವಕ್ಕೆ ಅಡಚಣೆ ಉಂಟುಮಾಡುತ್ತದೆ. ಬೇರೆಯವರಿಂದ ಲಾಭ ಪಡೆಯುವದಕ್ಕಾಗಿ ಇವುಗಳನ್ನು ಮುಂದು ಮಾಡಿದಷ್ಟು ಅಸಡ್ಡೆ, ತಿರಸ್ಕಾರಕ್ಕೆ ಗುರಿ ಯಾಗುತ್ತೇವೆ. ಅನಾರೋಗ್ಯದ ಕಾರಣಗಳು, ಅಂಗವಿಕಲತೆಯ ಪೂರ್ವೇತಿಹಾಸಗಳೂ ಸಹ್ಯ, ಅಸಹ್ಯ ಭಾವನೆಗಳಿಗೆ ಇಂಬು ನೀಡಬಹುದು. ಕುರುಡು, ಕುಂಟುತನ ಕುಡಿತದ ಪರಿಣಾಮಗ ಳಾದರೆ ಅವರು ಸಹಾನುಭೂತಿಗೆ ಅರ್ಹ ರಾಗರು.

ದೈಹಿಕ ಕೊರತೆಗಳಿವೆ ಎಂಬುದೊಂದೇ ನಿರಾಶೆಗೆ ಕಾರಣವಾಗಬೇಕಿಲ್ಲ. ಗಾಂಧೀಜಿ, ನೆಪೋಲಿಯನ್‌ರಂಥ ಕಡಿಮೆ ಎತ್ತರದವರು, ಲಿಂಕನ್‌ರಂಥ ಅತಿ ಎತ್ತರದವರೂ ಜಗತ್‌ಶ್ರೇಷ್ಠರಾಗಿಲ್ಲವೇ! ಬಿಸಿಲು ಮೇಣಬತ್ತಿಯ ಬೆಳಕನ್ನು ಕಳಾಹೀನಗೊಳಿಸುವ ಹಾಗೆ! ಆದುದರಿಂದ ಎತ್ತರ ಮಾಪಕ, ತೂಕದ ಯಂತ್ರಗಳ ಬೆನ್ನು ಬೀಳಬೇಡಿ. ವಿನಯ, ಸೌಜನ್ಯ, ದಯೆ, ಸಹಾನುಭೂತಿ, ಪರೋಪ ಕಾರ, ಸಹೃದಯತೆ, ಸಮಯಪ್ರಜ್ಞೆ ಇತ್ಯಾದಿ ಸದ್ಗುಣಗಳನ್ನು ಬೆಳೆಯಿಸಿಕೊಳ್ಳಿ,

ವ್ಯಕ್ತಿಯಿಂದ ವ್ಯಕ್ತಿಯನ್ನು ಭಿನ್ನವಾಗಿಸಲು ಬುದ್ಧಿಮತ್ತೆ, ಶಿಕ್ಷಣಮಟ್ಟ, ಭಾಷೆಯ ಕೌಶಲ್ಯ, ಮುಕ್ತ ಆದರೆ ಜಾಗರೂಕ ಮನೋಧರ್ಮ, ಧರ್ಮಬುದ್ಧಿ ಇತ್ಯಾದಿಗಳು ಕಾರಣ. ಇವುಗಳ ಅಭಾವ ಅಥವಾ ಅನುಪಸ್ಥಿತಿ ಬೇರೆಯವರು ನಮ್ಮನ್ನು ಅಸಹಜವಾಗಿ ಕಾಣುವಂತೆ ಮಾಡಬಹುದು.

ಕೆಲವು ಬುದ್ಧಿವಂತರಿಂದ ನಾವು ದೂರ ವಿರಲು ಬಯಸುತ್ತೇವಲ್ಲವೇ? ಏಕೆಂದರೆ ಇತರ ರನ್ನು ಕುಬ್ಜರಾಗಿಸುವ ಕಲೆ ಅವರಿಗೆ ಸಿದ್ಧಿಸಿದೆ! ತಪ್ಪುಗ್ರಹಿಕೆ ಎಂಬ ಸಡಿಲುಮಣ್ಣಿನ ಮೇಲೆ ನಾವು ಹೆಜ್ಜೆ ಇರಿಸಿದ್ದೇವೆ, ಜೋಕೆ! ಆತ/ಆಕೆ ಬುದ್ಧಿವಂತ/ಳು ಎಂದು ತಿಳಿದುದೇ ಆ ತಪ್ಪುಗ್ರಹಿಕೆ. ಇಂಥವರಿಂದ ಸುರಕ್ಷಿತ ಅಂತರ ಕಾಯ್ದುಕೊಳ್ಳಿ, ಏಕೆಂದರೆ ನಿಜವಾದ ಬುದ್ಧಿ ವಂತನ ಲಕ್ಷಣ : ತನಗಿಂತ ಕಡಿಮೆ ಬುದ್ಧಿವಂತ ರೊಡನೆ ಹೊಂದಿಕೊಳ್ಳುವುದು; ಅವರ ಮೇಲೆ ಪ್ರಭಾವ ಬೀರಿ ತನ್ಮೂಲಕ ಅವರ ಸಹಕಾರ, ಸದ್ಭಾವನೆ ಗಳಿಸುವುದು; ಬೇರೆಯವರು ತನ್ನೊ ಡನೆ ಮುಕ್ತವಾಗಿ ಬೆಳೆಯುವಂತೆ ಪ್ರೇರೇಪಿಸು ವುದು.

ದೇಹದ ಲಕ್ಷಣಗಳು ಹೆಚ್ಚು ಮಹತ್ವದವೋ, ಮನಸ್ಸು ಹೆಚ್ಚು ಮುಖ್ಯವೋ

ಎಂಬ ಚರ್ಚೆ ಸಲ್ಲ. ಒಂದು ಕಿಲೋ ಗ್ರಾಂ ಅರಳೆಯು ಹೆಚ್ಚೋ ಅಥವಾ ಒಂದು ಕಿಲೋ ಗ್ರಾಂ ಕಬ್ಬಿಣ ಹೆಚ್ಚೋ ಎಂಬಂತೆ ಈ ಪ್ರಶ್ನೆ. ದೇಹ ಮನಸ್ಸು ಒಂದಕ್ಕೊಂದು ಪೂರಕ. ಆರೋಗ್ಯವಂತ ದೇಹದಲ್ಲಿ ಮಾತ್ರ ಆರೋಗ್ಯವಂತ ಮನಸ್ಸಿಗೆ ಸ್ಥಾನ. ಒಟ್ಟಿನಲ್ಲಿ ಮುಕ್ತ ಮನಸ್ಸು ಮತ್ತು ನ್ಯಾಯಬುದ್ಧಿ ಇವು ಅಮೂಲ್ಯ ಸೊತ್ತುಗಳು.

ಯಾವುದೇ ವಿಷಯದ ಬಗೆಗೆ ನಾವು ಚಿಂತನೆ ಮಾಡುವಾಗ ವಸ್ತುನಿಷ್ಠತೆಯನ್ನು ಬೆಳೆಸಿಕೊಳ್ಳುವುದು ಅತಿ ಮಹತ್ವದ್ದು. ಹೆರವರ ದೃಷ್ಟಿಯಿಂದ ಪ್ರತಿ ವಿಷಯದ ಬಗೆಗೆ ನಾವು ಚಿಂತಿಸುವದನ್ನು ಕಲಿಯಬೇಕು. ಅಂದರೆ ನಮ್ಮ ಒಳಿತು-ಕೆಡಕು, ಸ್ವಾರ್ಥಗಳನ್ನು ಆ ವಿಚಾರದಿಂದ ದೂರವಿರಿಸುವುದು. 'ಸಮಸ್ಯೆಗಳನ್ನು ಬೇರೊಬ್ಬರ ದೃಷ್ಟಿಕೋನದಿಂದ ಅರ್ಥ ಮಾಡಿಕೊಳ್ಳಲು ಬಯಸಿದರೆ ಜಗತ್ತಿನ ಅರ್ಧ ಆ ಸಮಸ್ಯೆಗಳು ತಮ್ಮಷ್ಟಕ್ಕೇ ಪರಿಹಾರವಾಗುತ್ತವೆ ಎಂಬುದು ಅನುಭವಿಕರ ಮಾತು.

ಬೇರೊಬ್ಬರ ಬಗೆಗೆ ತಲೆಬುಡವಿಲ್ಲದ ಅಭಿಪ್ರಾಯಗಳನ್ನು ನಿರ್ಮಿಸಿಕೊಳ್ಳುವುದು, ವಿಷಯವೊಂದರ ಕುರಿತು ನಿರಾಧಾರವಾದ ನಂಬುಗೆಗಳನ್ನು ಹೊಂದುವುದು, ವ್ಯಕ್ತಿನಿಷ್ಠೆಯ ಬೆಳಕಿನಲ್ಲಿ ಎಲ್ಲವನ್ನೂ, ಎಲ್ಲರನ್ನೂ ಕಾಣುವುದು ಪೂರ್ವಾಗ್ರಹ ದೋಷ. ಎತ್ತರಕ್ಕೇರಬಯಸುವ ವ್ಯಕ್ತಿ ಇತ್ತ ಗಮನವೀಯುವುದು ಮುಖ್ಯ. ಪೂರ್ವಾಗ್ರಹಗಳಿಲ್ಲದವನನ್ನು ಸೂಕ್ಷ್ಮದರ್ಶಕದಿಂದಲೇ ಶೋಧಿಸಬೇಕು. ಹಾಗಿದ್ದರೂ ಸಹ ನಮ್ಮಲ್ಲನೇಕರಿಗೆ ಈ ಸಾರ್ವತ್ರಿಕ ಲೋಪದ ಕುರಿತು ತಿಳಿವಳಿಕೆಯಿರದು. ಒಮ್ಮೊಮ್ಮೆ ತಿಳಿದೂ ಮರೆಯುತ್ತೇವೆ. ಪರಿಣಾಮ: ನಮ್ಮ ವೈಚಾರಿಕತೆ ವಸ್ತುನಿಷ್ಠತೆ ರಹಿತವಾಗಿ ದೋಷಪೂರ್ಣವೂ, ಅಗ್ರಾಹ್ಯವೂ ಆಗುತ್ತದೆ.

ದೇಹ-ಮನಸ್ಸುಗಳ ಇನ್ನೊಂದು ಆಪ್ತ ಸಂಗಾತಿ ಭಾವನೆಗಳು. ಬುದ್ಧಿಮತ್ತೆ ನಮ್ಮ ನಡಾವಳಿಗೆ ಮಾರ್ಗದರ್ಶಕವಾದರೆ ಭಾವನೆಗಳು ಅದಕ್ಕೆ ಶಕ್ತಿ ತುಂಬುತ್ತವೆ. ವ್ಯಕ್ತಿಯಲ್ಲಿ ಭಾವನೆಗಳು ಆರೋಗ್ಯಕರ ಪ್ರಮಾಣದಲ್ಲಿದ್ದಾಗ ಆತನ ಬಗೆಗೆ ಜನರಲ್ಲಿ ವಿಶ್ವಾಸ ಮೂಡುತ್ತದೆ. ಆತ ತನ್ನ ಪರಿಸರವನ್ನೆಲ್ಲ ಪ್ರಭಾವಿತಗೊಳಿಸಬಲ್ಲ. ಸ್ವಾಮಿ ವಿವೇಕಾನಂದ, ಪಂಡಿತ ಜವಾಹರಲಾಲ್‌ನೆಹರೂ ಇದಕ್ಕೆ ನಿದರ್ಶನ. ಆರೋಗ್ಯಕರ ಪ್ರಮಾಣವೆಂದರೇನು? ನಿಮಗೆ ಅಥವಾ ನಿಮ್ಮವರೊಬ್ಬರಿಗೆ ಧುತ್ತೆಂದು ಸಮಸ್ಯೆಯೊಂದು ಎದುರಾಯಿತೆಂದಿಟ್ಟುಕೊಳ್ಳಿ. ನೀವು ಒಂದು ವಿಶಿಷ್ಟ ಕಾರ್ಯಪದ್ಧತಿಗೆ ಒಗ್ಗಿಕೊಂಡಿರುತ್ತೀರಿ. ಅದರ ಮೇರೆಗೇ ಈ ಸಮಸ್ಯೆಯನ್ನು ಎದುರಿಸುವುದು ಅಥವಾ ಎದುರಿಸಲು ಸಲಹೆ ನೀಡುವಿರಿ ತಾನೇ? ನೀವು ಭಾವನೆಗಳ ಮಹಾಪೂರದಲ್ಲಿ ಕೊಚ್ಚಿಹೋಗಿ ದುಡುಕಿನ ಕಾರ್ಯ ನಿರ್ಧಾರದಿಂದ ನಂತರ ಪರಿತಪಿಸುವಿರಾ? ಅವಶ್ಯಕತೆಗಿಂತ ಹೆಚ್ಚು ಉದ್ರೇಕಿತರಾಗಿ ಶತಪಥ ಹಾಕುವಿರಾ? ತಣ್ಣಗೆ ಕೊರೆಯುತ್ತ ಕುಳಿತುಕೊಳ್ಳಲು ಸಲಹೆ ನೀಡುವಿರಾ? ಭಾವಾವೇಶದಿಂದ ನಿಮ್ಮ ದೈಹಿಕ-ಮಾನಸಿಕ ನಡತೆಯನ್ನು ಅಸ್ತವ್ಯಸ್ತಗೊಳಿಸಿಕೊಳ್ಳುವಿರಾ? ಹಾಗಿದ್ದರೆ ಇಂಥವರಿಗೆ ತಮ್ಮ ಪರವಾಗಿ ಕೆಲಸ ಮಾಡಲು ಯಾರೂ ಒಪ್ಪಿಗೆ ಕೊಡುವದಿಲ್ಲ. ಒಂದೆಡೆ ಜನಬಲ ಕ್ಷೀಣಿಸುತ್ತದೆ; ಇನ್ನೊಂದೆಡೆ ನಿರಂತರ ಒತ್ತಡದಿಂದ ದೇಹ ಜರ್ಜರಿತವಾಗುತ್ತದೆ. ಜನಪ್ರಿಯತೆ ನಿಮ್ಮನ್ನು ತ್ಯಜಿಸಿ ಓಡುತ್ತದೆ. ಇಂಥ 'ಅತಿ' ಪ್ರವೃತ್ತಿ ವರ್ಜ್ಯವಾಗಬೇಕು. 'ಹೊಲ ಮನೆಗಳೊಡೆಯನಲ್ಲ; ತನ್ನೊಡೆಯನಾಗಬೇಕು'' ಎಂಬುದು ತಿಳಿದಿರಲಿ. ಪ್ರೀತಿ, ಧೈರ್ಯ, ಉತ್ಸಾಹ, ಸಂತೋಷ, ಆಶಾಭಾವನೆಗಳು ಅವಶ್ಯವಿದ್ದಷ್ಟು ಮಾತ್ರ ವ್ಯಕ್ತವಾಗಬೇಕು. ಇತರರೊಡಗೂಡಿ ಕೆಲಸ ಮಾಡುವ ವೃತ್ತಿಯಲ್ಲಿ ನೀವಿದ್ದರಂತೂ ಭಾವನೆಗಳ ಮೇಲೆ ನಿಯಂತ್ರಣ ವಿಧಿಸಿ. ಇಲ್ಲದಿದ್ದರೆ ಎಲ್ಲರಿಗೂ ಬೇಡವಾದವರಾಗುತ್ತೀರಿ.

ಮಾನವನು ಸ್ವಭಾವತಃ ಸಮಾಜ ಜೀವಿಯಾದುದರಿಂದ ನಮ್ಮ ದೈಹಿಕ, ಮಾನಸಿಕ, ಭಾವನಾತ್ಮಕ ಲಕ್ಷಣಗಳೆಲ್ಲವೂ ಸಾಮಾಜಿಕವಾಗಿ ವ್ಯಕ್ತವಾಗುತ್ತಿರುತ್ತವೆಂಬುದು ಗಮನಾರ್ಹವಾದುದು. ಇತರರ ಅಪೇಕ್ಷೆಯನ್ನು ಸರಿಯಾಗಿ ಗ್ರಹಿಸಿ ಅವರಿಗೆ ಇಷ್ಟವಾಗುವಂತೆ ಪ್ರತಿಕ್ರಿಯಿಸುವದು ಯಶಸ್ಸಿನ ಸೋಪಾನಗಳಲ್ಲೊಂದು. ಬೇರೆಯವರ ಅಪೇಕ್ಷೆಯನ್ನು ಗಮನಿಸುವುದು ಗ್ರಹಿಸುವುದು ಸೂಕ್ಷ್ಮ ಕೆಲಸ. ಸಾಮಾಜಿಕ ಜೀವನಾನುಭವದಿಂದ ಮಾತ್ರ ಅದನ್ನು ಗಳಿಸಲು ಸಾಧ್ಯ. ಕೆಲವು ಸೂತ್ರಗಳನ್ನು ಹೇಳಬಹುದು. ಪರರೊಡನೆಯ ಸಂಬಂಧಗಳಲ್ಲಿ ಅತಿ ಕಟ್ಟುನಿಟ್ಟು, ನಿಷ್ಠುರ ನಿಲುವು ಸಲ್ಲ. ಅದರಂತೆಯೇ ಕೇವಲ 'ಹೌದಪ್ಪ'ಗಳಾಗಿ ತಲೆದೂಗುತ್ತ ಬದುಕುವುದೂ ಸಹ ಸಲ್ಲ. ಈ ರೀತಿ ಬದುಕಿದರೆ ನೀವು ಅಸುಖಿಗಳಾಗುವುದಲ್ಲದೆ ನಿಮ್ಮನ್ನು ಅವಲಂಬಿಸಿದವರು, ಸುತ್ತಮುತ್ತಲಿನವರೂ ಹಾಗೆಯೇ ಆಗುತ್ತಾರೆ. ಆದುದರಿಂದ 'ಸಾಂದರ್ಭಿಕವಾಗಿ ಹೊಂದಾಣಿಕೆಯಾಗುವ ಸುವರ್ಣಮಾಧ್ಯಮ'ವನ್ನು ನಾವು ರೂಢಿಸಿಕೊಳ್ಳೋಣ. ಎಲ್ಲರಿಗೂ ಪ್ರಿಯವಾದ ವ್ಯಕ್ತಿತ್ವ ಹೊಂದೋಣ. ಏಕೆಂದರೆ ಸಮುದಾಯ ನಮ್ಮಿಂದ ಬಯಸುವುದೇನು ಎಂಬುದು ನಮಗೆ ತಿಳಿದಿದೆ.

ಇದೇ ರಾಜಮಾರ್ಗದಲ್ಲಿ ಇನ್ನು ಪಯಣ ಮುಂದುವರೆಯಿಸುವಂತಿಲ್ಲ. ಆದುದರಿಂದ ಮುಂದಿನ ಹೆಜ್ಜೆಯಲ್ಲಿ ಕೆಲ ಒಳದಾರಿಗಳನ್ನು ಹಿಡಿಯೋಣ. ವ್ಯಕ್ತಿತ್ವ ನಿರ್ಮಾಣದಲ್ಲಿ ಈ ಮಹತ್ವದ ಘಟಕಗಳ ಪಾತ್ರವನ್ನು ಇನ್ನಷ್ಟು ವಿಸ್ತಾರವಾಗಿ ತಿಳಿದು ಅವುಗಳ ಪ್ರಯೋಜನ ಪಡೆಯೋಣ.

○ 'ಕೃಶಾಂಗ'



# ಚೌಚೌ

## ಪೊಲೀಸ್ ಇನ್ಸ್‌ಪೆಕ್ಟರ್ ಸ್ಫೂರ್ತಿ

ಇದು ನಾನು ಪಿ.ಯು.ಸಿ. ಓದುತ್ತಿದ್ದಾಗ ನಡೆದ ಸಂಗತಿ. ಯಾವುದೋ ಪರೀಕ್ಷೆ ಬರೆಯಲು ಮದರಾಸಿಗೆ (ಈಗಿನ ಚೆನ್ನೈ) ಹೋಗಬೇಕಾದ ಪ್ರಮೇಯ ಬಂದಿತು. ಅಲ್ಲಿ ನನ್ನ ಚಿಕ್ಕಮ್ಮನವರು ಟ್ರಿಪ್ಲಿಕೇನ್‌ನಲ್ಲಿದ್ದರು. ನನಗೆ ಕೆಲವು ತಮಿಳು ಶಬ್ದಗಳು ಮಾತ್ರ ಬರುತ್ತಿತ್ತು. ಹೇಗೊ ಸಂಭಾಳಿಸಬಹುದೆಂದು ಭಾವಿಸಿ ಒಬ್ಬನೇ ರೈಲು ಹಿಡಿದು ಹೊರಟೆ.

ಮದರಾಸಿನ ಸೆಂಟ್ರಲ್ ರೈಲ್ವೆ ನಿಲ್ದಾಣದಲ್ಲಿಳಿದು ನಾನು ಹೋಗಬೇಕಾದ ಸ್ಥಳಕ್ಕೆ ಬಸ್ಸೆಲ್ಲಿ ನಿಲ್ಲುತ್ತದೆಯೆಂದು ಯರನ್ನಾದರೂ ಕೇಳೋಣವೆಂದು ಸುತ್ತ-ಮುತ್ತ ನೋಡಿದಾಗ, ಅಲ್ಲೆ ನಿಂತಿದ್ದ ಒಬ್ಬ ಟ್ರಾಫಿಕ್ ಇನ್ಸ್‌ಪೆಕ್ಟರ್ ಕಂಡು ಬಂದರು. ಅವರ ಬಳಿ ಹೋಗಿ ಇಂಗ್ಲಿಷಿನಲ್ಲಿ "ಟ್ರಿಪ್ಲಿಕೇನ್‌ಗೆ ಹೋಗುವ ಬಸ್ಸೆಲ್ಲಿ ನಿಲ್ಲುತ್ತದೆ?" ಎಂದು ಕೇಳಿದೆ. ಅದಕ್ಕುತ್ತರವಾಗಿ ಅವರು "ನೀ ಎನ್ನ ಸೊಲ್ರೆಯೊ ತೆರಿಯಾದು" (ನೀನು ಏನು ಹೇಳುತ್ತಿದ್ದಿಯೆಂದು ನನಗರ್ಥವಾಗುತ್ತಿಲ್ಲ) ಅಂದರು. ಇಂಗ್ಲಿಷ್ ಗೊತ್ತಿಲ್ಲದಿದ್ದರೆ ರಾಷ್ಟ್ರಭಾಷೆಯಾದ ಹಿಂದಿಯಾದರೂ ಗೊತ್ತಿರಬಹುದೆಂದು ಹಿಂದಿಯಲ್ಲಿ ಅದೇ ಪ್ರಶ್ನೆಯನ್ನ ಕೇಳಿದೆ. ಅದಕ್ಕೆ ಕೋಪಗೊಂಡ ಆ ಇನ್ಸ್‌ಪೆಕ್ಟರ್ "ಎನ್ನ ಒರುದಡವ ಸೊನ್ನ ತೆರಿಯಾದ, ನೀ ಎನ್ನ ಸೊಲ್ರೆಯೊ ತೆರಿಯಾದು" (ಏನು, ಒಂದು ಸಲ ಹೇಳಿದರೆ ಅರ್ಥವಾಗುವುದಿಲ್ಲವ, ನೀನೇನು ಹೇಳುತ್ತಿರುವೆಯೋ ನನಗರ್ಥವಾಗುತ್ತಿಲ್ಲ) ಎಂದರು. ಇನ್ನೇನು ಮಾಡುವುದೆಂದು ಗೊತ್ತಿದ್ದ ಒಂದೆರಡು ತಮಿಳು ಶಬ್ದಗಳ ನಡುವೆ ಒಂದೊಂದು ಕನ್ನಡ ಶಬ್ದವನ್ನು ಸೇರಿಸಿ ಕೇಳಿದಾಗ ಆ ರೈಲು ನಿಲ್ದಾಣದ ಮುಂಭಾಗದಲ್ಲಿ ಇದ್ದ ಬಸ್‌ಸ್ಟಾಪನ್ನು ತೋರಿಸಿ "ಅಂಗೆ ನಿಕುದು ಪಾರು ಬಸ್ಸು" (ಅಲ್ಲಿ ನಿಲ್ಲುವುದು ನೋಡು ಬಸ್ಸು) ಎಂದರು.

ನಾನಂದೇ ಶಪಥ ಮಾಡಿದೆ, ಇನ್ನೊಮ್ಮೆ ತಮಿಳುನಾಡಿಗೆ ಹೋಗುವುದಾದರೆ ತಮಿಳು ಕಲಿತ ನಂತರನೇ ಎಂದು. ಇಂದು ಹತ್ತು ವರ್ಷಗಳ ನಂತರ ಕರ್ನಾಟಕದಲ್ಲೇ ಇದ್ದು ನಿರರ್ಗಳವಾಗಿ ತಮಿಳಿನಲ್ಲಿ, ತಮಿಳಿನವರೆ ಮೂಗಿನ ಮೇಲೆ ಬೆರಳಿಟ್ಟು ಕೊಳ್ಳುವಂತೆ ಮಾತನಾಡಬಲ್ಲೆ ಮತ್ತು ನಿಧಾನವಾಗಿ ಓದಲೂ ಬಲ್ಲೆ. ಇದೆಲ್ಲ ಆ ಪೊಲೀಸ್ ಇನ್ಸ್‌ಪೆಕ್ಟರ್‌ನ ತಮಿಳು ಭಾಷಾಭಿಮಾನದ ಸ್ಫೂರ್ತಿಯಿಂದ ಸಾಧ್ಯವಾಯಿತೆಂದರೆ ತಪ್ಪಾಗಲಾರದು!

**- ಎಲ್.ಪ್ರವೀಣ್‌ಕುಮಾರ್,**
ಭದ್ರಾವತಿ

## ಎಂ. ಪಿ. ಪ್ರಕಾಶ್ ತವರು ತಾಲೂಕು

ನನ್ನೂರು ಉದ್ದೇಶಿತ ದಾವಣಗೆರೆ ಜಿಲ್ಲೆಗೆ ಸೇರಲಿರುವ ಹರಪನಹಳ್ಳಿ ತಾಲೂಕಿನ ಹಾರಕನಾಳು ಗ್ರಾಮ. ಹರಪನಹಳ್ಳಿಯಿಂದ ೧೭ ಕಿ.ಮೀ., ಹಿರೇಹಡಗಲಿಯಿಂದ ೮ ಕಿ.ಮೀ. ಹೊಳಲಿನಿಂದ ೧೭ ಕಿ.ಮೀ. ದೂರವಿದೆ.

ನನ್ನೂರು ಸುಮಾರು ೫೦೦ ಮನೆಗಳ ಗ್ರಾಮ. ಇದು ಗ್ರಾಮ ಪಂಚಾಯತಿಯ ಕೇಂದ್ರ ಸ್ಥಾನ. ಇಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಾಖೆ, ಸಾರ್ವಜನಿಕ ದೊಡ್ಡ ಆಸ್ಪತ್ರೆ ಇದೆ. ಅಂಚೆ ಕಛೇರಿ, ವ್ಯ.ಸೇ.ಸ.ಸಂಘ, ಪ್ರೌಢಶಾಲೆ, ಸಾರ್ವಜನಿಕ ದೂರವಾಣಿ, ಪಶು ಚಿಕಿತ್ಸಾಲಯ ಹೀಗೆ ಅನೇಕ ಸೌಲಭ್ಯಗಳನ್ನು ನನ್ನೂರು ಹೊಂದಿದೆ.

ಈ ಊರಿಗೆ ಹರಪನಹಳ್ಳಿಯಿಂದ ಹೊಳಲಿನಿಂದ ಬಸ್ ಸೌಕರ್ಯವಿದೆ. ಅಂದರೆ ತಿಳಿದಾಗ ಬರಬಹುದು ಇಲ್ಲದಿದ್ದರೆ ಇಲ್ಲ. ೩-೪ ತಾಸುಗಳಾದರೂ ಬಸ್‌ಸ್ಟ್ಯಾಂಡ್‌ನಲ್ಲಿ ಹೆಣ ಕಾದ ಹಾಗೆ ಕಾಯಲೇಬೇಕು. ಜಿಲ್ಲಾ ಮಂತ್ರಿ ಎಂ.ಪಿ.ಪ್ರಕಾಶರ ತವರು ತಾಲ್ಲೂಕಿನ ಹಿರೇಹಡಗಲಿಯಿಂದ ಬಸ್ ಸೌಕಯವಿಲ್ಲ. ರಸ್ತೆಯ ಗತಿ ಕೇಳಲೇಬೇಡಿ. ಕಡತದಲ್ಲಿ ಎಷ್ಟೋ ಸಾರಿ ರಸ್ತೆಗಳಾಗಿಬಿಟ್ಟಿವೆ!

ನನ್ನೂರಲ್ಲಿ ಕೆಲ ದೊಡ್ಡ ಮನುಷ್ಯರಿದ್ದಾರೆ. ಅವರು ಏನು ಮಾಡಲೂ ಹೇಸುವುದಿಲ್ಲ. ಯಾವುದೋ ಕೆಲಸ ಮಾಡಿಸುತ್ತೇವೆಂದು ದೇವರ ಹೊಲಗಳನ್ನೇ ಮಾರಿದ ಭೂಪರಿವರು. ವ್ಯ.ಸೇ.ಸ.ಸಂಘದಲ್ಲಿ ಬೇರೆಯವರ ಹೆಸರಿನಲ್ಲಿ ಅವರದೇ ರೀತಿ ಸಹಿ ಮಾಡಿ ಸಾಲ ಪಡೆದ ಮುಕ್ಕಣ್ಣಗಳಿವರು.

ನನ್ನೂರ ಜನ ಇತ್ತೀಚೆಗೆ ತಮ್ಮ ಮಕ್ಕಳನ್ನು ವಿದ್ಯಾಭ್ಯಾಸಕ್ಕಾಗಿ ಪ್ರೋತ್ಸಾಹ ನೀಡುತ್ತಿರುವುದು ಒಂದು ಸಂತೋಷದ ವಿಷಯ. ಗುಡ್ಡ, ಬೆಟ್ಟಗಳಿಂದ ಸುತ್ತುವರಿದ ನನ್ನೂರು ನೋಡಲು ಬಹು ಚಂದ. ಓ.ಸಿ. ಇಸ್ಪೇಟ್ ಆಟ ಇಲ್ಲಿ ರಾಜಾರೋಷವಾಗಿ ನಡೆಯುತ್ತದೆ.

**- ಹಾರ್‍ಕನಾಳ್ ಶಿವಕುಮಾರಗೌಡ**
ಹಗರಿಬೊಮ್ಮನಹಳ್ಳಿ

## ನೀರು ಯಾವಾಗ?

ಧಾರವಾಡ ಜಿಲ್ಲೆ ಶಿಗ್ಗಾಂವ ತಾಲ್ಲೂಕಿನ ಗುಡ್ಡದ ಚೆನ್ನಾಪುರ ಗ್ರಾಮದ ನೀರಲಗಿ ಭಾಗದ ಪ್ಲಾಟಗೆ ಕಿರು ನೀರು ಸರಬರಾಜು ಯೋಜನೆ ಮಂಜೂರಾಗಿ ೨ ವರ್ಷ ಕಳೆದಿದೆ. ಬೋರವೆಲ್ ಕೊರೆಯಲಾಗಿದೆ. ಪೈಪ್‌ಲೈನ್ ಕೂಡಾ ಹಾಕಲಾಗಿದೆ. ಮಿನಿ ಟ್ಯಾಂಕ್ ಕೂಡಾ ನಿರ್ಮಾಣವಾಗಿ ವರ್ಷ ಕಳೆದರೂ ಇದುವರೆಗೂ ನೀರು ಬಂದಿಲ್ಲ. ಈ ಪ್ಲಾಟಿನ ಜನರಿಗೆ ನೀರಿನ ಸಮಸ್ಯೆ ತುಂಬಾ ಇದೆ. ಕಾರಣ ಸಂಬಂಧಪಟ್ಟವರು ಇತ್ತ ಕಡೆಗಮನ ಹರಿಸಿ ಈ ಭಾಗದ ಜನರಿಗೆ ನೀರು ದೊರಕಿಸಿಕೊಡಬಹುದೆ?

**- ಗದಿಗೆಪ್ಪ ಆಲದಕಟ್ಟಿ**
ಗುಡ್ಡದಚೆನ್ನಾಪೂರ

## ನುಡಿದಂತೆ ನಡೆದ ಉದಾಸಿ

ಧಾರವಾಡ ಜಿಲ್ಲೆ ಶಿಗ್ಗಾಂವ ತಾಲ್ಲೂಕು ಕುಂದೂರು ಗ್ರಾಮದ ಸಾರ್ವಜನಿಕ ಕಾರ್ಯಕ್ರಮಕ್ಕೆ ಲೋಕೋಪಯೋಗಿ ಸಚಿವರಾದ ಸಿ.ಎಂ.ಉದಾಸಿಯವರು ಬಂದಿದ್ದರು. ಅಂದಿನ ಕಾರ್ಯಕ್ರಮದಲ್ಲಿ ಬಂಕಾಪೂರ-ನರೇಗಲ್ ಗ್ರಾಮದವರೆಗೆ ಬಸ್ ವ್ಯವಸ್ಥೆ ಕಲ್ಪಿಸುತ್ತೇವೆ. ಎಂಬ ಭರವಸೆಯನ್ನು ನೀಡಿದ್ದರು. ೪ ತಿಂಗಳ ಒಳಗಾಗಿ ಬಸ್ ವ್ಯವಸ್ಥೆ ಕಲ್ಪಿಸಿದ್ದಾರೆ ನುಡಿದಂತೆ ನಡೆದ ಕಾಮಗಾರಿ ಸಚಿವರಿಗೆ ಧನ್ಯವಾದಗಳು.

**- ಕೆ. ಬಸವಣ್ಣೆಪ್ಪ**
ಕುಂದೂರ

# ಪುಸ್ತಕ

## ಹಾರುವ ಹಕ್ಕಿ ಮತ್ತು ಆಕಾಶ

(ಕಥಾ ಸಂಕಲನ)

ಲೇ: **ಬಾಳಾಸಾಹೇಬ ಲೋಕಾಪೂರ**
ಪ್ರ: ಸುಬಾಹು ಪ್ರಕಾಶನ, ಬಾಗಲಕೋಟೆ.
ಮುದ್ರಣ: ೧೯೯೭, ಪುಟ: ೯೦, ಬೆಲೆ: ರೂ. ೩೫/-

ಕಥೆ ಬರೆಯದೆ ಸುಮ್ಮನಿರುವುದು ಸಾಧ್ಯವೆ ಇಲ್ಲ ಎನಿಸಿದಾಗ ಹುಟ್ಟಿಕೊಂಡ ಕೆಲವು ಕಥೆಗಳು ಈ ಸಂಕಲನದಲ್ಲಿ ಇವೆ. ನನ್ನ ಊರು, ಹಿರಿಹೊಳೆ, ಅಲ್ಲಿಯ ಅನುಭವ ಜಗತ್ತು ಇಲ್ಲಿಯೂ ನನ್ನನ್ನು ಕಾಡಿ ನನ್ನ ಕಥೆಗಳಲ್ಲಿ ಅಗ್ರಸ್ಥಾನ ಪಡೆದಿವೆ.

ಸಾಹಿತ್ಯದಲ್ಲಿಯ ಗುಂಪುಗಾರಿಕೆ, ಪಂಥಗಳು, ಹೊಟ್ಟೆಕಿಚ್ಚು, ಜಾತಿಯತೆ ಇವೆಲ್ಲಾ ನನ್ನನ್ನು ದಿಕ್ಕು ತಪ್ಪಿಸಿವೆ. ಇಷ್ಟಾಗಿಯೂ ನನ್ನನ್ನು ನನ್ನ ಸುತ್ತಲಿನ ಗೆಳೆಯರ ಪರಿವಾರ ಬಹಳ ಪ್ರೀತಿಯಿಂದಲೇ ನೋಡಿಕೊಂಡಿದೆ. ನನ್ನ ಕಥೆಗಳಲ್ಲಿ ಪ್ರೀತಿಯ ಸೆಳಕುಗಳು ಮತ್ತೆ ಮತ್ತೆ ಭಾವ ಪರವಶತೆಯ ರೀತಿಗೆ ಇಳಿಯುವದು ಇಂಥವರ ಪ್ರೀತಿಯಿಂದಲೇ.

ನಾನು ಕಂಡುಂಡ ಅನುಭವಗಳನ್ನು ಕಥೆಯಾಗಿಸುವಲ್ಲಿ ಸಂತೋಷಪಟ್ಟಿದ್ದೇನೆ. ಈ ಪ್ರಕ್ರಿಯೆಯಲ್ಲಿ ನಿಜವಾದ ಸಾಹಿತ್ಯ ಮಾತ್ರ ಮನುಷ್ಯ ಮನುಷ್ಯರ ನಡುವೆ ಎದ್ದ ಈ ಗೋಡೆಗಳನ್ನು ಕೆಡವಿ ಅಲ್ಲಿ ಪ್ರೀತಿ ಹುಟ್ಟಿಸಬಲ್ಲದು ಎಂದು ತಿಳಿದಿದ್ದೇನೆ.

**- ಬಾಳಾಸಾಹೇಬ ಲೋಕಾಪೂರ**

## ಮಂಜುಹನಿ

(ಮಿನಿಗವನಗಳ ಸಂಕಲನ)

ಲೇ: **ಎಂ. ಮಂಜುನಾಥ ಬಮ್ಮನಕಟ್ಟಿ**
ಪ್ರ: ಭಾನು ಪ್ರಕಾಶನ
ಶಿಗ್ಲಿ, ತಾ. ಶಿರಹಟ್ಟಿ ಧಾರವಾಡ ಜಿಲ್ಲೆ
ಮುದ್ರಣ: ೧೯೯೭ ಪುಟ: ೬೦ ಬೆಲೆ: ರೂ.೨೫

ಇದು ಈ ಕವಿಯ ಮೊದಲ ಸಂಕಲನವಾದ್ದರಿಂದ ಉತ್ಕೃಷ್ಟ ಕಾವ್ಯಗಳನ್ನಾಗಲೀ, ಹೊಸತನವನ್ನಾಗಲೀ ನಿರೀಕ್ಷಿಸುವುದು ಸಮಂಜಸವಾಗಲಾರದು. ಕವಿಯಾಗಲು ಕೇವಲ ಉತ್ಸಾಹ ಸಾಲದು. ನಮ್ಮ ಸಮೃದ್ಧ ಕಾವ್ಯ ಪರಂಪರೆಯ ಅರಿವು ಹೊಸತನ್ನು ಹೇಳಬೇಕೆಂಬ ತುಡಿತ ಅತ್ಯಗತ್ಯ. ಮಂಜುನಾಥ ಬಮ್ಮನಕಟ್ಟಿ ಇನ್ನೂ ಯುವಕರಾಗಿರುವುದರಿಂದ ತಮ್ಮ ಕಾವ್ಯ ಪ್ರತಿಭೆಯನ್ನು ಇನ್ನಷ್ಟು ಕಲಾತ್ಮಕವಾಗಿ ವ್ಯಕ್ತಪಡಿಸಲು ಅವರಿಗೆ ಅವಕಾಶವಿದೆ.

**- ಹೆಚ್. ಡುಂಡಿರಾಜ್**

## ಕಾವ್ಯೋತ್ತರ

(ಕವನ ಸಂಕಲನ)

ಲೇ: **ಹುರುಕಡ್ಲಿ ಶಿವಕುಮಾರ**
ಪ್ರ: ಆಹ್ವಾನ ಪ್ರಕಾಶನ, ಬಸರಕೋಡು-೫೮೩ ೨೨೪, ತಾ: ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ
ಮುದ್ರಣ: ೧೯೯೭, ಪುಟ: ೫೮ ಬೆಲೆ: ರೂ.೨೫/-

ಬಾಚಿಗೊಂಡನಹಳ್ಳಿಯ ಹುರುಕಡ್ಲಿ ಶಿವಕುಮಾರ "ಎಲ್ಲ ಹೊಸ ವಿಚಾರಕ್ಕೂ ಕಿಟಕಿ ಬಾಗಿಲು ತೆರೆದು", ಅವನ್ನೆಲ್ಲ ಅರಗಿಸಿಕೊಂಡು ಕಾವ್ಯ ಮಾಡಲು ಹೆಣಗುವ ಕವಿ. 'ಮಾತು' ಹೆಚ್ಚಾಗಿ ಅನೇಕ ಸಲ 'ಧ್ವನಿ' ಕಡಿಮೆಯಾಗುವ ಅಪಾಯವಿದ್ದರೂ ಈ ಸಂಕಲನದಲ್ಲಿ ಆಕೆ, ಮಗು, ಪ್ರಣಯ ಪಂದ್ಯ, ನನ್ನೂರ ಭಾಷಣ, ಆಧ್ವಾನ್ ಬಾಬು - ಇಂಥವು ಅವರ ಅಭಿವ್ಯಕ್ತಿ ಸಾಧ್ಯತೆಯ ಒಳ್ಳೆಯ ಉದಾಹರಣೆಗಳಾಗಿವೆ. ಈ ನಿಟ್ಟಿನಲ್ಲಿ ಬೆಳೆದು ಅವರು ಇನ್ನೂ ಅನೇಕ ಮಜಲು ದಾಟುವಂತಾಗಲಿ.

**- ಚಂದ್ರಶೇಖರ ಪಾಟೀಲ**

## ಬನ್ನಿ...ಸ್ನೇಹಿತರಾಗೋಣ

(ಪತ್ರಮಿತ್ರರ ವಿಳಾಸಗಳ ಕೈಪಿಡಿ)

ಸಂಪಾದಕ: **ವಿಲಾಸ ಎಂ.ಮೇಲಗಿರಿ**
ಪ್ರ: 'ಸ್ನೇಹ ಸ್ಫೂರ್ತಿ' ನಂ.೩೧, 'ಅಕ್ಷತೆ', ಮೈಕಲ್ ಪಾಳ್ಯ, ಬೆಂಗಳೂರು-೫೬೦ ೦೭೫.
ಮುದ್ರಣ: ೧೯೯೭, ಪುಟ: ೮೮ ಬೆಲೆ: ರೂ. ೪೦/-

ಸ್ನೇಹ ಸ್ಫೂರ್ತಿಯ ಮೂರನೇ ವರ್ಷದ ಸವಿನೆನಪಿಗಾಗಿ (ಈಗ ಪತ್ರಿಕೆಗೆ ನಾಲ್ಕು ವರ್ಷ)



## ಮುನ್ನುಡಿಯಿಂದ

ರಾಷ್ಟ್ರಾದ್ಯಂತ ಹರಿದು ಹಂಚಿ ಹೋಗಿರುವ ಪತ್ರಮಿತ್ರರ ವಿಳಾಸ-ಹವ್ಯಾಸಗಳನ್ನು ಸಂಗ್ರಹಿಸಿ 'ಬನ್ನಿ ಸ್ನೇಹಿತರಾಗೋಣ' ಎಂಬ ಪತ್ರಮಿತ್ರರ ವಿಳಾಸ ಕೈಪಿಡಿಯೊಂದನ್ನು ಹೊರತರುವ ಯೋಜನೆಯನ್ನು ಹಾಕಿಕೊಂಡ ಆತ್ಮೀಯರಾದ ಸ್ನೇಹಕಿರಣ ಹಾಗೂ ಸಂಪಾದಕಿ ಶ್ರೀಮತಿ ಶೈಲಾ ಜಗದೀಶರವರ ಒತ್ತಾಯವೇ ಇಂಥ ಕೆಲಸಕ್ಕೆ ನನ್ನನ್ನು ಕೈ ಹಾಕುವಂತೆ ಮಾಡಿದ್ದು. ವಿಳಾಸಗಳನ್ನು ಸಂಗ್ರಹಿಸಿ ಬಹಳ ದಿನಗಳೇ ಗತಿಸಿಹೋದರೂ ಕಾರಣಾಂತರಗಳಿಂದ ಮುಂದೂಡುತ್ತಾ ಬಂದ ಈ ಕಾರ್ಯ ಪೂರ್ಣಗೊಂಡು ಪುಸ್ತಕ ತಮ್ಮ ಕೈಸೇರಿದೆ. ಇಂಥ ಒಂದು ಅಪರೂಪದ ಕೆಲಸ ಪಾಶ್ಚಾತ್ಯ ರಾಷ್ಟ್ರಗಳಲ್ಲೂ ಆಗಿಲ್ಲವೆಂದೇ ನನ್ನ ಭಾವನೆ.

**- ವಿಲಾಸ ಎಂ. ಮೇಲಗಿರಿ**

## ದುರ್ಬಲರ ಹಾಡು

(ಮಕ್ಕಳ ಕಥೆಗಳು)

ಲೇ: **ಗಣೇಶ ಪಿ.ನಾಡೋರ**
ಪ್ರ: ದತ್ತಾ ರೇವಣಕರ್
ಅಧ್ಯಕ್ಷರು, 'ಸ್ಟಾರ್‌ಕ್ಲಬ್', ಯಲ್ಲಾಪುರ (ಉ.ಕ.)
ಮುದ್ರಣ: ೧೯೯೭, ಪುಟ: ೨೮,
ಬೆಲೆ: ರೂ ೧೫/-

ಗಣೇಶ ಪಿ.ನಾಡೋರ ನಾಡಿನ ಚಿಣ್ಣರಿಗೆ ಈಗಾಗಲೇ ಪರಿಚಿತ ಹೆಸರು. ನಾಡಿನ ಪತ್ರಿಕೆಗಳಲ್ಲಿ ಪ್ರತಿವಾರವೂ ಒಂದಿಲ್ಲೊಂದು ಮಕ್ಕಳ ಬರಹಗಳ ಮುಖಾಂತರ ತಮ್ಮ ಕಿರಿಯ ವಯಸ್ಸಿನಲ್ಲೇ ಗುರುತಿಸಿಕೊಂಡವರು.

ಇವರ ಕಥೆಗಳಿಗೆ ಓದುವ ಅಭಿರುಚಿ

ಹೆಚ್ಚಿಸುವ ಮಧುರ ಶೈಲಿಯಿದೆ. ಅಷ್ಟೇ ಸರಳತನವಿದೆ. ಮಕ್ಕಳ ಮನೋವಿಕಾಸಕ್ಕೆ ಪೂರಕವಾದ, ಅಂತಃಕರಣದಲ್ಲಿ ಎತ್ತರದ ಮೌಲ್ಯವನ್ನು ಬಿಂಬಿಸುವ ಕಥನಗಳು ಈ ಸಂಕಲನದಲ್ಲಿ ಕಾಣಬಹುದಾಗಿದೆ.

ಚಿಣ್ಣರ ಅಂಗೈಯಲ್ಲಿ ಅಕ್ಷರಗಳನ್ನು ಪ್ರೀತಿಯಿಂದ ಮುದ್ದಿಸಲು ಹಾತೊರೆಯ ಬಹುದಾದ ಹಲವು ಬರಹಗಳು ಇಲ್ಲಿವೆ.

- ಜಿ. ಸುಬ್ರಾಯ ಭಟ್ ಬಕ್ಕಳ

## ಫುಟಕ್ಕೆಟ್ಟ ಕವನ

ಲೇ: ಅಕ್ಕಿ ಸುಜಾತ
ಪ್ರ: ರಚನಾ ಪ್ರಕಾಶನ
C/o ರಚನಾ ಕನ್ಸಲ್ಟಂಟ್ಸ್, ರಾಮನಗರ, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ
ಮುದ್ರಣ: ೧೯೯೭, ಪುಟ: ೪೦,
ಬೆಲೆ: ರೂ ೨೫/-

ಇಲ್ಲಿಯ ಕವಿತೆಗಳಿಗೆ ಇನ್ನೊಂದಿಷ್ಟು ಗೇಯ ಗುಣ ಸೇರಿಕೊಂಡಿದ್ದರೆ ಅವು ಭಾವಗೀತೆಯಾಗಿ ಯಶ ಪಡೆಯಬಲ್ಲ ರಚನೆಯಾಗುತ್ತಿದ್ದವು. ಆಶಾವಾದಿಯಾಗಿರುವ ಕವಿಯತ್ರಿ ಆದರ್ಶ ಜೀವನದ ಕನವರಿಕೆಯನ್ನು ಹಲವು ಕವಿತೆಗಳಲ್ಲಿ ವ್ಯಕ್ತಪಡಿಸಿದ್ದಾರೆ. ತುಳಿತಕ್ಕೊಳಗಾದವರ ಬಗ್ಗೆ ಅನುಕಂಪ ತೋರಿಸುತ್ತಲೇ ರಾಜಕಾರಣಿಗಳ ಪೊಳ್ಳುತನವನ್ನು ವಿವರಿಸುವಾಗ ದಿಟ್ಟತನ ತೋರ್ಪಡಿಸುವ ಕ್ರಮ ಕವಿಯತ್ರಿಯ ವ್ಯಕ್ತಿತ್ವವನ್ನು ಬಿಂಬಿಸುತ್ತದೆ. ಪ್ರಣಯದ ಹಾಗೂ ಕೌಟುಂಬಿಕ ಗೀತೆಗಳಲ್ಲಿಯೂ ಆದರ್ಶದ ವಾಸನೆ ಬೆರೆತಿರುತ್ತದೆ. ಕವಿತೆಯ ಸೃಷ್ಟಿಯ ಉದ್ದೇಶವನ್ನು ಚಮತ್ಕಾರಿಕವಾಗಿ ನಿರೂಪಿಸುತ್ತ ಕೊನೆಗೆ 'ಮನಸ್ಸಿನ ನೆಮ್ಮದಿಗೋಸ್ಕರ ಬರೀತಾ ಇದೀನಿ' ಎಂದು ಹೇಳಿರುವಲ್ಲಿ ಕವಿಯತ್ರಿಯ ಜೀವನದೃಷ್ಟಿ ಗೋಚರಿಸುತ್ತದೆ.

- ಡಾ. ಬಸವರಾಜ ಮಲಶೆಟ್ಟಿ

## ಕಲ್ಪನೆ

(ಕವನ ಸಂಕಲನ)

ಲೇ: ಕಾಮಗೆರೆ ಲ.ಕೃಷ್ಣೇಗೌಡ
ಪ್ರ: ಮಾ.ಶಂ. ಕೃಷ್ಣಯ್ಯ, ಶ್ರೀ ಶಂಕರೇಶ್ವರ ಪ್ರಕಾಶನ, ಬೋವಿ ಕಾಲೋನಿ, ನೆಹರು ನಗರ, ಮಂಡ್ಯ-೧. ಮುದ್ರಣ: ೧೯೯೫, ಪುಟ: ೩೦, ಬೆಲೆ: ರೂ ೧೨/-

ಹಳ್ಳಿಯಲ್ಲೇ ಹುಟ್ಟಿ ಬೆಳೆದು, ಹಳ್ಳಿ ಜನರ ಸಂಗದಲ್ಲೇ ಇದ್ದು ಹಳ್ಳಿಯ ಜೀವನವನ್ನು ಉದಾ : "ಟೀ ಶಾಪ್" ಅನ್ನು ಚೆನ್ನಾಗಿ ಚಿತ್ರಿಸಿದ್ದಾರೆ. ಮಂಡ್ಯ ಜನರ ದೇವರಂತೆ ಇರುವ ವಿಶ್ವೇಶ್ವರಯ್ಯನವರ ಬಗ್ಗೆ ರೈತರ ಅನಿಸಿಕೆ ಚೆನ್ನಾಗಿ ಮೂಡಿ ಬಂದಿದೆ. ಇವರು ಜೀವನದಲ್ಲಿ ತಮ್ಮ ಸಹಧರ್ಮಿಣಿಯ ಅಗಲಿಕೆಯನ್ನು ಬಹಳ ದುಃಖಪೂರಿತವಾಗಿ ಚಿತ್ರಿಸಿರುವುದನ್ನು ನೋಡಿದರೆ, ಇವರ ದಾಂಪತ್ಯ ಜೀವನ ಮಾದರಿಯಾಗಿತ್ತೆಂದು ತಿಳಿದುಬರುತ್ತದೆ. ಒಟ್ಟಾರೆ ಈ ಕವನ ಓದುಗರಿಗೆ ಎಲ್ಲಾ ವಯಸ್ಸಿನವರಿಗೆ ಒಂದು ನೀತಿ ಪಾಠವೇ ಆಗಿದೆ. ಇದರ ಉಪಯೋಗವನ್ನು ನಮ್ಮ ಜನತೆ ತಪ್ಪದೇ ಪಡೆಯಲೆಂದು ಹಾರೈಸುತ್ತೇನೆ.

- ಲಿಂಗಯ್ಯ

## ಯದುಗಿರಿಯ ಅಂಗಳದಿಂದ

(ಪುತಿನ ಸಾಹಿತ್ಯ ಕುರಿತು)

ಪ್ರ: ಅಭಿನವ, ಲೇ : ವಿವಿಧ ಲೇಖಕರು, ಸಂ.೨೭೬೧, ೧೩ನೇ ಮುಖ್ಯ ರಸ್ತೆ, 'ಇ' ವಿಭಾಗ, ರಾಜಾಜಿನಗರ ೨ನೇ ಹಂತ, ಬೆಂಗಳೂರು-೧೦. ಮುದ್ರಣ : ೧೯೯೭, ಪುಟ: ೧೪೮, ಬೆಲೆ : ರೂ. ೪೫/-

ಡಾ. ಪುರೋಹಿತ ತಿರುನಾರಾಯಣ ಅಯ್ಯಂಗಾರ್ ನರಸಿಂಹಾಚಾರ್ (ಪುತಿನ) ಕನ್ನಡ ಸಾಹಿತ್ಯ ಕಂಡ ವಿಶಿಷ್ಟ ಪ್ರತಿಭೆ ಗಳಲ್ಲೊಂದು. ಭಾರತೀಯ ಸಂಸ್ಕೃತಿಯ ಮೂಲ ತಂತುಗಳನ್ನುಳ್ಳ ಅವರ ಕಾವ್ಯ ಪ್ರತಿಭೆ, ಆರ್ಷವೂ ಆಧುನಿಕವೂ ಆದುದು. ತೀರಾ ಆದರ್ಶದ ನಿಗಿನಿಗಿ ಗುಂಗಿನ ಒಂದು ಘಟ್ಟದಿಂದ ತುಡಿತ ಘೋಷ ಮತ್ತು ಅದನ್ನೆಲ್ಲಾ ಕ್ರಿಯಾತ್ಮಕವಾಗಿ ಪ್ರಸ್ತುತಗೊಳಿಸುವ ಹಂಬಲದ ಇತ್ತೀಚಿನ ಕಾವ್ಯಚಲನೆಯವರೆಗಿನ ಒಟ್ಟು ದಾರಿ ಯಲ್ಲಿ ಪುತಿನ ಅವರ ಸೃಜನಶೀಲತೆ ಹರಿಯು ವಿಕೆಯೊಂದಿಗೆ ಬೆರೆಯದಿದ್ದರೂ ಅವರ ಕವಿತ್ವಕ್ಕೆ ಅದರದ್ದೇ ಆದ ಚಲನೆ ಚಿಮ್ಮುವಿಕೆಯಿದೆ; ಆ ಚಲನೆ ಚಿಮ್ಮುವಿಕೆ ಅವರ ವ್ಯಕ್ತಿತ್ವದೊಂದಿಗೆ ಬೆಸೆದುಕೊಂಡಿರುವ ಆಧ್ಯಾತ್ಮಿಕ ಮತ್ತು ತತ್ವಶಾಸ್ತ್ರೀಯ ಸಂವೇದನೆಯ ಶಕ್ತಿಯುತ ಧಾರೆಗಳಲ್ಲಿ ಫಲಿಸಿರುವುದಾಗಿದೆ.

ಹಣತೆ, ಮಲೆದೇಗುಲ, ಗಣೇಶದರ್ಶನ, ಶ್ರೀ ಹರಿಚರಿತೆ, ಈಚಲುಮರದ ಕೆಳಗೆ, ಧೇನುಕ ಪುರಾಣ, ಕಾವ್ಯ ಕುತೂಹಲ, ರಸಪ್ರಜ್ಞೆ, ಗೋಕುಲ ನಿರ್ಗಮನ, ಅಹಲ್ಯೆ ಪುತಿನ ಅವರ ವಿಶಿಷ್ಟ ಪ್ರತಿಭೆಗೆ ಸಾಕ್ಷಿ ನುಡಿಯುತ್ತವೆ.

ಅವರ ಸಾಹಿತ್ಯದ ಒಟ್ಟು ದೃಷ್ಟಿಯನ್ನು ಪರಿಶೀಲಿಸುವುದರ ಜೊತೆಗೆ ಅವರ ಕೆಲ ಸಾಹಿತ್ಯದ ಮಾದರಿಗಳನ್ನು ಇಲ್ಲಿ ಸಂಕಲಿಸಿರುವುದು ಈ ಹೊತ್ತಿಗೆಯ ವಿಶೇಷ.

- ನ. ರವಿಕುಮಾರ

## ರಾಜ್ಯಮಟ್ಟದ ವಿವಿಧ ಸಾಹಿತ್ಯಿಕ ಸ್ಪರ್ಧೆ

ಕನ್ನಡ ರಾಜ್ಯೋತ್ಸವದ ಅಂಗವಾಗಿ ನಮ್ಮ ಪ್ರಕಾಶನದಿಂದ ವಿವಿಧ ಸಾಹಿತ್ಯಿಕ ಸ್ಪರ್ಧೆಗಳನ್ನು ಏರ್ಪಡಿಸಲಾಗಿದೆ. ಬಹುಮಾನ ಪಡೆದ ಬರಹಗಳೊಂದಿಗೆ ಉತ್ತಮವಾದ ಬರಹಗಳನ್ನು ಸಹ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿ ವಿಶೇಷ ಸಂಚಿಕೆಯನ್ನು ಉಚಿತವಾಗಿ ಕಳುಹಿಸಿಕೊಡಲಾಗುವುದು.

**ಪ್ರತಿ ವಿಭಾಗದಲ್ಲೂ**

ಪ್ರಥಮ ಬಹುಮಾನ ೩೦೦೦ ರೂ.ಗಳು
ದ್ವಿತೀಯ ಬಹುಮಾನ ೨೦೦೦ ರೂ.ಗಳು
ತೃತೀಯ ಬಹುಮಾನ ೧೦೦೦ ರೂ.ಗಳು
ಹಾಗೂ ಪ್ರಶಸ್ತಿ ಪತ್ರ ನೀಡಲಾಗುವುದು.

ಆಸಕ್ತರು ಸ್ಪರ್ಧೆಯ ನಿಯಮಾವಳಿಗಳನ್ನು ತಿಳಿಯಲು ಸ್ವವಿಳಾಸದ ಅಂಚೆ ಕವರಿನೊಂದಿಗೆ ಕೆಳಗಿನ ವಿಳಾಸವನ್ನು ಸಂಪರ್ಕಿಸಬಹುದು.

ಎನ್.ಕೇಶವಮೂರ್ತಿ
ಪ್ರಕಾಶಕರು
ಪ್ರಗತಿ ಸೇವಾ ಪಬ್ಲಿಷರ್ಸ್
ಕವಲಗುಂದಿ ಅಂಚೆ -೫೭೭ ೨೨೯
ಶಿವಮೊಗ್ಗ ಜಿಲ್ಲೆ

## ದಶಕ ಕಂಡ ಸಾರ್ಥಕ ಕಾರ್ಯ

# ಯಡಳ್ಳಿಯ ತಂತ್ರವಿದ್ಯಾನಿದರ್ಶಿನಿ

**ಶಿರಸಿ ಬಳಿಯ ಯಡಳ್ಳಿ ಉಳಿದ ವಿಷಯಗಳಲ್ಲಿ ಸಾಮಾನ್ಯ ಹಳ್ಳಿ, ಆದರೆ ಇಲ್ಲಿ ನೆಲೆಸಿರುವ 'ತಂತ್ರ ವಿದ್ಯಾ ನಿದರ್ಶಿನಿ' ಯ ಒಂದು ದಶಕದ ಸಾಧನೆ ಮಾತ್ರ ಅಸಾಮಾನ್ಯವಾದುದು. ಡಾ. ಶಿವರಾಮ ಕಾರಂತರಂತಹ ಮೇಧಾವಿಗಳ ಮಾರ್ಗದರ್ಶನದಲ್ಲಿ ಈ ಸಂಸ್ಥೆ ಸವೆಸಿದ ಸಾಧನೆಯ ಹಾದಿಯ ಪರಿಚಯ ಇಲ್ಲಿದೆ.**

ಗ್ರಾಮೀಣ ಜನರಿಗೆ ಹೊಂದಿಕೊಳ್ಳುವಂತಹ ಪರಿಸರ ತಾಂತ್ರಿಕತೆಗಳ ಏರ್ಪಾಟು, ಕಡಿಮೆ ಇಂಧನ ಬಳಸುವ ಒಲೆಗಳನ್ನು ಅನುಷ್ಠಾನಗೊಳಿಸುವುದು, ನೀರಿನ ಸದ್ಬಳಕೆ, ಸುಧಾರಿತ ಕೃಷಿಯ ಬಗ್ಗೆ ಮಾಹಿತಿ, ಮೇವು ಅಭಿವೃದ್ಧಿ, ವಿದ್ಯಾರ್ಥಿಗಳಿಗೆ, ಯುವಕ-ಯುವತಿಯರಿಗೆ ತರಬೇತಿ, ತಂತ್ರಜ್ಞಾನ ಪ್ರಾತ್ಯಕ್ಷಿಕೆ ಮುಂತಾದ ಅವಶ್ಯಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಜನತೆಯ ಆಶೋತ್ತರಗಳಿಗೆ ಸ್ಪಂದಿಸುತ್ತ ದುಡಿಯುತ್ತಿರುವ ಯಡಳ್ಳಿಯ 'ತಂತ್ರವಿದ್ಯಾನಿದರ್ಶಿನಿ' ಯು ಒಂದು ವಿಶಿಷ್ಟ ಸಂಸ್ಥೆ.

ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕಿನ ಯಡಳ್ಳಿ ಒಂದು ಗ್ರಾಮೀಣ ಪ್ರದೇಶ. ಇಲ್ಲಿ ಕಳೆದ ಒಂದು ದಶಕಗಳಿಂದ ಬೆಂಗಳೂರಿನ ಭಾರತೀಯ ವಿಜ್ಞಾನ ಮಂದಿರದ ಮಧ್ಯವರ್ತಿಯಾಗಿ 'ನಿದರ್ಶಿನಿ' ಕಾರ್ಯನಿರ್ವಹಿಸುತ್ತ ಬಂದಿದೆ.

ಟೆಕ್ನಾಲಜಿ ಡೆಮಾನ್‌ಸ್ಟ್ರೇಷನ್ ಸೆಂಟರ್ (TDC) ಎಂದೇ ಪರಿಚಿತವಾಗಿರುವ ತಂತ್ರ ವಿದ್ಯಾನಿದರ್ಶಿನಿ ಯಡಳ್ಳಿಯ ವಿದ್ಯೋದಯ ಪದವಿ ಪೂರ್ವ ಸಂಯುಕ್ತ ಮಹಾ ವಿದ್ಯಾಲಯದ ಆಶ್ರಯದಲ್ಲಿ ಪರಿಸರ ಅಭಿವೃದ್ಧಿ, ಪರಿಸರ ರಕ್ಷಣೆಯ ದೃಷ್ಟಿಯಿಂದ ಹಾಗೂ ಗ್ರಾಮೀಣರಿಗೆ ಅವಶ್ಯಕ ತಂತ್ರಜ್ಞಾನ ಒದಗಿಸುವ ನಿಟ್ಟಿನಲ್ಲಿ ಮಹತ್ವದ ಪಾತ್ರ ವಹಿಸುತ್ತದೆ.

### ಒಲೆಯಿಂದ ಒತ್ತಿಟ್ಟಿಗೆವರೆಗೆ...

ಪರಿಸರಾಭಿವೃದ್ಧಿ ಕುರಿತ ಕಾರ್ಯಾಗಾರ, ಪ್ರಚಾರ ಆಂದೋಲನ, ವಿಜ್ಞಾನ ಹಾಗೂ ತಂತ್ರಜ್ಞಾನವನ್ನು ಪರಿಸರ ಅಭಿವೃದ್ಧಿಯಲ್ಲಿ ಅಳವಡಿಸಲು ಪ್ರಾಯೋಗಿಕ ಹಾಗೂ ಸಂಶೋಧನಾತ್ಮಕ ಅಭಿವೃದ್ಧಿ ಕಾರ್ಯ, ಗ್ರಾಮೀಣ ಪ್ರದೇಶದ ಪರಿಸರ ಸ್ನೇಹ ತಾಂತ್ರಿಕತೆಯ ಪ್ರಚಾರ ಇವು ''ನಿದರ್ಶಿನಿ''ಯ ಆದರ್ಶಮಯ ಧ್ಯೇಯೋದ್ದೇಶಗಳು.

ಅಸ್ತ್ರ ಒಲೆ, ಅಡಿಗೆ ಒಲೆ ಆಲೇ ಒಲೆ, ಅಡಿಕೆ ಒಲೆಗಳಂತಹ ವಿವಿಧ ನಮೂನೆಯ ಒಲೆಗಳ ತಯಾರಿಕೆಯ ಮೇಲುಸ್ತುವಾರಿ ಸೌರಶಕ್ತಿಯನ್ನು ಒಳಗೊಂಡು ಇಂಥದ್ದೇ ಇಂಧನದ ಸದ್ಬಳಕೆಗಾಗಿ ಪ್ರಾತ್ಯಕ್ಷಿತೆ, ಎಲ್ಲ ಕಟ್ಟಡಗಳ ನಿರ್ಮಾಣದಲ್ಲಿ ಬದಲೀ ತಂತ್ರಜ್ಞಾನ ಬಳಕೆ ಅನುಷ್ಠಾನಗೊಳಿಸುವ ಹಲವು ಮಹತ್ತರ ಆಶಯಗಳು ಈ ಸಂಸ್ಥೆಯ ಬತ್ತಳಿಕೆಯಲ್ಲಿವೆ.

ಕಡಿಮೆ ವೆಚ್ಚದ ಕಟ್ಟಡ ನಿರ್ಮಾಣ, ಒತ್ತಿಟ್ಟಿಗೆಗಳ ಫೆರ್ರೋ ಸಿಮೆಂಟ್ ಮಾದರಿಸಿದ್ದ ಛಕಾಸು, ಮೇಲ್ಛಾವಣಿ ಇತ್ಯಾದಿಗಳು ಈಗಾಗಲೇ ಪರಿಣಾಮಕಾರಿ, ಫಲಿತಾಂಶ ನೀಡಿವೆ.

### ನಿದರ್ಶಿನಿಯ ಡ್ರಾಯರ್

ಮಲೆನಾಡಿನಲ್ಲಿ ವಿಶೇಷವಾಗಿ ಮಳೆಗಾಲದಲ್ಲಿ ಅಡಿಕೆ, ತೆಂಗು, ಯಾಲಕ್ಕಿಗಳನ್ನು ಒಣಗಿಸುವುದು ಕಷ್ಟ ಸಾಧ್ಯ. ಮೊದಲಿನಿಂದಲೂ ಬಳಕೆಯಲ್ಲಿರುವ ಡ್ರಾಯರ್‌ನಲ್ಲಿ ಕೆಲವು ಕೊರತೆ ಎದ್ದು ಕಾಣುತ್ತಲಿತ್ತು. ಹಾಗಾಗಿ 'ನಿದರ್ಶಿನಿ' ಅಸ್ತ್ರ ಡ್ರಾಯರ್‌ನಲ್ಲಿ ಕೆಲವು ಮಾರ್ಪಾಟು ಮಾಡಿಕೊಂಡಿದೆ.

೧. ನಿರ್ದಿಷ್ಟ ಉಷ್ಣತೆಯಲ್ಲಿ ಒಣಗಿಸಲು



ಉಷ್ಣತಾಮಾಪನ ಅಳವಡಿಕೆ.

೨. ಜಮ್‌ಟೈಲ್ಸ್ ಬದಲಿಗೆ ಎಮ್.ಎಸ್. ಶೀಟ್ ಬಳಕೆ.

೩. ಸುಟ್ಟ ಇಟ್ಟಂಗಿ ಬದಲಿಗೆ ಎಮ್.ಎಸ್. ಶೀಟ್ ಬಾಗಿಲ ಬಳಕೆ ಇತ್ಯಾದಿ.

### ಡ್ರಾಯರ್ ಪಬ್ಲಿಸಿಟಿ!

ನಿರ್ದಶಿನಿಯ ಡ್ರಾಯರ್ ಕೇವಲ ಉತ್ತರ ಕನ್ನಡ ಜಿಲ್ಲೆಗೆ ಸೀಮಿತವಲ್ಲ ಡ್ರಾಯರ್ ನಿರ್ಮಾಣ ರಾಜ್ಯದಲ್ಲಿ ಮಾತ್ರವಲ್ಲದೇ ಹೊರ ರಾಜ್ಯದಲ್ಲಿ ಕೂಡ ಪ್ರಚಾರದಲ್ಲಿದೆ. ಕೇರಳ, ಗೋವಾಗಳಲ್ಲಿ ಬಳಕೆಯಲ್ಲಿದೆ.

ಸುಲಭ್‌ಶೌಚಾಲಯ, ಹನಿ ನೀರಾವರಿ, ಪ್ರಚಾರಗಳಂತಹ ಮಹತ್ವದ ವಿಷಯ ಕುರಿತು ಸಂಸ್ಥೆ ಪ್ರಾತ್ಯಕ್ಷಿತೆ ನಡೆಸಿದೆ - ನಡೆಸುತ್ತಲಿದೆ.

### ಏರುಗೋಪುರ ಏಣಿ

ಅಡಿಕೆ-ತೆಂಗುಗಳಲ್ಲಿನ ಕೊಯ್ಲುಗಳಿಗೆ ಕೂಲಿಕಾರರ ಸಮಸ್ಯೆ ಇದ್ದೇ ಇದೆ. ಇದಕ್ಕಾಗಿ ನಿರ್ದಶಿನಿ ಏರುಗೋಪುರ ಏಣಿಯನ್ನ ರಚಿಸಲು ಮುಂದಾಗಿದೆ.

### ಮೇಧಾವಿಗಳ ಮಾರ್ಗದರ್ಶನ

ಹದಿ ಹರೆಯದ ನಿರ್ದಶಿನಿಗೆ ಡಿ.ವಿ.ಹೆಗಡೆ ಬೆಳ್ಳೀಕೇರಿ, ಅಧ್ಯಕ್ಷರಾದರೆ ಪ್ರಗತಿಪರ ಕೃಷಿಕ, ಬರಹಗಾರ. ಕೆ.ಎಂ. ಹೆಗಡೆ ಭೈರುಂಭೆ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಲಿದ್ದಾರೆ. ಪ್ರೊ ಮಾಧವ ಗಾಡ್ಗೀಳ್, ಡಿ.ಕೆ. ಸುಬ್ರಹ್ಮಣ್ಯ, ಕೆ.ಎಸ್.ಜಗದೀಶ್. ಡಾ. ಶಿವರಾಂ ಕಾರಂತ ರಂತಹ ಮೇಧಾವಿಗಳ ಸಹಕಾರ ಮಾರ್ಗದರ್ಶನ ಪ್ರಯತ್ನ ನಿರ್ದಶಿನಿಯ ಹಿಂದಿದೆ. ಪ್ರಾರಂಭದ ಆರು ವರ್ಷಗಳಲ್ಲಿ ಜೋಷಿ ಮಾಸ್ತರರು ಸಂಸ್ಥೆಯ ಕೆಲಸ ಮಾಡುತ್ತಲಿದ್ದರು.

ನಿರ್ದಶಿನಿ ಬಳಿ ಉತ್ತಮ ತಂತ್ರಜ್ಞಾನ ಇದ್ದರೂ ಆರ್ಥಿಕವಾಗಿ ಹಿಂದುಳಿದ್ದಿದ್ದರಿಂದ ಹಲವು ತಂತ್ರಜ್ಞಾನಗಳು ಬೆಳಕಿಗೆ ಬರಲಿಲ್ಲ. ಸರಕಾರ ನಿರ್ದಶಿನಿಗೆ ಸದ್ಯ ನೀಡುತ್ತಿರುವ ೧ ಲಕ್ಷ ರೂ ಅನುದಾನ ಹೆಚ್ಚಿಸಿದರೆ ಗ್ರಾಮೀಣ ಜನರ ಬದುಕಿಗೆ ಉಪಯುಕ್ತವಾದ ಇನ್ನೂ ಅನೇಕ ಕಾರ್ಯಗಳು ಕೈಗೂಡಲು ಸಾಧ್ಯ.

○ ರಾಘವೇಂದ್ರ ಬೆಟ್ಟಕೊಪ್ಪ
ಪತ್ರಕರ್ತ, ಕಾನಗೋಡು- ೫೮೧ ೩೪೦
ಶಿರಸಿ (ಉ.ಕ)

## ವಸಂತ

ಆರೆ ಬೆತ್ತಲೆ
ಗಿಡ-ಮರಗಳಿಗೆ
ಹಸಿರು ಸೀರೆ
ಉಡಿಸುವ
ರಸಿಕ ರಾಜ

- ಕನಕಗಿರಿ ಅಲ್ಲಾಗಿರಿರಾಜ

## ಬುತ್ತಿ

ನಿನ್ನ
ನೆನಪಿನ ಬುತ್ತಿಯಲಿ
ತುಂಬಿದೆ
ನೋವಿನ ತುತ್ತು

- ದ.ರಾ.ಪುರೋಹಿತ

# ಪತ್ರಿಕೋದ್ಯಮ: ಮತ್ತಷ್ಟು ಮಾಹಿತಿ

○ ಪ್ರೀತಿಯ ಜನಾರ್ದನ

**ಪತ್ರಿಕಾ ಕಚೇರಿ ಹೇಗಿರುತ್ತದೆ?**

ಪತ್ರಿಕಾ ಕಚೇರಿಯನ್ನು ಇನ್ನಾವ ಕಚೇರಿಯೊಂದಿಗೂ ಹೋಲಿಸಲಾಗುವುದಿಲ್ಲ. ಪತ್ರಿಕಾ ಕಚೇರಿಯಂತಿರುವ ಇನ್ನೊಂದು ಆಫೀಸು ಇಲ್ಲ.

ಪತ್ರಿಕಾಲಯದ ಪರಿಸರ, ವಾತಾವರಣವೇ ಅಂಥದು. ಎಲ್ಲೂ ಕಾಣದ ವಿಚಿತ್ರ ಪರಿಸ್ಥಿತಿ ಅಲ್ಲಿ ನೆಲೆಸಿರುತ್ತದೆ. ಹಾಗೆಂದು ಬೇರೆಯವರಿಗೆ ಅನಿಸುತ್ತದೆ.

ಹಾಗೇ ಹೇಳುವುದಾದರೆ ವ್ಯವಸ್ಥಿತ, ಸುಸಜ್ಜಿತ ಹಾಗೂ ಆಧುನಿಕ ಪತ್ರಿಕಾ ಕಚೇರಿ ನಿಜವಾದ ಅರ್ಥದಲ್ಲಿ ಜಗತ್ತಿನ ಎಲ್ಲಾ ದೇಶಗಳೊಂದಿಗೆ, ಎಲ್ಲರೊಂದಿಗೆ ಗೊತ್ತಿದ್ದೋ, ಗೊತ್ತಿಲ್ಲದೆಯೇ ಒಂದು ಸಂಬಂಧವನ್ನು ಬೆಳೆಸಿರುತ್ತದೆ. ಇಡೀ ಸಮಾಜಕ್ಕೆ ಕೊಂಡಿಯಾಗಿರುತ್ತದೆ. ವರ್ತಮಾನದ ಸೇತುವೆಯಾಗಿರುತ್ತದೆ. ಈ ಎಲ್ಲ ಸಂಬಂಧಗಳ ಆಚೆ ಅಥವಾ ಇವುಗಳಿಂದ ಮುಕ್ತವಾಗುವ ಪತ್ರಿಕಾ ಕಚೇರಿಯನ್ನು ಊಹಿಸಲು ಸಾಧ್ಯವಿಲ್ಲ. ಪತ್ರಿಕಾಲಯ ಜನರ ಮಧ್ಯೆ, ಪತ್ರಿಕೆ ಮೂಲಕ ಒಂದು ಬಂಧವನ್ನು ಬೆಸೆಯುವ ಸಂಸ್ಥೆಯಾಗಿ

## ಪತ್ರಿಕೆಗಳಲ್ಲಿ ಸುದ್ದಿ ಪ್ರಕಟವಾಗಲು ಜನರು ಹಣ ನೀಡಬೇಕೇ?

ಈ ಪ್ರಶ್ನೆ ಅನೇಕ ಓದುಗರನ್ನು ಕಾಡುತ್ತದೆ. ಆಯಾ ಜನರಿಗೆ ಸಂಬಂಧಿಸಿದ ಸುದ್ದಿ ಹಣ ನೀಡಿಯೇ ಪ್ರಕಟವಾಗಿದೆಯೆಂದು ಅವರು ಭಾವಿಸಿರುತ್ತಾರೆ.

ಪತ್ರಿಕೆಗಳಲ್ಲಿ ಸುದ್ದಿ ಪ್ರಕಟವಾಗಲು ಜನರು ಹಣ ನೀಡಬೇಕಿಲ್ಲ. ನೀಡಬಾರದು. ಜನರ ಸುದ್ದಿಯನ್ನು ಪ್ರಕಟಿಸುವುದು ಪತ್ರಿಕೆಗಳ ಕರ್ತವ್ಯ. ಪತ್ರಿಕೆಗಳಿಗೆ ಸುದ್ದಿ ಬೇಕು. ಕೆಲವು ಭ್ರಷ್ಟ ಪತ್ರಕರ್ತರು ಸುದ್ದಿ ಪ್ರಕಟಿಸಲು, ಪಕ್ಷಪಾತದ ವರದಿ ಪ್ರಕಟಿಸಲು ಹಣ ಪಡೆಯುವುದು ಈ ಭಾವನೆ ಮೂಡಲು ಕಾರಣವಾಗಿರಬಹುದು.

ಜಾಹೀರಾತು ಪ್ರಕಟಣೆಗೆ ಮಾತ್ರ ಓದುಗರು ಹಣ ನೀಡಬೇಕಾಗುತ್ತದೆ.

ಓದುಗರು ನೀಡುವ ಎಲ್ಲ ಸುದ್ದಿಯನ್ನೂ ಪತ್ರಿಕೆ ಪ್ರಕಟಿಸಲೇಬೇಕೆಂದಿಲ್ಲ. ಉದಾಹರಣೆಗೆ, ನಗರದ ಯಕ್ಷಿಣಿಗಾರರೊಬ್ಬರು ಒಂದು ವಾರದ ಯಕ್ಷಿಣಿ ವಿದ್ಯೆ ಕಲಿಸುವ ತರಬೇತಿ ಶಿಬಿರಕ್ಕೆ ಒಂದು ಸಾವಿರ ರೂ. ಫೀಸು ಪಡೆಯುವುದಾಗಿ ನೀಡಿದ ಸುದ್ದಿಯನ್ನು ಪ್ರಕಟಿಸಲೇಬೇಕಿಲ್ಲ. ಅದೇ ಅಂಧರಿಗಾಗಿ ಉಚಿತ ನೇತ್ರ ಶಿಬಿರ ನಡೆಸುವ ಸುದ್ದಿಯನ್ನು ಪ್ರಧಾನವಾಗಿ ಪ್ರಕಟಿಸಬಹುದು.




ಕಾರ್ಯನಿರ್ವಹಿಸುತ್ತದೆ.

ಪತ್ರಿಕಾಲಯ ನಿಜಕ್ಕೂ ಸಾಗರ, ಮಹಾಸಾಗರ ಇಲ್ಲಿಗೆ ಹರಿದುಬರುವ ಅಕ್ಷರಗಳ ಮಹಾಪೂರವನ್ನು ಗಮನಿಸಿದಾಗ ಈ ಅಂಶ ವೇದ್ಯವಾದೀತು. ಟೆಲಿಪ್ರಿಂಟರ್, ಟೆಲಿಫೋನ್, ಟೆಲೆಕ್ಸ್, ಮೋಡೆಮ್, ಫ್ಯಾಸಿಮಿಲಿ, ಫ್ಯಾಕ್ಸ್, ಇಂಟರ್‌ನೆಟ್ ಮೂಲಕ ಪತ್ರಿಕಾ ಕಚೇರಿ ಇಡೀ ಜಗತ್ತಿನೊಂದಿಗೆ ಸದಾ ಸಂಪರ್ಕವನ್ನು ಸಾಧಿಸಿರುತ್ತದೆ. ಜಗತ್ತಿನ ಯಾವುದೋ ಒಂದು ಮೂಲೆಯಲ್ಲಿ, ಜನವಸತಿಯಿರುವ ಪ್ರದೇಶವೊಂದರಲ್ಲಿ ಭೂಮಿ ನಲುಗಿದರೆ, ಭೂಕಂಪದಿಂದ ಸ್ವಲ್ಪವೇ ಥರಗುಟ್ಟಿದರೆ, ಕೆಲವೇ ನಿಮಿಷಗಳಲ್ಲಿ ಪತ್ರಿಕಾಲಯಾದಲ್ಲಿ ಸುದ್ದಿಯಾಗಿ ಬಂದು ಬೀಳುತ್ತದೆ. ಗಣ್ಯವ್ಯಕ್ತಿ ಕಾಯಿಲೆ ಬೀಳಲಿ, ಎಲ್ಲೋ ಸುಂಟರ್‌ಗಾಳಿ ಬೀಸಲಿ, ಬಿಸಿಲಝಳ ಹೆಚ್ಚಾಗಲಿ, ನೂರಾರು ಜನ ಸಾಯಲಿ, ಸಾಯದೇ ಬಚಾವ್ ಆಗಲಿ ಪತ್ರಿಕಾಲಯದಲ್ಲಿ ದಾಖಲಾಗಬೇಕು. ಯಾವನೋ ಒಬ್ಬ ಡೈವೋರ್ಸ್ ನೀಡಿದ ಪತ್ನಿಗೆ ಜೀವನಾಂಶ ನೀಡದೇ ಜೈಲು ಸೇರಲಿ, ಅತ್ಯಾಚಾರ ಮಾಡಿ ಸಿಕ್ಕಿ ಬೀಳಲಿ...ಈ ಎಲ್ಲ ಸುದ್ದಿಗಳೂ ಪತ್ರಿಕಾ ಕಚೇರಿಯನ್ನು ಹುಡುಕಿಕೊಂಡು ಹೋಗುತ್ತವೆ.

ಹೌದು, ಪತ್ರಿಕಾ ಕಚೇರಿ ಅಕ್ಷರಗಳ ಮಹಾಪೂರ, ಸುದ್ದಿಯ ಮಹಾಸಾಗರ. ಸುದ್ದಿ ತಯಾರಾಗುವ, ತಯಾರಾಗಿ ಬಂದ ಸುದ್ದಿಯನ್ನು ಪತ್ರಿಕೆ ಮೂಲಕ ರವಾನಿಸುವ ಕಾರ್ಖಾನೆಯಿದು. ಬಿಡುವಿಲ್ಲದೇ ದಿನದ ೨೪ ಗಂಟೆಯೂ ಎಚ್ಚೆತ್ತಿರುವ ಕಾರ್ಖಾನೆಯಿದು.

ನೀವೊಮ್ಮೆ ಪತ್ರಿಕಾ ಕಚೇರಿಯನ್ನು ನೋಡಬೇಕು. ಸುದ್ದಿ ತಯಾರಾಗುವ ಕಾರ್ಖಾನೆಯೊಳಗೆ ಇಣುಕು ನೋಟ ಹಾಯಿಸಬೇಕು. ಅಕ್ಷರಗಳ ತುಂಡಿಲ್ಲದ ಸಾಲುಸಾಲುಗಳು ಹರಿದು ಬರುತ್ತಲೆ ಇರುತ್ತವೆ, ಎಲ್ಲಿಂದಲೋ. ಇದಕ್ಕೆ ಮೊದಲಿಲ್ಲ, ಕೊನೆಯಿಲ್ಲ. ಪುಟ ಮುದ್ರಣಕ್ಕೆ ಹೋಗುವ ಕಾಲ ಸನ್ನಿಹಿತವಾಗುವ ಸಮಯದಲ್ಲಿ ಪತ್ರಿಕಾ ಕಚೇರಿಯೊಳಗೊಮ್ಮೆ ಹೋಗಬೇಕು. ಎಲ್ಲರೂ ಆಕಾಶ ಕಳಚಿಬಿದ್ದವರಂತೆ ಅವಸರದಲ್ಲಿರುತ್ತಾರೆ. ಆ ಸಂದರ್ಭದಲ್ಲಿ ರೈಲು ಹೊರಡುವ ಸ್ವಲ್ಪ ಹೊತ್ತು ಮುಂಚಿನ ಅಥವಾ ನಿಲ್ದಾಣಕ್ಕೆ ರೈಲು ತಲುಪಿದಾಗ ನೆಲೆಸುವ ಗಿಜಿಗಿಜಿ ವಾತಾವರಣ ಪತ್ರಿಕಾಲಯದಲ್ಲಿ ನೆಲೆಸಿರುತ್ತದೆ. ಎಲ್ಲರೂ ಒಂದಿಲ್ಲೊಂದು ಸುದ್ದಿಯ ಮೇಲೆ ನಿರತರಾಗಿರುತ್ತಾರೆ.

ಇಂಗ್ಲಿಷ್‌ನಲ್ಲಿ ಪತ್ರಿಕಾ ಕಚೇರಿಯನ್ನು Sacred Hall (ಪವಿತ್ರ ಸಭಾಂಗಣ) ಎಂದು ಕರೆಯುತ್ತಾರೆ. ಇದಕ್ಕೆ ವಿವರಣೆ ಅನಗತ್ಯ. ಪತ್ರಿಕೆ ಆಯಾ ಪ್ರದೇಶದ ಜನರ ದೈನಂದಿನ ಜೀವನದೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿರುತ್ತದೆ. ಪ್ರತಿನಿತ್ಯದ ಸುದ್ದಿಗಾಗಿ ಸಾರ್ವಜನಿಕರು ಪತ್ರಿಕೆಯನ್ನು ಅವಲಂಬಿಸುವಂತೆ, ತಮಗಾದ ಅನ್ಯಾಯ, ಕುಂದುಕೊರತೆಗಳನ್ನು ನಿವಾರಿಸಿಕೊಳ್ಳಲು ಪತ್ರಿಕೆಯನ್ನು



ಕಂಪ್ಯೂಟರ್ ಸೆಂಟರ್ ಅಲ್ಲ : ಆಧುನಿಕ ಪತ್ರಿಕಾಲಯ !




## ಪತ್ರಿಕೆಗಳು ತಪ್ಪು ಮಾಡಿದಾಗ ಯಾರಿಗೆ ದೂರು ನೀಡಬೇಕು?

ಇದು ಕೂಡ ಬಹಳ ಮಂದಿಗೆ ಕಾಡುವ ಪ್ರಶ್ನೆ. ಪತ್ರಿಕೆಗಳಿಂದ ನಿಮಗೆ ಅನ್ಯಾಯವಾಗಿದ್ದರೆ, ಮಾನನಷ್ಟವಾಗಿದ್ದರೆ ಪೊಲೀಸ್ ಸ್ಟೇಶನ್‌ನಲ್ಲಿ ದೂರು ನೀಡುವಂತಿಲ್ಲ.

ಪತ್ರಿಕೆಗಳಲ್ಲಿ ಪ್ರಕಟವಾಗುವ ವರದಿಗಳಿಂದ ಜನರಿಗೆ, ಅದರಲ್ಲೂ ವಿಶೇಷವಾಗಿ ಅಧಿಕಾರದಲ್ಲಿರುವವರಿಗೆ ಕಸಿವಿಸಿಯುಂಟಾಗಬಹುದು. ಕೆಲವು ವರದಿಗಳಿಂದ ಜನಸಾಮಾನ್ಯನಿಗೂ ತೊಂದರೆ, ಅನ್ಯಾಯವಾಗಬಹುದು. ಪತ್ರಿಕಾವರದಿಯಿಂದ ಪ್ರತಿಷ್ಠೆಗೆ ಕುಂದು ಉಂಟಾಗಬಹುದು.

ಇಂಥ ಸಂದರ್ಭದಲ್ಲಿ ಭಾರತೀಯ ಪತ್ರಿಕಾ ಮಂಡಲಿ (Press Council of India)ಗೆ ದೂರು ಸಲ್ಲಿಸಬಹುದು. ಪತ್ರಿಕೆಗೆ ಸಂಬಂಧಿಸಿದ ಎಲ್ಲ ದೂರು, ವಿಚಾರಣೆಯನ್ನು ಮಂಡಲಿಯೇ ನಿರ್ವಹಿಸುತ್ತದೆ.

ಮಂಡಲಿಯು ಸಂಬಂಧಿಸಿದ ದೂರಿನ ಬಗ್ಗೆ ವಿಚಾರಣೆ ನಡೆಸಿ ತೀರ್ಪು ನೀಡುತ್ತದೆ. ದುರದೃಷ್ಟದ ಸಂಗತಿಯೆಂದರೆ ಪತ್ರಿಕೆಯನ್ನು ಶಿಕ್ಷಿಸುವ ಅಧಿಕಾರ ಮಾತ್ರ ಪತ್ರಿಕಾ ಮಂಡಲಿಗೆ ಇಲ್ಲ.

ನೆಚ್ಚಿಕೊಳ್ಳುತ್ತಾರೆ.

ಪತ್ರಿಕೆಯೊಂದಿಗೆ ಜನರ ಸಂಬಂಧ ಎಷ್ಟೊಂದು ಗಾಢವಾಗಿರುತ್ತದೆಂದರೆ, ಅವರ ದಿನಚರಿ ಆರಂಭವಾಗುವುದು ಪತ್ರಿಕೆ ಓದುವುದರಿಂದಲೇ. ಎಷ್ಟೋ ನಿರ್ಧಾರಗಳು ಆಯಾ ದಿನದ ಸುದ್ದಿಯನ್ನು ಅವಲಂಬಿಸಿರುತ್ತವೆ. ಪತ್ರಿಕೆಯಲ್ಲಿ ಪ್ರಕಟವಾಗುವ ಸುದ್ದಿಗಳೆಲ್ಲ ದಿವ್ಯಸತ್ಯ ಎಂದು ಜನರು ಭಾವಿಸಿರುತ್ತಾರೆ. ಉತ್ತರ ಕರ್ನಾಟಕದ ಕಡೆ ಗಣ್ಯ ವ್ಯಕ್ತಿಯೊಬ್ಬರ ನಿಧನ ಸುದ್ದಿ ಸಂಯುಕ್ತ ಕರ್ನಾಟಕದಲ್ಲಿ ಪ್ರಕಟವಾಗದಿದ್ದರೆ ಆ ವ್ಯಕ್ತಿ ಸತ್ತಿಲ್ಲ ಎಂದೇ ಜನ ಭಾವಿಸುತ್ತಾರೆ!

ಇದಿರಲಿ ಪತ್ರಿಕಾಲಯದ ಒಳಗೊಂದು ಸುತ್ತು ಹೋಗಿಬರೋಣ. ಕಳೆದ ೧೦-೧೫ ವರ್ಷಗಳ ಹಿಂದೆ ಇದ್ದ ಪತ್ರಿಕಾ ಕಚೇರಿಗೂ, ಈಗಿನದಕ್ಕೂ ಅಜಗಜಾಂತರ. ಇದು ಪತ್ರಿಕಾ ಕಚೇರಿ ಎಂದು ಭಾವಿಸದಷ್ಟು ಕ್ಷಿಪ್ರಗತಿಯಲ್ಲಿ ಬದಲಾಗಿದೆ. ಪೇಪರ್ ಇಲ್ಲದ ಪೇಪರ್ ಆಫೀಸ್ (Paperless newspaper Office) ಆಗಿ ಪರಿವರ್ತನೆಗೊಂಡಿದೆ. ಇದಕ್ಕೆ ತಂತ್ರಜ್ಞಾನದಲ್ಲಾದ ಅಭಿವೃದ್ಧಿಯೇ ಕಾರಣ. ಪೆನ್, ಕಾಗದಗಳಿಲ್ಲದ, ಕೇವಲ ಕಂಪ್ಯೂಟರ್ ನಿಯಂತ್ರಿತ ಕಚೇರಿಗಳನ್ನು ಈಗ ಸಾಮಾನ್ಯವಾಗಿ ಕಾಣಬಹುದು.

ಪ್ರಮುಖ ಪತ್ರಿಕಾ ಕಚೇರಿಯಲ್ಲಿ ನಾಲ್ಕು ಮುಖ್ಯ ವಿಭಾಗಗಳು : ೧. ಸಂಪಾದಕೀಯ (Editorial) ೨. ಪ್ರಸಾರಣ (Circulation) ೩. ಜಾಹೀರಾತು (Advertising) ಹಾಗೂ ೪. ಮುದ್ರಣ (Production). ಈ ನಾಲ್ಕು ವಿಭಾಗಗಳ ಪೈಕಿ ಯಾವುದೇ ಒಂದರ ಸಹಕಾರ, ಸಹಯೋಗವಿಲ್ಲದಿದ್ದರೆ ಪತ್ರಿಕೆ ಹೊರಬರುವುದಿಲ್ಲ. ಪ್ರಸಾರಣ, ಜಾಹೀರಾತು ಹಾಗೂ ಮುದ್ರಣ ವಿಭಾಗಗಳಿಗೆ ಅವರದೇ ಆದ ಪ್ರಮುಖರಿರುತ್ತಾರೆ. ಸಂಪಾದಕೀಯ ವಿಭಾಗವೇ ಪತ್ರಿಕೆಯ ಜೀವನಾಡಿ. ಸಂಪಾದಕರು ಈ ವಿಭಾಗದ ಪ್ರಮುಖರು. ಈ ನಾಲ್ಕೂ ವಿಭಾಗಗಳಲ್ಲಿ ಸಂಪಾದಕರ ಮಾತಿಗೇ ಬೆಲೆ ಹೆಚ್ಚು. ಕೆಲವು ಪತ್ರಿಕೆಗಳಲ್ಲಿ ಸಂಪಾದಕರೇ ಮಾಲಿಕರೂ ಆಗಿರಬಹುದು. ಪತ್ರಿಕೆಯ ಕಚೇರಿಯ ದೈನಂದಿನ ಆಡಳಿತ ನಿರ್ವಹಣೆಯನ್ನು ನೋಡಿಕೊಳ್ಳಲು ಮ್ಯಾನೇಜರ್ ಇರುತ್ತಾರೆ. ಅವರು ಈ ನಾಲ್ಕೂ ವಿಭಾಗಗಳ ಜತೆ ಒಂದು ಕೊಂಡಿಯಂತೆ ವರ್ತಿಸುತ್ತಾರೆ.

ಸಂಪಾದಕರು ಮಾಲಿಕರ ಜತೆ ಸಮಾಲೋಚಿಸಿ ಪತ್ರಿಕೆಗೊಂದು ನೀತಿ - ಸ್ವರೂಪವನ್ನು ನಿರೂಪಿಸುತ್ತಾರೆ. ಸಂಪಾದಕರು ಪತ್ರಿಕೆಯ (ಸಂಪಾದಕರೇ ಮಾಲಿಕರಾಗದ ಪಕ್ಷದಲ್ಲಿ) ಲಾಭ ನಷ್ಟದ ಬಗ್ಗೆ ವಿಶೇಷ ತಲೆ ಕೆಡಿಸಿಕೊಳ್ಳುವುದಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಕಾಲ ಬದಲಾಗಿದೆ. ಅವರು ಪ್ರಸಾರಣ, ಜಾಹೀರಾತು ವಿಭಾಗಗಳ ಮುಖ್ಯಸ್ಥರೊಂದಿಗೆ ಕೂಡಿ ಕಾರ್ಯನಿರ್ವಹಿಸುವ ಸಂದರ್ಭ ಬಂದಿದೆ. ಈಗಿನ ಸಂಪಾದಕೀಯ ಬರೆಯುವ ಹೊರತಾಗಿ (ಎಷ್ಟೋ ಸಂಪಾದಕರು ಬರೆಯುವುದಿಲ್ಲ) ಪತ್ರಿಕೆಗೊಂದು ಸ್ವರೂಪ ಕಟ್ಟಿಕೊಡುವುದು ಸಂಪಾದಕನ ಮುಖ್ಯ ಕರ್ತವ್ಯ. ಈಗಿನ



ನಿಖಿಲ್ ಚಕ್ರವರ್ತಿ ಜತೆ ಯುವ ಪತ್ರಕರ್ತರು

ಸಂಪಾದಕ ಸಹೋದ್ಯೋಗಿಗಳನ್ನು ನಿಯಂತ್ರಿಸುವ ಮ್ಯಾನೇಜರ್.

ಸಂಪಾದಕನ ಕೆಳಗೆ ಸಹಸಂಪಾದಕ (Associate Editor) ಹಾಗೂ ಸಹಾಯಕ ಸಂಪಾದಕ (Assistant Editor)ರಿರುತ್ತಾರೆ. ಇವರು ವೃತ್ತಿಯಲ್ಲಿ ಪಳಗಿ, ಅನೇಕ ವರ್ಷಗಳ ಅನುಭವವನ್ನು ಹೊಂದಿದವರು. ಇವರು ಸುದ್ದಿ ಬರೆಯುವ ಗೋಜಿಗೆ ಹೋಗುವುದಿಲ್ಲ. ಇದರದ್ದೇನಿದ್ದರೂ ಸಂಪಾದಕೀಯ ಬರೆಯುವುದು, ವಿಶೇಷ ಲೇಖನ, ವಿಶ್ಲೇಷಣೆ ಬರೆಯುವುದು ಮತ್ತು ಸಂಪಾದಕೀಯ ಪುಟ (Edit Page) ಸಿದ್ಧಪಡಿಸುವುದು.

ಸಂಪಾದಕೀಯ ವಿಭಾಗದಲ್ಲಿ ಬೇರೆ ಬೇರೆ ವಿಭಾಗಗಳಿರುತ್ತವೆ. ಅವುಗಳಲ್ಲಿ ಗ್ರಾಮಾಂತರ, ರಾಜ್ಯ - ರಾಷ್ಟ್ರ - ಅಂತಾರಾಷ್ಟ್ರೀಯ ಮಟ್ಟದ ಸುದ್ದಿ ನಿರ್ವಹಿಸುವ ನ್ಯೂಸ್‌ಡೆಸ್ಕ್, ಕ್ರೀಡೆ, ವಾಣಿಜ್ಯ ಫೋಟೋ - ಸಂಪಾದಕರ ವಿಭಾಗ, ಸಾಪ್ತಾಹಿಕ ಪುರವಣಿ ವಿಭಾಗ, ವ್ಯಂಗ್ಯ ಚಿತ್ರಕಾರರ ವಿಭಾಗ, ವಿಶೇಷ ಪುರವಣಿ ವಿಭಾಗ, ವರದಿಗಾರರ ವಿಭಾಗ ಇತ್ಯಾದಿ. ಈ ಎಲ್ಲ ವಿಭಾಗಗಳಿಗೂ ಪ್ರತ್ಯೇಕ ಮುಖ್ಯಸ್ಥರು.

ಗ್ರಾಮಂತರ, ನ್ಯೂಸ್‌ಡೆಸ್ಕ್ ವಿಭಾಗವನ್ನು 'ನ್ಯೂಸ್‌ರೂಮ್' (ಸುದ್ದಿಕೋಣೆ) ಎನ್ನುತ್ತಾರೆ. ಇದನ್ನು ನಿಯಂತ್ರಿಸುವವರು ಸುದ್ದಿ ಸಂಪಾದಕರು (News Editor). ಇವರ ಕೆಲಸದ ಮಹತ್ವವನ್ನು ಅರಿತ ದೊಡ್ಡ ಪತ್ರಿಕೆಗಳಲ್ಲಿ ೨-೩ ಮಂದಿ ಸುದ್ದಿ ಸಂಪಾದಕರಿರುತ್ತಾರೆ. ಪತ್ರಿಕೆಗೆ ಇಡಿಯಾಗಿ ಒಂದು ಸ್ವರೂಪ ಕೊಡುವವರು ಸಂಪಾದಕರಾದರೆ, ಸುದ್ದಿಯ ದೃಷ್ಟಿಯಿಂದ ಒಂದು ವ್ಯಕ್ತಿತ್ವ ಕೊಡುವವರು ಸುದ್ದಿಸಂಪಾದಕರು. ಇವರೂ ಅನುಭವೀ ಪತ್ರಕರ್ತರು. ಜೀವಿತದ ಅವಧಿಯಲ್ಲಿ ಇವರು ಸೂರ್ಯಾಸ್ತ ನೋಡುವುದು ಕೆಲವು ಬಾರಿ ಮಾತ್ರ. ಕಾರಣ ಆ ಸಮಯದಲ್ಲಿಯೇ ಇವರ ಕೆಲಸದ ಒತ್ತಡ ಆರಂಭವಾಗುವುದು. ಸುದ್ದಿ ನಿಯಂತ್ರಣದಲ್ಲಿ ಇವರದೇ ಸಾರ್ವಭೌಮತ್ವ

ಸುದ್ದಿಸಂಪಾದಕರ ಅಡಿಯಲ್ಲಿ ಉಪಸುದ್ದಿ ಸಂಪಾದಕರು, ಮುಖ್ಯ ಉಪಸಂಪಾದಕರು, ಹಿರಿಯ ಉಪಸಂಪಾದಕರು ಮತ್ತು ಉಪ ಸಂಪಾದಕರ ಒಂದು ದಂಡು ಇರುತ್ತದೆ. ಉಪಸುದ್ದಿಸಂಪಾದಕರು ಯಾವುದಾದರೂ ವಿಶೇಷ ಕೆಲಸ ನಿರ್ವಹಿಸಬಹುದು.

ಮುಖ್ಯ ಉಪಸಂಪಾದಕರನ್ನು ಪತ್ರಿಕಾ ಕಚೇರಿಯಲ್ಲಿ ಮಾನವ ಸೂಕ್ಷ್ಮದರ್ಶಕ (Human microscope) ಎಂದು ಭಾವಿಸಲಾಗುತ್ತದೆ. ಇವರು ಆರು ತಾಸುಗಳ ಶಿಫ್ಟ್‌ಗಳಲ್ಲಿ ಕೆಲಸ ಮಾಡುತ್ತಾರೆ. ಸಾಮಾನ್ಯವಾಗಿ ರಾಜ್ಯ ಮಟ್ಟದ ಪತ್ರಿಕೆಯಲ್ಲಿ ಕನಿಷ್ಠ ಮೂವರು ಮುಖ್ಯ ಉಪಸಂಪಾದಕರಿರುತ್ತಾರೆ. ಒಬ್ಬೊಬ್ಬರು ಒಂದು ಶಿಫ್ಟ್‌ನ ಮುಖ್ಯಸ್ಥರಾಗಿರುತ್ತಾರೆ. ಬೆಳಿಗ್ಗೆ ೧೧ ರಿಂದ ೫ ಗಂಟೆ, ಮಧ್ಯಾಹ್ನ ೩ ರಿಂದ ೯ ಮತ್ತು ರಾತ್ರಿ ೯ ರಿಂದ ೨ ಶಿಫ್ಟ್‌ಗಳು ಇವರ ನೇತೃತ್ವದಲ್ಲಿ ನಡೆಯುತ್ತವೆ. ನ್ಯೂಸ್‌ರೂಮಿನೊಳಗೆ ಹರಿದು ಬರುವ ಸಾವಿರಾರು ಸುದ್ದಿಗಳ ಮೇಲೆ ಕಣ್ಣುಗಳನ್ನಾಡಿಸಿ, ಯಾವ ಸುದ್ದಿ ಪತ್ರಿಕೆಗೆ ಬೇಕೆಂಬುದನ್ನು ನಿರ್ಧರಿಸಿ ಆಯ್ಕೆ ಮಾಡುವವರು ಇವರೇ. ಹೀಗೆ ಆಯ್ಕೆ ಮಾಡಿದ ಸುದ್ದಿಯನ್ನು ಎಡಿಟ್ ಮಾಡಲು ತಮ್ಮ ಕಿರಿಯ ಸಹೋದ್ಯೋಗಿಗಳಿಗೆ ಕೊಡುತ್ತಾರೆ. ಪುಟ ವಿನ್ಯಾಸದ ಹೊಣೆ ಇವರದು. ಮುಖ್ಯ ಸುದ್ದಿಸಂಪಾದಕರ ಸಲಹೆ ಮೇರೆಗೆ ಇವರು ಪುಟ ವಿನ್ಯಾಸವನ್ನು ಮಾಡುತ್ತಾರೆ. ಕಿರಿಯ ಸಹೋದ್ಯೋಗಿಗಳಿಗೆ ಎಡಿಟ್ ಮಾಡಲು ಕೊಟ್ಟ ಸುದ್ದಿ, ಅದರ ಶೀರ್ಷಿಕೆ ಸಮರ್ಪಕವಾಗಿದೆಯೋ ಎಂದು ನಿರ್ಧರಿಸುವವರೂ ಇವರೇ.

ಮುಖ್ಯ ಉಪಸಂಪಾದಕರ ಕೆಳಗೆ ಹಿರಿಯ ಉಪಸಂಪಾದಕರು ಮತ್ತು ಉಪಸಂಪಾದಕರ ಒಂದು ಪಡೆ ಇರುತ್ತದೆ. ಇವರೂ ಕೂಡ ಶಿಫ್ಟ್‌ಗಳಲ್ಲಿ ಕೆಲಸ ನಿರ್ವಹಿಸಬೇಕಾಗುತ್ತದೆ. ಇವರು ಪತ್ರಿಕೆಯ ಕರ್ಮಯೋಗಿಗಳು. ಉತ್ತಮ ಉಪಸಂಪಾದಕ ಅವನ ತೂಕದ ಚಿನ್ನಕ್ಕೆ ಸಮ. ಯಾವುದೇ ಡಲ್ ವರದಿಗೆ ಹೊಳಪು ಬರಿಸಬಲ್ಲ ಅಥವಾ ಉತ್ತಮ ವರದಿಯನ್ನು ಕೆಡಿಸಬಲ್ಲ. ಸುದ್ದಿಯನ್ನು ಎಡಿಟ್‌ಮಾಡುವುದು, ಬರೆದ ಸುದ್ದಿಯನ್ನು ಇನ್ನಷ್ಟು ನುಣುಪುಗೊಳಿಸಿ ಬರೆಯುವುದು (ರೀರೈಟ್) ಅದಕ್ಕೊಂದು ಒಪ್ಪುವ ಹೆಡ್‌ಲೈನ್ ನೀಡುವುದು ಈತನ ಕೆಲಸ.

ಸಂಪಾದಕೀಯ ವಿಭಾಗದ ಮುಖ್ಯ ಅಂಗವೆಂದರೆ ವರದಿಗಾರರ ರೂಮ್. (Reporter's Room) ಇವರೇ ಮುಖ್ಯ ಸುದ್ದಿ ಸಂಗ್ರಹಕಾರರು. ಇವರನ್ನು ಹ್ಯೂಮನ್-ಆ್ಯಂಟೇನಾ ಎನ್ನಬಹುದು. ಇವರು ಪತ್ರಿಕೆಯ ಕಣ್ಣು-ಕಿವಿಗಳಿದ್ದಂತೆ. ಸಮಾಜದ ಎಲ್ಲರೊಂದಿಗೆ ಇವರ ಸಂಪರ್ಕ ಚಾಚಿರುತ್ತದೆ.

**ವಿದ್ಯಾವಕಾಶ ಹಾಗೂ ಉದ್ಯೋಗ ಮಾರ್ಗ ಕುರಿತ ಮಾಹಿತಿಯ ಅಗತ್ಯ ಯಾವುದೊಂದು ಪ್ರದೇಶಕ್ಕೆ ಸೀಮಿತವಾಗುವಂತಹದಲ್ಲ. ಇಂತಹ ಅಮೂಲ್ಯ ಮಾಹಿತಿಗಾಗಿ ನಾಡಿನಾದ್ಯಂತ ಕಾತರಿಸಿ ಕೂತ ಆಕಾಂಕ್ಷಿಗಳ ಸಂಖ್ಯೆ ಸಣ್ಣದೂ ಅಲ್ಲ. ಕನಸು, ಪರಿಶ್ರಮಗಳಿಗೆ ನೆರವು ನೀಡಿ ಗೊತ್ತು ಗುರಿ ಕಲ್ಪಿಸುವ ಪ್ರಯತ್ನವೇ ಈ ಅಂಕಣ. ಪ್ರತಿ ತಿಂಗಳು ಪ್ರಕಟವಾಗುವ ಈ ವಿಭಾಗ ಮಾಹಿತಿಯ ಕಣಜ. ಗೊಂದಲದಲ್ಲಿ ಸಿಲುಕಿದ ಯುವಕರ ಮನಸ್ಸನ್ನು ಇಂಥ ಮಾಹಿತಿಯೆಡೆಗೆ ಸೆಳೆಯುವುದು ಮನೆಯ ಹಿರಿಯರ ಕರ್ತವ್ಯ.**






ವರದಿಗಾರರ ವಿಭಾಗದ ಮುಖ್ಯಸ್ಥರು ಮುಖ್ಯ ವರದಿಗಾರರು. ಇವರು ತಮ್ಮ ಕೃಷಿಯಲ್ಲಿ ಅನೇಕ ವರ್ಷಗಳ ಅನುಭವವನ್ನು ಹೊಂದಿರುವವರು. ಇವರು ಎಲ್ಲ ವರದಿಗಾರರನ್ನು ನಿಯಂತ್ರಿಸುವುದರ ಜತೆಗೆ ಮುಖ್ಯ ಘಟನೆಗಳ ವರದಿಯನ್ನು ಮಾಡುತ್ತಾರೆ. ರಾಜಕೀಯ ವಿದ್ಯಮಾನ ವಿಧಾನಸಭಾ ಕಲಾಪ, ಮುಖ್ಯಮಂತ್ರಿ, ಪ್ರಧಾನಿ ಪತ್ರಿಕಾಗೋಷ್ಠಿ ಮುಂತಾದ ಪ್ರಮುಖ ಘಟನೆಯ ವರದಿ ಮಾಡುವುದು ಇವರ ಕೆಲಸ. ಉತ್ತಮ ಮುಖ್ಯ ವರದಿಗಾರ ಪತ್ರಿಕೆಯ ದೊಡ್ಡ ಆಸ್ತಿ. ಇವರ ಅಡಿಯಲ್ಲಿ ಹಿರಿಯ ವರದಿಗಾರರು ಹಾಗೂ ವರದಿಗಾರರ ತಂಡ ಇರುತ್ತದೆ. ಇವರು ಮುಖ್ಯ ವರದಿಗಾರರು ಸೂಚಿಸಿದ ಕಾರ್ಯಕ್ರಮ, ಘಟನೆ, ವಿದ್ಯಮಾನವನ್ನು ಕುರಿತು ವರದಿ ಮಾಡುತ್ತಾರೆ. ಇದಲ್ಲದೆ ವಿಶೇಷ ವರದಿ, ತನಿಖಾ ವರದಿಗಳನ್ನು ಬರೆಯಬಹುದು. ಸಾಮಾನ್ಯವಾಗಿ ಒಂದೊಂದು ವಿಷಯವನ್ನು ವರದಿ ಮಾಡಲು ಒಬ್ಬೊಬ್ಬ ವರದಿಗಾರರನ್ನು ನಿಯೋಜಿಸಲಾಗಿರುತ್ತದೆ. ಆಯಾ ಕ್ಷೇತ್ರದ ಪ್ರಮುಖ ಸುದ್ದಿಯನ್ನು ಕೈಬಿಡದಂತೆ ವರದಿ ಮಾಡುವುದು ಅವರ ಹೊಣೆ.

ವರದಿಗಾರರ ಜತೆಯಲ್ಲಿ ಕೆಲಸ ನಿರ್ವಹಿಸುವವರು ಫೋಟೋಗ್ರಾಫರ್ (ಫೋಟೋ ಜರ್ನಲಿಸ್ಟ್)ಗಳು. ಯಾವ ಕಾರ್ಯಕ್ರಮಕ್ಕೆ ಫೋಟೋಜರ್ನಲಿಸ್ಟ್ ವರದಿಗಾರನ ಜತೆ ಹೋಗಬೇಕೆಂದು ನಿರ್ಧರಿಸುವವರು ಮುಖ್ಯ ವರದಿಗಾರರು. ವರದಿಗಾರರು ಬರೆದ ಕಾಪಿಯನ್ನು ಸುದ್ದಿಸಂಪಾದಕರಿಗೆ ಕಳಿಸುವುದಕ್ಕೆ ಮೊದಲು, ಮುಖ್ಯ ವರದಿಗಾರರು ಅದನ್ನು ಪರಿಶೀಲಿಸುತ್ತಾರೆ. ಸಂಪಾದಕೀಯ ವಿಭಾಗದ ಪ್ರಮುಖರು ತಮ್ಮ ವಿಭಾಗದಲ್ಲಿನ ಎಲ್ಲ ವಿಶೇಷ, ಮುಖ್ಯ ಸುದ್ದಿಯನ್ನು ಸಂಪಾದಕರ ಗಮನಕ್ಕೆ ತಂದಿರುತ್ತಾರೆ.

ಪತ್ರಿಕಾ ಕಚೇರಿಯಲ್ಲಿ ಕಂಪ್ಯೂಟರ್ ಕಾಲಿಟ್ಟಂದಿನಿಂದ ಪ್ರೂಫ್ ರೀಡರ್‌ಗಳು ಕಾಲು ಕಿತ್ತಿದ್ದಾರೆ. ಈಗ ಕರಡು ತಿದ್ದುವ ಕೆಲಸವನ್ನು ಉಪಸಂಪಾದಕರೇ ಮಾಡಬೇಕಾಗಿ ಬಂದಿದೆ.

ಸಾಪ್ತಾಹಿಕ ವಿಭಾಗ ಪತ್ರಿಕೆಯ ಇನ್ನೊಂದು ಪ್ರಮುಖ ಅಂಗ. ಪ್ರತಿ ಭಾನುವಾರ ೬ ಅಥವಾ ೮ ಪುಟಗಳನ್ನು ಪ್ರಕಟಿಸುವುದು ಈ ವಿಭಾಗದ ಕೆಲಸ. ಮ್ಯಾಗಜಿನ್ ಸಂಪಾದಕರು ಈ ವಿಭಾಗದ ಮುಖ್ಯಸ್ಥರು. ಇವರಿಗೆ ಸಹಾಯಕರಾಗಿ ಎರಡು-ಮೂರು ಉಪಸಂಪಾದಕರು ಅಥವಾ ಹಿರಿಯ ಉಪಸಂಪಾದಕರಿರುತ್ತಾರೆ. ಸಾಹಿತ್ಯ, ಕಲೆ, ರಂಗಭೂಮಿ, ಸಿನಿಮಾ, ಮುಂತಾದವುಗಳಲ್ಲಿ ಪರಿಣತಿಯಿರುವವರು ಈ ವಿಭಾಗವನ್ನು ನಿರ್ವಹಿಸುತ್ತಾರೆ.

ಪತ್ರಿಕಾ ಕಚೇರಿಯಲ್ಲಿರುವ ಎಲ್ಲ ನೌಕರರೂ ಒಂದು ತಂಡದಂತೆ ಕೆಲಸ ನಿರ್ವಹಿಸುತ್ತಾರೆ. ಎಲ್ಲ ಪತ್ರಕರ್ತರಿಗೂ ಕೆಲಸದ ಅವಧಿಯಲ್ಲಿ 'ಕಾಲಮಿತಿ'ಯಿದ್ದರೂ ಪ್ರಮುಖ ಘಟನೆಗಳು ಜರುಗಿದಾಗ ಅದನ್ನು ಗಮನಿಸುವಂತಿಲ್ಲ. ರಜೆಯಿದ್ದರೂ ಮನೆಯಲ್ಲಿರುವಂತಿಲ್ಲ. ರಾತ್ರಿ ಮನೆಯಲ್ಲಿ ಮಲಗಿದ್ದರೂ, ಆಫೀಸಿಗೆ ಹೋಗಬೇಕಾಗಬಹುದು.

ಪತ್ರಕರ್ತನಾದವನು ಆಫೀಸಿನಲ್ಲಿ ಮಾತ್ರ ಪತ್ರಕರ್ತ, ಮನೆಗೆ ಬಂದರೆ ಪತ್ರಕರ್ತ ಅಲ್ಲ ಎನ್ನುವಂತಿಲ್ಲ. ಆತ ೨೪ ಗಂಟೆಯೂ ಪತ್ರಕರ್ತನೇ. ಸದಾ ಡ್ಯೂಟಿಯ ಮೇಲೆ ಇರುತ್ತಾನೆ, ಇರಬೇಕು.

***ಪತ್ರಿಕೋದ್ಯಮ ಶಿಕ್ಷಣ ನೀಡುವ ಸಂಸ್ಥೆಗಳ ವಿಳಾಸಗಳು :***

೧. **ಏಷ್ಯನ್ ಕಾಲೇಜ್ ಆಫ್ ಜರ್ನಲಿಸಂ**
**ದಿ ಡೀನ್**
ಏಷ್ಯನ್ ಕಾಲೇಜ್ ಆಫ್ ಜರ್ನಲಿಸಂ
ಎಕ್ಸ್‌ಪ್ರೆಸ್ ಬಿಲ್ಡಿಂಗ್, ೧, ಕ್ವೀನ್ಸ್‌ರಸ್ತೆ
ಬೆಂಗಳೂರು - ೫೬೦ ೦೦೧.

೨. **ಭಾರತೀಯ ವಿದ್ಯಾಭವನ**
ನಿರ್ದೇಶಕರು
ಪತ್ರಿಕೋದ್ಯಮ ವಿಭಾಗ
ಭಾರತೀಯ ವಿದ್ಯಾಭವನ
ಬೆಂಗಳೂರು - ೫೬೦ ೦೦೧.

೩. **ಮೀಡಿಯಾ ಸೆಂಟರ್**
ನಿರ್ದೇಶಕರು
ಮೀಡಿಯಾ ಸೆಂಟರ್, ಲೆವೆಲ್ಲೆ ರಸ್ತೆ
ಬೆಂಗಳೂರು.

೪. **ಮಣಿಪಾಲ ಇನ್‌ಸ್ಟಿಟ್ಯೂಟ್ ಆಫ್ ಕಮ್ಯುನಿಕೇಶನ್**
ನಿರ್ದೇಶಕರು
ಮಣಿಪಾಲ ಇನ್‌ಸ್ಟಿಟ್ಯೂಟ್ ಆಫ್ ಕಮ್ಯುನಿಕೇಶನ್,
ನ್ಯೂ ಉದಯವಾಣಿ ಬಿಲ್ಡಿಂಗ್
ಎರಡನೆ ಮಹಡಿ, ಪ್ರೆಸ್ ಕಾರ್ನರ್
ಮಣಿಪಾಲ - ೫೭೬ ೧೧೯ (ದ.ಕ.)

೫. **ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ**
ಚೇರ್‌ಮನ್
ಪತ್ರಿಕೋದ್ಯಮ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಪಾವಟೆನಗರ, ಧಾರವಾಡ - ೫೮೦ ೦೦೩

೬. **ಮೈಸೂರು ವಿ.ವಿ.**
ಚೇರ್‌ಮನ್
ಪತ್ರಿಕೋದ್ಯಮ ವಿಭಾಗ
ಮೈಸೂರು ವಿಶ್ವವಿದ್ಯಾಲಯ
ಮಾನಸಗಂಗೋತ್ರಿ, ಮೈಸೂರು.

೭. **ಚೇರ್‌ಮನ್**
ಪತ್ರಿಕೋದ್ಯಮ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳ ಗಂಗೋತ್ರಿ
ಕೊಣಾಜೆ, ಮಂಗಳೂರು.

## ಧಾರವಾಡಲ್ಲೊಂದು ಕಾಲೇಜು

ಪೂಜ್ಯ ಮಹಾಂತಪ್ಪಗಳ ೮೦ನೆಯ ಹುಟ್ಟುಹಬ್ಬದ ಸವಿನೆನಪಿಗಾಗಿ ಎಸ್.ಜೆ.ಎಂ. ವಿದ್ಯಾಪೀಠ, ಚಿತ್ರದುರ್ಗ, ಬೃಹನ್ಮಠ, ಇವರು ಧಾರವಾಡ ಮೃತ್ಯುಂಜಯ ನಗರದ ಶ್ರೀ ಮುರುಘಾ ಮಠ ಆವರಣದಲ್ಲಿರುವ ಮಹಾಲಕ್ಷ್ಮಿ ಪ್ರಥಮ ದರ್ಜೆ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯದಲ್ಲಿ ಬಿ.ಎ.ಭಾಗದ ವಿದ್ಯಾರ್ಥಿಗಳಿಗೆ ಪತ್ರಿಕೋದ್ಯಮ ಹಾಗೂ ಸಮೂಹ ಸಂವಹನ ವಿಷಯವನ್ನು ಪ್ರಾರಂಭಿಸಿದ್ದಾರೆ.

ಇಲ್ಲಿ ಬಿ.ಎ. ಮುಗಿಸಿ ಹೊರ ಬಂದ ವಿದ್ಯಾರ್ಥಿಗಳಲ್ಲಿ ಕೆಲವರು, ಪತ್ರಿಕೋದ್ಯಮದಲ್ಲಿ ಸ್ನಾತಕೋತ್ತರ (ಪಿ.ಜಿ.) ಪದವಿ ಪಡೆದು ಪತ್ರಿಕೆಗಳಲ್ಲಿ ಉಪಸಂಪಾದಕ ಹಾಗೂ ವರದಿಗಾರರಾಗಿ ಕೆಲಸ ಮಾಡುತ್ತಿದ್ದಾರೆ.

## ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

# ಬಾಹ್ಯ ಪರೀಕ್ಷೆಗಳಿಗೆ ಅರ್ಜಿ

ಏಪ್ರಿಲ್ /ಮೇ ೧೯೯೮ರಲ್ಲಿ ನಡೆಯಲಿರುವ ಈ ಕೆಳಗೆ ನಮೂದಿಸಿದ ಬಾಹ್ಯ ಪರೀಕ್ಷೆಗಳಿಗೆ ಅಭ್ಯರ್ಥಿಗಳು ನೋಂದಣಿ ಮಾಡಿಸಲಿಕ್ಕೆ ವಿಶ್ವವಿದ್ಯಾಲಯವು ಅವಕಾಶ ಕಲ್ಪಿಸಿದೆ.

೧. ಬಿ.ಎ, ಬಿ.ಕಾಂ. ಭಾಗ ೧, ೨ ಮತ್ತು ೩
೨. ಎಂ.ಎ. (ಪ್ರಥಮ) ಸಮಾಜ ವಿಜ್ಞಾನ
೩. ಎಂ.ಎ. (ಅಂತಿಮ) ಸಮಾಜ ವಿಜ್ಞಾನ
೪. ಎಂ.ಎ. (ಪ್ರಥಮ) ಭಾಷೆಗಳು
೫. ಎಂ.ಎ. (ಅಂತಿಮ) ಭಾಷೆಗಳು
೬. ಎಂ.ಕಾಂ. (ಪ್ರಥಮ)
೭. ಎಂ.ಕಾಂ. (ಅಂತಿಮ)
೮. ಎಂ.ಎ., ಎಂ.ಎಸ್‌ಸಿ. (ಪ್ರಥಮ) ಗಣಿತ ಶಾಸ್ತ್ರ
೯. ಎಂ.ಎ., ಎಂ.ಎಸ್‌ಸಿ. (ಅಂತಿಮ) ಗಣಿತ ಶಾಸ್ತ್ರ
೧೦. ಫ್ರೆಂಚ್, ಜರ್ಮನ್, ರಶಿಯನ್ ಭಾಷೆಗಳಲ್ಲಿ ಡಿಪ್ಲೊಮಾ, ಅಡ್ವಾನ್ಸ್ ಡಿಪ್ಲೊಮಾ.

ಈ ವಿಶ್ವವಿದ್ಯಾಲಯದ ಪರೀಕ್ಷೆಗಳಿಗೆ ಬಾಹ್ಯ ಪರೀಕ್ಷಾ ವಿದ್ಯಾರ್ಥಿಗಳಾಗಿ ತಮ್ಮ ಹೆಸರನ್ನು ನೋಂದಾಯಿಸಬಯಸುವ ಅಭ್ಯರ್ಥಿಗಳು ಸಂಬಂಧಿಸಿದ ಪರೀಕ್ಷೆಗಳ "ಪರಿಚಯ ಪುಸ್ತಕ"ಗಳನ್ನು ನೇರವಾಗಿ ಕರ್ನಾಟಕ ರಾಜ್ಯದಲ್ಲಿನ ಕೆಳಗೆ ನಮೂದಿಸಿದ ಸಿಂಡಿಕೇಟ ಬ್ಯಾಂಕ್ ಶಾಖೆಗಳಲ್ಲಿ ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಪಡೆಯಬಹುದು.

| | | |
|---|---|---|
| ೧. | ಧಾರವಾಡ | ಕರ್ನಾಟಕ ವಿಶ್ವವಿದ್ಯಾಲಯ ಶಾಖೆ |
| ೨. | ಬೆಂಗಳೂರು | ಗಾಂಧಿನಗರ ಶಾಖೆ |
| ೩. | ಬೆಳಗಾವಿ | ಮಾರುತಿಗಲ್ಲಿ ಶಾಖೆ |
| ೪. | ಗುಲಬರ್ಗಾ | ಕೋಟೆ ರಸ್ತೆ ಶಾಖೆ |
| ೫. | ಮಂಗಳೂರು | ಹಂಪನಕಟ್ಟೆ ಶಾಖೆ |
| ೬. | ಬಳ್ಳಾರಿ | ಅಗಡಿ ಕಟ್ಟದ ಬೆಂಗಳೂರು ರಸ್ತೆ ಶಾಖೆ |
| ೭. | ಶಿವಮೊಗ್ಗ | ಗಾಂಧಿಬಜಾರ ರಸ್ತೆ ಶಾಖೆ |
| ೮. | ಉಡುಪಿ | ಸ್ಥಳೀಯ ಕಾರ್ಯಾಲಯ |
| ೯. | ವಿಜಾಪೂರ | ಬಸವೇಶ್ವರ ರೋಡ್ ಮೇನ್ ಶಾಖೆ |
| ೧೦. | ಚಿತ್ರದುರ್ಗ | ಮೇನ್ ಬ್ಯಾಂಚ್ |
| ೧೧. | ಕಾರವಾರ | ಮೇನ್ ಬ್ಯಾಂಚ್ ಸಿಂಡಿಕೇಟ್ ಬ್ಯಾಂಕ್ |
| ೧೨. | ಗದಗ | ಸಿಂಡಿಕೇಟ್ ಬ್ಯಾಂಕ್ |
| ೧೩. | ರಾಣೇಬೆನ್ನೂರು | ಸಿಂಡಿಕೇಟ್ ಬ್ಯಾಂಕ್ |
| ೧೪. | ಬಾಗಲಕೋಟೆ | ಸಿಂಡಿಕೇಟ್ ಬ್ಯಾಂಕ್ |

ಮೇಲೆ ನಮೂದಿಸಿದ ವಿವಿಧ ಪರೀಕ್ಷೆಯ ಪರಿಚಯ ಪುಸ್ತಕ (ಪ್ರಾಸ್ಪೆಕ್ಟಸ್)ಗಳು ಎಲ್ಲ ಸಿಂಡಿಕೇಟ್ ಬ್ಯಾಂಕುಗಳಲ್ಲಿ ರೂ. ೭೫.೦೦ಕ್ಕೆ ಹಾಗೂ ಅಂಚೆ ಮೂಲಕ ಪಡೆಯುವವರಿಗೆ ರೂ. ೯೫.೦೦ಕ್ಕೆ ಲಭಿಸುತ್ತವೆ.

ಅಂಚೆಯ ಮೂಲಕ ಪರಿಚಯ ಪುಸ್ತಕಗಳನ್ನು ಪಡೆಯಲಿಚ್ಛಿಸುವ ಅಭ್ಯರ್ಥಿಗಳು ಅರ್ಜಿಯಲ್ಲಿ ಯಾವ ಪದವಿಯ ಪರಿಯಚಯ ಪುಸ್ತಕ ಬೇಕಾಗಿದೆ ಎಂಬುದನ್ನು ನಮೂದಿಸಿ, ೯೫.೦೦ ರೂ. ಬ್ಯಾಂಕ್ ಹುಂಡಿಯನ್ನು (ಡಿ.ಡಿ.) ವಿತ್ತಾಧಿಕಾರಿಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರ ಹೆಸರಿನಲ್ಲಿ ತೆಗೆಯಿಸಿ, ಸ್ವವಿಳಾಸವಿರುವ (೯" ಮತ್ತು ೫") ಲಕೋಟೆಯೊಂದಿಗೆ ನಿಗದಿತ ಕೊನೆಯ ದಿನಾಂಕದೊಳಗೆ, ಉಪಕುಲಸಚಿವರು, ಬಾಹ್ಯ ಪರೀಕ್ಷಾ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩ ಇವರ ವಿಳಾಸಕ್ಕೆ ಕಳುಹಿಸತಕ್ಕದ್ದು. (ಸ್ನಾತಕೋತ್ತರ ಪರಿಚಯ ಪುಸ್ತಕ ಬೇಕಾದಲ್ಲಿ ಮೊದಲನೇ ಅಥವಾ ಎರಡನೇ ವರ್ಷದ ಜೊತೆಗೆ ವಿಷಯ ನಮೂದಿಸಿ ಪರಿಚಯ ಪುಸ್ತಕಕ್ಕಾಗಿ ಅರ್ಜಿ ಬರೆದುಕೊಳ್ಳಬೇಕು). ಹುಂಡಿಗಳು ಸ್ಟೇಟ್ ಬ್ಯಾಂಕ್, ಸಿಂಡಿಕೇಟ್ ಬ್ಯಾಂಕ್, ಕೆನರಾ ಬ್ಯಾಂಕ್ ಹಾಗೂ ಕರ್ನಾಟಕ ಬ್ಯಾಂಕ್‌ಗಳಿಂದ ಮಾತ್ರ ಖರೀದಿಸಿರಬೇಕು. ಅವುಗಳ ಹೊರತಾಗಿ ಬೇರೆ ಬ್ಯಾಂಕುಗಳಿಂದ ಖರೀದಿಸಿದ್ದರೆ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ನೋಂದಣಿಗಾಗಿ ಪರಿಶೀಲಿಸಲಾಗುವುದಿಲ್ಲ.

ಸಂಬಂಧಪಟ್ಟ ಪರೀಕ್ಷೆಗಳಿಗೆ ಸರಿಯಾಗಿ ಭರ್ತಿ ಮಾಡಿದ ಅರ್ಜಿಗಳನ್ನು ಕೆಳಗೆ ನಿಗದಿ ಪಡಿಸಿದ ಕೊನೆಯ ದಿನಾಂಕದೊಳಗಾಗಿ ಉಪ ಕುಲಸಚಿವರು, ಬಾಹ್ಯ ಪರೀಕ್ಷಾ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರಿಗೆ ತಲುಪುವಂತೆ ಕಳಿಸಬೇಕು.

**೧. ದಂಡ ರಹಿತ ನೋಂದಣಿ ಶುಲ್ಕಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ : ೧೦.೯.೯೭**

**೨. ೫೦ ರೂಪಾಯಿ ದಂಡದೊಂದಿಗೆ :**
**ದಿನಾಂಕ ೧೧.೯.೯೭ ರಿಂದ ೭.೧೦.೯೭ರ ವರೆಗೆ**

**೩. ೧೦೦ ರೂಪಾಯಿ ದಂಡದೊಂದಿಗೆ :**
**ದಿನಾಂಕ ೮.೧೦.೯೭ ರಿಂದ ೩೧.೧೦.೯೭ರವರೆಗೆ**

**ವಿಶ್ವವಿದ್ಯಾಲಯದ ಕಚೇರಿಯ ಕೆಲಸದ ವೇಳೆ ಈ ಕೆಳಗಿನಂತೆ ಇರುತ್ತದೆ.**

**ಸೋಮವಾರದಿಂದ ಶನಿವಾರದವರೆಗೆ ಮಂಗಳವಾರ ಹೊರತು ಪಡಿಸಿ ಬೆಳಿಗ್ಗೆ ೧೧ ಗಂಟೆಯಿಂದ ಸಂಜೆ ೬ ಗಂಟೆಯವರೆಗೆ.**

**ಮಂಗಳವಾರ ಬೆಳಿಗ್ಗೆ ೧೧ ಗಂಟೆಯಿಂದ ಮಧ್ಯಾಹ್ನ ೨.೩೦ ಗಂಟೆಯವರೆಗೆ ಮಾತ್ರ ಕೆಲಸ ನಿರ್ವಹಿಸಲಾಗುತ್ತದೆ.**

**ವಿಶೇಷ ಸೂಚನೆ**

**ಖಾಸಗಿ ಏಜೆಂಟರುಗಳ, ಟ್ಯುಟೋರಿಯಲ್‌ಗಳ ಮೂಲಕ ಕಳುಹಿಸಿದ ಅರ್ಜಿಗಳಿಗೆ ವಿದ್ಯಾರ್ಥಿಳಿಂದ ಯಾವುದೇ ತರಹದ ಆಕ್ಷೇಪಗಳು ಬಂದಲ್ಲಿ ವಿಶ್ವವಿದ್ಯಾಲಯವು ಹೊಣೆಯಾಗಲಾರದು.**

**- ಕುಲಸಚಿವರು.**

### ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

# ಬಾಹ್ಯ ವಿದ್ಯಾರ್ಥಿಗಳಿಗೆ ಸಪ್ಲಿಮೆಂಟರಿ ಪರೀಕ್ಷೆ

**ಬಾ**ಹ್ಯ ವಿದ್ಯಾರ್ಥಿಗಳ (ಪುರವಣಿ) ಪರೀಕ್ಷೆಗಳನ್ನು ಅಕ್ಟೋಬರ್/ನವೆಂಬರ್ ೧೯೯೭ರಲ್ಲಿ ನಡೆಸಲಾಗುವುದೆಂದು ಪ್ರಕಟಿಸಲಾಗಿದೆ. ಪುನಃ ಪರೀಕ್ಷೆಗೆ ಕೂಡ್ರಬಯಸುವ ನಪಾಸಾದ ಬಾಹ್ಯ ಪರೀಕ್ಷಾ ವಿದ್ಯಾರ್ಥಿಗಳು ಅರ್ಜಿ ಸಲ್ಲಿಸುವ ಮಾಹಿತಿಯನ್ನು ಈ ಕೆಳಗೆ ನಮೂದಿಸಲಾಗಿದೆ.

| ಪರೀಕ್ಷೆ | ಪರೀಕ್ಷಾ ಶುಲ್ಕ |
|---|---|
| ಬಿ.ಎ. ಭಾಗ-೧ | ರೂ. ೨೨೦-೦೦ |
| ಭಾಗ-೨ | (ಪ್ರತಿಯೊಂದು |
| ಭಾಗ-೩ (೩ ಸಮ ವಿಷಯಗಳು) | ಪೇಪರಿಗೆ ರೂ. ೬೫.೦೦ ಅತೀ ಹೆಚ್ಚು ರೂ. ೨೨೦-೦೦ ಮಾತ್ರ) |
| ಬಿ.ಕಾಂ. ಭಾಗ-೧ (ಹಳೆ ಪಠ್ಯಕ್ರಮ ೧೯೯೩-೯೪) | ರೂ. ೧೪೦-೦೦ (ಪ್ರತಿಯೊಂದು ಪೇಪರಿಗೆ |
| ಬಿ.ಕಾಂ. ಭಾಗ-೨ (ಹಳೆಯ ಪಠ್ಯ ಕ್ರಮ ೧೯೯೪-೯೫) | ರೂ. ೫೦-೦೦ ಅತಿ ಹೆಚ್ಚು ರೂ. ೧೪೦-೦೦ ಮಾತ್ರ) |
| ಬಿ.ಕಾಂ. ಭಾಗ-೩ (ಹಳೆಯ ಪಠ್ಯಕ್ರಮ ೧೯೯೫-೯೬) | |
| ಬಿ.ಕಾಂ. ಭಾಗ-೧ (ಹೊಸ ಏಕರೂಪ ಪಠ್ಯಕ್ರಮ) | ರೂ. ೨೪೦-೦೦ (ಪ್ರತಿಯೊಂದು ಪೇಪರಿಗೆ |
| ಬಿ.ಕಾಂ. ಭಾಗ-೨ (ಹೊಸ ಏಕರೂಪ ಪಠ್ಯಕ್ರಮ) | ರೂ. ೭೦-೦೦ ಅತಿ ಹೆಚ್ಚು ರೂ. ೨೪೦-೦೦ ಮಾತ್ರ) |
| ಬಿ.ಕಾಂ. ಭಾಗ-೩ (ಹೊಸ ಏಕರೂಪ ಪಠ್ಯಕ್ರಮ) | |

***ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ:***

**ದಂಡ ರಹಿತ** : ೧೮-೮-೯೭

**೨೫ ರೂ. ದಂಡದೊಂದಿಗೆ** : ೧೯-೮-೯೭ ರಿಂದ ೨೫-೮-೯೭

**೫೦ ರೂ. ದಂಡದೊಂದಿಗೆ** : ೨೬-೮-೯೭ ರಿಂದ ೧-೯-೯೭

**ಪರೀಕ್ಷೆ ಪ್ರಾರಂಭವಾಗುವ ದಿನಾಂಕ** : ೮-೧೦-೧೯೯೭

***ಸೂಚನೆ:***

೧. ಅಂಕಪಟ್ಟಿಯ ಸಲುವಾಗಿ ಪ್ರತಿಯೊಬ್ಬ ವಿದ್ಯಾರ್ಥಿ ರೂ. ೨೦-೦೦ನ್ನು ಪರೀಕ್ಷೆಯ ಶುಲ್ಕದ ಜೊತೆಗೆ ತುಂಬಬೇಕಾಗುವುದು.

೨. ಅಂಚೆಯ ವೆಚ್ಚದ ಸಲುವಾಗಿ ಪ್ರತಿಯೊಬ್ಬ ವಿದ್ಯಾರ್ಥಿ ರೂ. ೫-೦೦ ಕಳಿಸಿಕೊಡಬೇಕು.

೩. ಪರೀಕ್ಷೆಗಾಗಿ ಒಮ್ಮೆ ಆರಿಸಿಕೊಂಡ ಕೇಂದ್ರವನ್ನು ಯಾವುದೇ ಕಾರಣಕ್ಕಾಗಿ ಬದಲಾಯಿಸಲು ಅವಕಾಶವಿರುವುದಿಲ್ಲ.

೪. ಬಾಹ್ಯ ವಿದ್ಯಾರ್ಥಿಗಳು ನಿಗದಿಪಡಿಸಿದ ಪ್ರವೇಶ ಅರ್ಜಿಗಳನ್ನು ರೂ. ೨೫-೦೦ಕ್ಕೆ ಒಂದರಂತೆ ಸಹಾಯಕ ಕುಲಸಚಿವರು, ಬಾಹ್ಯ ಪರೀಕ್ಷಾ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರಿಂದ ಪಡೆಯಬೇಕು. ತಮಗೆ ಯಾವ ಪರೀಕ್ಷೆಯ ಅರ್ಜಿ ನಮೂನೆ ಬೇಕಾಗಿರುತ್ತದೆ ಎಂಬುದನ್ನು ತಮ್ಮ ಅರ್ಜಿಯಲ್ಲಿ ಸ್ಪಷ್ಟವಾಗಿ ತಿಳಿಸಬೇಕು ಹಾಗೂ ಪರೀಕ್ಷೆ ಅರ್ಜಿ ನಮೂನೆಗಳ ಶುಲ್ಕದ ಹುಂಡಿಯನ್ನು ವಿತ್ತಾಧಿಕಾರಿಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರಿಗೆ ಸಂದಾಯ ಆಗುವಂತೆ ತೆಗೆಯಿಸಿ ಲಗತ್ತಿಸಬೇಕು. (ಹುಂಡಿಯನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಸಿಂಡಿಕೇಟ್ ಬ್ಯಾಂಕ್, ಕರ್ನಾಟಕ ಬ್ಯಾಂಕ್, ಕೆನರಾ ಬ್ಯಾಂಕ್‌ನಲ್ಲಿ ಮಾತ್ರ ತೆಗೆಯಿಸಬೇಕು). ಅಲ್ಲದೆ ಜೊತೆಗೆ ತಮ್ಮ ಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ಬರೆದು ೯ ೧/೨'' x ೪ ೧/೨'' ಅಳತೆಯ ಲಕೋಟೆಗೆ ರೂ. ೨-೦೦ ಅಂಚೆ ಚೀಟಿ ಲಗತ್ತಿಸಿ ಕಳಿಸಬೇಕು.

೫. ಬಿ.ಎ. ಭಾಗ-೧, ೨, ೩, (೩ ಸಮ ವಿಷಯಗಳು) ಹಾಗೂ ಬಿ.ಕಾಂ. ಭಾಗ-೧, ೨, ೩ (ಹಳೆಯ ಮತ್ತು ಹೊಸ) ಪರೀಕ್ಷೆಗಳಿಗೆ ಏಕಕಾಲಕ್ಕೆ ಕೂಡ್ರುವ ಬಾಹ್ಯ ವಿದ್ಯಾರ್ಥಿಗಳು ಪರೀಕ್ಷಾ ಪ್ರವೇಶ ಅರ್ಜಿಗಳನ್ನು ಪ್ರತ್ಯೇಕವಾಗಿ ಸಲ್ಲಿಸತಕ್ಕದ್ದು ಹಾಗೂ ತಾವು ಒಂದಕ್ಕಿಂತ ಹೆಚ್ಚಿಗೆ ಪರೀಕ್ಷೆಗಳಿಗೆ ಕುಳಿತುಕೊಳ್ಳುವ ಪ್ರಸಂಗದಲ್ಲಿ ಪ್ರತಿ ಪರೀಕ್ಷೆಗೆ ಆರಿಸಿಕೊಂಡ ವಿಷಯಗಳ ಸವಿಸ್ತಾರ ಮಾಹಿತಿಯೊಂದಿಗೆ ಪ್ರತ್ಯೇಕ ಲಿಖಿತ ಅರ್ಜಿಯನ್ನು ರಿಜಿಸ್ಟರ್ಡ್ ಅಂಚೆ ಮೂಲಕ ಸಲ್ಲಿಸಬಹುದು. ●

## ಕಲಾ ವಿದ್ಯಾರ್ಥಿಗಳಿಗೆ ಶಿಷ್ಯ ವೇತನ

ಕರ್ನಾಟಕ ಲಲಿತಕಲಾ ಅಕಾಡೆಮಿಯು ೧೯೯೭-೯೮ನೇ ಸಾಲಿನಲ್ಲಿ ಹೊರ ರಾಜ್ಯಗಳಲ್ಲಿ ಲಲಿತಕಲಾ ಸ್ನಾತಕೋತ್ತರ ಡಿಪ್ಲೊಮಾ ಅಥವಾ ಸ್ನಾತಕೋತ್ತರ ಪದವಿ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ವಾರ್ಷಿಕ ತಲಾ ೫ ಸಾವಿರ ರೂಪಾಯಿ ಹಾಗೂ ರಾಜ್ಯದಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ರೂ. ೨.೫ ಸಾವಿರ ಶಿಷ್ಯ ವೇತನವನ್ನು ನೀಡಲಿದೆ.

ಶಿಷ್ಯ ವೇತನ ಪಡೆಯಲು ಅರ್ಜಿ ಸಲ್ಲಿಸಲು ಸೆಪ್ಟೆಂಬರ್ ೨೦ ಕಡೆಯ ದಿನವಾಗಿರುತ್ತದೆ. ವಿವರಗಳಿಗೆ ರಿಜಿಸ್ಟ್ರಾರ್, ಕರ್ನಾಟಕ ಲಲಿತಕಲಾ ಅಕಾಡೆಮಿ, ಸಂಖ್ಯೆ: ೧೪/೩, ಕೆನರಾ ಫೈನಾನ್ಸ್ ಕಟ್ಟಡ, ೨ನೇ ಮಹಡಿ, ನೃಪತುಂಗ ರಸ್ತೆ, ಬೆಂಗಳೂರು-೫೬೦ ೦೦೧ ಈ ವಿಳಾಸವನ್ನು ಸಂಪರ್ಕಿಸಬಹುದು.

## ಅರ್ಜಿ ಆಹ್ವಾನ

ರಾಜ್ಯ ವಾರ್ತಾ ಮತ್ತು ಪ್ರಚಾರ ಇಲಾಖೆಯು ದೂರದರ್ಶನದಲ್ಲಿ ಪ್ರಸಾರ ಮಾಡಲು ಪ್ರತಿ ವಾರ ನಿರ್ಮಿಸುತ್ತಿರುವ ಅವಲೋಕನ ಸಂಚಿಕೆಗಳನ್ನು ನಿರ್ದೇಶಿಸಲು ಅರ್ಹರಿಂದ ಅರ್ಜಿಗಳನ್ನು ಕರೆದಿದೆ.

ರಾಷ್ಟ್ರೀಯ ಮಾನ್ಯತೆ ಮತ್ತು ರಾಜ್ಯ ಮಟ್ಟದ ಪ್ರಶಸ್ತಿ ವಿಜೇತ ಸಾಕ್ಷ್ಯ ಚಿತ್ರ ನಿರ್ದೇಶಕರು. ಸರ್ಕಾರದ ಮಾನ್ಯತೆ ಪಡೆದ ಚಿತ್ರ ನಿರ್ಮಾಣ ಸಂಸ್ಥೆಗಳಿಂದ ಡಿಪ್ಲೊಮಾ ಪದವಿ ಪಡೆದಿರುವವರು ಹಾಗೂ ದೂರದರ್ಶನ ಅಥವಾ ಉಪಗ್ರಹ ಕೇಂದ್ರಗಳ ಮೂಲಕ ೫ ಕ್ಕೆ ಕಡಿಮೆ ಇಲ್ಲದಂತೆ ಧಾರಾವಾಹಿಗಳನ್ನು ನಿರ್ದೇಶನ ಮಾಡಿದವರಿಗೆ ಆದ್ಯತೆ ನೀಡಲಿದೆ.

ಆಸಕ್ತರು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಅವಲೋಕನ ವಿಭಾಗ, ಸಂಖ್ಯೆ - ೧೭, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು - ೫೬೦ ೦೦೧ ಇವರಿಗೆ ಆಗಸ್ಟ್ ೨೦ರೊಳಗೆ ಅರ್ಜಿ ಸಲ್ಲಿಸಬಹುದಾಗಿದೆ.

## ತಾಂತ್ರಿಕ ತರಬೇತಿ

ಸಣ್ಣ ಕೈಗಾರಿಕೆ ಸೇವಾ ಸಂಸ್ಥೆ, ಕೇಂದ್ರ ಕೈಗಾರಿಕಾ ಸಚಿವಾಲಯದ ಸಹಯೋಗ ದೊಂದಿಗೆ ವಿದ್ಯಾವಂತ ನಿರುದ್ಯೋಗಿಗಳಿಗಾಗಿ ೬ ತಿಂಗಳ ಯಂತ್ರಜ್ಞಾನ ತರಬೇತಿ ಕಾರ್ಯ ಕ್ರಮವನ್ನು ಸೆಪ್ಟೆಂಬರ್ ಒಂದರಿಂದ ಏರ್ಪಡಿಸ ಲಿದೆ.

ಎಸ್.ಎಸ್.ಎಲ್.ಸಿ ಪಾಸಾದ ೧೮-೩೫ ವಯೋಮಿತಿಯವರು ಅರ್ಜಿ ಸಲ್ಲಿಸಬಹುದಾ ಗಿದೆ. ಅಭ್ಯರ್ಥಿಗಳ ಆಯ್ಕೆಗಾಗಿ ಸಂದರ್ಶನವು ಆಗಸ್ಟ್ ೨೬ರಂದು ಬೆಳಿಗ್ಗೆ ೧೦.೩೦ಕ್ಕೆ ಸಣ್ಣ ಕೈಗಾರಿಕೆ ಸೇವಾ ಸಂಸ್ಥೆ, ರಾಜಾಜಿನಗರ, ಬೆಂಗಳೂರು-೫೬೦ ೦೪೪ ಇಲ್ಲಿ ನಡೆಯಲಿದ್ದು, ಆಸಕ್ತರು ತಮ್ಮ ಪ್ರಮಾಣ ಪತ್ರಗಳ ಮೂಲ ಪ್ರತಿಗಳೊಂದಿಗೆ ಹಾಜರಿರಬೇಕು.

## ವ್ಯಾಪಾರ ಮೇಳ

ದಕ್ಷಿಣ ಆಫ್ರಿಕಾದ ಜೊಹಾನ್ಸ್‌ಬರ್ಗ್‌ನಲ್ಲಿ ನಡೆಯಲಿರುವ ಸಿಟೆಕ್ಸ್-೯೭ ವ್ಯಾಪಾರ ಮೇಳದಲ್ಲಿ ಎಲೆಕ್ಟ್ರಾನಿಕ್, ಯಂತ್ರೋಪಕರಣ, ಸಂಸ್ಕರಣ ಯಂತ್ರ, ಜವಳಿ ಮುಂತಾದ ವಸ್ತುಗಳನ್ನು ಪ್ರದರ್ಶಿಸಲು ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ಸಂಸ್ಥೆಯು ಸಣ್ಣ ಕೈಗಾರಿಕೆಗಳನ್ನು ಆಹ್ವಾನಿಸಿದೆ.

ಸಣ್ಣ ಕೈಗಾರಿಕೆಗಳು ಉಚಿತವಾಗಿ ಈ ವ್ಯಾಪಾರ ಮೇಳದಲ್ಲಿ ಭಾಗವಹಿಸುವ ಅವಕಾಶವಿದ್ದು, ಆಸಕ್ತ ಉದ್ಯಮಿಗಳು ತಮ್ಮ ಸಂಪೂರ್ಣ ವಿವರಗಳನ್ನು, ಉಪನಿರ್ದೇಶಕರು, ಸಣ್ಣ ಕೈಗಾರಿಕೆ ಅಭಿವೃದ್ಧಿ ಸಂಸ್ಥೆ ರಾಜಾಜಿನಗರ, ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೪೪ (ದೂರವಾಣಿ ૩૩૫૧૮૪೯, ૩૩૫૧૫೩૭, ૩૩૫૧૫೩೩) ಇಲ್ಲಿಗೆ ಕಳುಹಿಸಬಹುದು.

## ಧನ ಸಹಾಯ

ಕನ್ನಡ ಅಭಿವೃದ್ಧಿ ಯೋಜನೆಯಡಿ ಪ್ರಸಕ್ತ ಸಾಲಿನಲ್ಲಿ ನಿರುದ್ಯೋಗಿ ಕನ್ನಡ ಬೆರಳಚ್ಚು ಗಾರರಿಗೆ ಜಾಬ್ ಟೈಪಿಂಗ್ ಮಾಡಲು ರೂ.೫೦೦೦ ಧನ ಸಹಾಯ ನೀಡಲಾಗುವುದು. ಅಭ್ಯರ್ಥಿಗಳು ಸೀನಿಯರ್ ಬೆರಳಚ್ಚು ಪರೀಕ್ಷೆಯಲ್ಲಿ ಹೆಚ್ಚು ಅಂಕ ಗಳಿಸಿದ ಅರ್ಹತೆಯ ಮೇಲೆ ಧನಸಹಾಯವನ್ನು ನೀಡಲಾಗುವುದು.

ಅರ್ಹ ವಿದ್ಯಾರ್ಥಿಗಳು ನಿಗದಿತ ಅರ್ಜಿ ನಮೂನೆಯಲ್ಲಿ ಆಗಸ್ಟ್ ೩೧ ರೊಳಗೆ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ನೃಪತುಂಗ ರಸ್ತೆ ಬೆಂಗಳೂರು - ೫೬೦ ೦೦೨ ಅಥವಾ ಆಯಾ ಜಿಲ್ಲೆಯ ಸಹಾಯಕ ನಿರ್ದೇಶಕರ ಕಚೇರಿಗಳಲ್ಲಿ ಅರ್ಜಿ ಸಲ್ಲಿಸಬಹುದು.

## ವಿದ್ಯಾರ್ಥಿ ವೇತನ

ಕುಂಚಟಿಗರ ಕ್ಷೇಮಾಭಿವೃದ್ಧಿ ಸಂಘವು ೧೯೯೭-೯೮ ಸಾಲಿಗೆ ಸೇರಿದ ಪಿಯುಸಿ, ಪದವಿ, ವೈದ್ಯಕೀಯ, ಕೃಷಿ, ವಿಜ್ಞಾನ ಮತ್ತು ಇತರ ತಾಂತ್ರಿಕ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಕುಂಚಿಟಿಗರ ಬಡ ಮತ್ತು ಪತಿಭಾವಂತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನು ನೀಡಲಿದೆ.

ಆಸಕ್ತ ವಿದ್ಯಾರ್ಥಿಗಳು ಸೆಪ್ಟಂಬರ್ ೩೦ ರೊಳಗೆ ಎಚ್.ಸಿ.ನಾಗಯ್ಯ, ರಾಜಮಹಲ್ ಪ್ರೌಢಶಾಲೆ, ನಾಗಶೆಟ್ಟಿಹಳ್ಳಿ, ಬೆಂಗಳೂರು - ೫೬೦ ೦೯೪ ಇವರಿಂದ ಅರ್ಜಿಗಳನ್ನು ಪಡೆಯಬಹುದಾಗಿದೆ.

## ವಿದ್ಯಾರ್ಥಿ ನಿಲಯ

ಕುರುಹಿನಶೆಟ್ಟಿ ಕೇಂದ್ರ ಸಂಘದ ವಿದ್ಯಾರ್ಥಿ ನಿಲಯದಲ್ಲಿ ೧೯೯೭-೯೮ನೇ ಸಾಲಿನಲ್ಲಿ ಪಿ.ಯು.ಸಿ. ಡಿಪ್ಲೊಮಾ, ಪದವಿ, ಸ್ನಾತಕೋತ್ತರ ಪದವಿ, ಬಿ.ಇ. ಮತ್ತು ಎಂ.ಬಿ.ಬಿ.ಎಸ್. ತರಗತಿಗಳಲ್ಲಿ ಅಭ್ಯಾಸ ಮಾಡಬೇಕೆಂದಿರುವ ವಿದ್ಯಾರ್ಥಿಗಳಿಗೆ ಸ್ಥಳಾವಕಾಶ ಪಡೆಯಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಆಸಕ್ತ ವಿದ್ಯಾರ್ಥಿಗಳು ಅರ್ಜಿಗಳನ್ನು ಸಂಸ್ಥೆಯ ಕಚೇರಿಯಲ್ಲಿ ಆಗಸ್ಟ್ ೨೦ರವರೆಗೆ ಪಡೆಯಬಹುದು. ಭರ್ತಿ ಮಾಡಿದ ಅರ್ಜಿ ಗಳನ್ನು ನಂ.೫, ಕುರುಹಿನಶೆಟ್ಟಿ ಕೇಂದ್ರ ಸಂಘದ ವಿದ್ಯಾರ್ಥಿ ನಿಲಯ, ಹೊಸ ಪ್ರೌಢಶಾಲೆ ರಸ್ತೆ, ವಿಶ್ವೇಶ್ವರಪುರ, ಬೆಂಗಳೂರು ಇಲ್ಲಿಗೆ ಆಗಸ್ಟ್ ೩೦ರ ಒಳಗೆ ಕಳುಹಿಸಲು ಪ್ರಕಟಣೆ ತಿಳಿಸಿದೆ.

## ಗುಟಕಾ

ಚೀಟು ಚೆಂದ ಕಂಡವಲ್ಲ
ನೋಟು ಒಂದೂ ಉಳಿಯಲಿಲ್ಲ
ಆಟವಾಡುವ ಮಕ್ಕಳೆಲ್ಲ
ಗುಟಕಾ ಬೇಡಿ ಅಳ್ತಾರಲ್ಲ

- ಶಾಂತ ಗಂಗಾಧರ ಮಹಾಸ್ವಾಮಿ
ಸಿಂದಗಿ

## ಕಾದಂಬರಿಗೆ ಪ್ರಶಸ್ತಿ

ಪುತ್ತೂರಿನ ಗೌರಿ-ಮಾಧವ ಚಾರಿಟೇಬಲ್ ಆಗಸ್ಟ್ ೧೯೯೭ನೇ ಸಾಲಿನ 'ಉಗ್ರಾಣ ಪ್ರಶಸ್ತಿ'ಗೆ ಕೃತಿಗಳನ್ನು ಆಹ್ವಾನಿಸಿದೆ. ೧೯೯೧-೯೬ರ ನಡುವೆ ಪ್ರಥಮ ಆವೃತ್ತಿಯಾಗಿ ಪ್ರಕಟವಾದ ಅತ್ಯುತ್ತಮ ಕನ್ನಡ ಕಾದಂಬರಿಗೆ ಪ್ರಶಸ್ತಿಯನ್ನು ಕೊಡಲಾಗುವುದು.

ಪ್ರಶಸ್ತಿಯು ರೂ. ೫೦೦೫ ನಗದು ಹಾಗೂ ಪ್ರಶಸ್ತಿ ಫಲಕವನ್ನು ಒಳಗೊಂಡಿರುತ್ತದೆ. ಆಸಕ್ತರು ಪುಸ್ತಕದ ಮೂರು ಪ್ರತಿಗಳನ್ನು ಸೆಪ್ಟೆಂಬರ್ ೩೦ರೊಳಗೆ ಬೋಳಂತಕೋಡಿ ಈಶ್ವರ ಭಟ್ಟ, ಅಧ್ಯಕ್ಷ, ಕರ್ನಾಟಕ ಸಂಘ, ಪುತ್ತೂರು, ದಕ್ಷಿಣ ಕನ್ನಡ-೫೭೪ ೨೦೨ ಈ ವಿಳಾಸಕ್ಕೆ ಕಳುಹಿಸಿ ಕೊಡಬೇಕಾಗಿ ವಿನಂತಿಸಲಾಗಿದೆ.

# ಸಿ.ಎ. ವಿದ್ಯಾರ್ಥಿಗಳೇ ಪರೀಕ್ಷೆಗೆ ಅರ್ಜಿ ಸಲ್ಲಿಸಿ

**ಸಿ.**ಎ. ಫೌಂಡೇಶನ್, ಇಂಟರ್‌ಮೀಡಿಯೆಟ್ ಮತ್ತು ಅಂತಿಮ ಪರೀಕ್ಷೆಗಳಿಗೆ ನಿಗದಿಪಡಿಸಿದ ನಮೂನೆಯಲ್ಲಿ ಅರ್ಜಿ ಕರೆಯಲಾಗಿದೆ. ಸಂಸ್ಥೆಯ ಮುಂದಿನ ಇಂಟರ್‌ಮೀಡಿಯೇಟ್ ಮತ್ತು ಅಂತಿಮ ಪರೀಕ್ಷೆಗಳು ೧ ನವೆಂಬರ್ ೧೯೯೭ರಿಂದ ಪ್ರಾರಂಭವಾಗುತ್ತವೆ.

**ಕರ್ನಾಟಕದ ಅಭ್ಯರ್ಥಿಗಳಿಗೆ ಅನುಕೂಲವಾಗುವ ಪರೀಕ್ಷಾ ಕೇಂದ್ರಗಳು :**

ಬೆಂಗಳೂರು, ಬೆಳಗಾವಿ, ಹೈದರಾಬಾದ್, ಮಂಗಳೂರು, ಮೈಸೂರು, ಪುಣೆ. ಈ ಪರೀಕ್ಷೆಗಳೊಂದಿಗೆ ಫೌಂಡೇಶನ್ ಪರೀಕ್ಷೆ ಕೂಡ ಮೇಲಿನ ಕೇಂದ್ರಗಳಲ್ಲಿ ೬ ನವೆಂಬರ್ ೧೯೯೭ರಿಂದ ನಡೆಯಲಿದೆ.

ಅರ್ಜಿ ನಮೂನೆಯ ಬೆಲೆ ರೂ. ೧೫. ಅಂಚೆ ಮೂಲಕ ಅರ್ಜಿ ತರಿಸಿಕೊಳ್ಳಬಯಸುವ ಅಭ್ಯರ್ಥಿಗಳು ಸೆಕ್ರೆಟರಿ, ದಿ ಇನ್‌ಸ್ಟಿಟ್ಯೂಟ್ **ಆಫ್ ಚಾರ್ಟರ್ಡ್ ಅಕೌಂಟೆಂಟ್ಸ್ ಆಫ್ ಇಂಡಿಯಾ** ಹೆಸರಿನಲ್ಲಿ ದೆಹಲಿಯಲ್ಲಿ ಸಂದಾಯವಾಗುವಂತೆ ೧೫ ರೂ.ಗಳನ್ನು ಡಿ.ಡಿ. ಅಥವಾ ಪೋಸ್ಟಲ್ ಆರ್ಡರ್ ಮೂಲಕ ಕಳಿಸಿ ಅರ್ಜಿ ಪಡೆಯಬಹುದು. ಅರ್ಜಿಯೊಂದಿಗೆ ೨೭.೫ ಸೆ.ಮೀ. x ೧೨.೫ ಸೆ.ಮೀ. ಅಳತೆಯ ಸ್ವವಿಳಾಸದ ಲಕೋಟೆ ಕಳಿಸಬೇಕು.

**ವಿಳಾಸ :** Additional Secretary (Examinations), The Institute of Chartered Accountants of India, Indraprastha Marg, New Delhi-110 002.

ಸಂಸ್ಥೆಯ ಬೆಂಗಳೂರು ಕಛೇರಿಯಲ್ಲಿ ನಗದು ಹಣ ಪಾವತಿ ಮಾಡಿಯೂ ಅರ್ಜಿ ಪಡೆಯಬಹುದು. ಪರೀಕ್ಷೆಯ ವೇಳಾಪಟ್ಟಿಯ ವಿವರಗಳನ್ನು ಸಂಬಂಧಿಸಿದ ಅರ್ಜಿ ನಮೂನೆಗಳಲ್ಲಿ ಮುದ್ರಿಸಲಾಗಿದೆ. ಮೇಲೆ ನಮೂದಿಸಿದ ಕೇಂದ್ರಗಳಲ್ಲಿ ೧ ನವೆಂಬರ್ ೧೯೯೭ರಿಂದ ಮ್ಯಾನೇಜ್‌ಮೆಂಟ್ ಅಕೌಂಟೆನ್ಸಿ ಕೋರ್ಸ್ (ಭಾಗ-I) ಪರೀಕ್ಷೆಯು ನಡೆಯಲಿದೆ. ಅರ್ಜಿ ನಮೂನೆಗಳಿಗಾಗಿ ಸೆಕ್ರೆಟರಿ, ಐ.ಸಿ.ಎ.ಐ., ನವದೆಹಲಿ ಹೆಸರಿಗೆ ೧೫ ರೂಪಾಯಿ ಪೋಸ್ಟಲ್ ಆರ್ಡರ್ ಅಥವಾ ಡಿ.ಡಿ. ಯನ್ನು ಕಳಿಸಬೇಕಾದ ವಿಳಾಸ : Director, CPE Directorate, ICAI, New Delhi.

ಮ್ಯಾನೇಜ್‌ಮೆಂಟ್ ಅಕೌಂಟೆನ್ಸಿ ಕೋರ್ಸ್ (ಭಾಗ-೧), ಅಂತಿಮ ಹಾಗೂ ಫೌಂಡೇಶನ್ ಕೋರ್ಸುಗಳಿಗೆ ಬೆಳಿಗ್ಗೆ ೮ ರಿಂದ ೧೧ ಗಂಟೆಯವರೆಗೆ ಪರೀಕ್ಷೆ ನಡೆಯಲಿದೆ.

ಇಂಟರ್‌ಮೀಡಿಯೇಟ್ ಪರೀಕ್ಷೆಗೆ ಮಧ್ಯಾಹ್ನ ೧೨.೩೦ ರಿಂದ ೩.೩೦ರ ವರೆಗೆ ಪರೀಕ್ಷೆ ನಡೆಯಲಿದೆ.

**ಅರ್ಜಿ ಸ್ವೀಕರಿಸಲು ಅಂತಿಮ ದಿನ :**

**ದಂಡ ರಹಿತ : ೨೬-೮-೧೯೯೭**

**೫೦ ರೂ. ವಿಳಂಬ ಶುಲ್ಕದೊಂದಿಗೆ :**

**೨-೯-೧೯೯೭**

ಮ್ಯಾನೇಜ್‌ಮೆಂಟ್ ಅಕೌಂಟೆನ್ಸಿ ಕೋರ್ಸ್ (ಭಾಗ-I) ಪರೀಕ್ಷೆಯನ್ನು ಸಂಸ್ಥೆಯ ಸದಸ್ಯರು ಮಾತ್ರ ತೆಗೆದುಕೊಳ್ಳಬಹುದು.

ಇನ್‌ಸ್ಟಿಟ್ಯೂಟ್ ಆಫ್ ಚಾರ್ಟರ್ಡ್ ಅಕೌಂಟೆಂಟ್ಸ್ ಆಫ್ ಇಂಡಿಯಾದಲ್ಲಿ ಈಗಾಗಲೇ ನೋಂದಾಯಿಸಿಕೊಂಡು ಅಗತ್ಯ ನಿಬಂಧನೆಗಳನ್ನು ಪೂರೈಸಿದವರು ಮಾತ್ರ ಫೌಂಡೇಶನ್ ಪರೀಕ್ಷೆ ತೆಗೆದುಕೊಳ್ಳಬಹುದು.

# ವಿಭಾಗಾಧಿಕಾರಿಗಳ ನೇಮಕಾತಿ

**ಕಂ**ಟ್ರೋಲರ್ ಮತ್ತು ಆಡಿಟ್ ಜನರಲ್ ಆಫ್ ಇಂಡಿಯಾದ ವಿವಿಧ ಇಲಾಖೆಗಳಲ್ಲಿ ವಿಭಾಗಾಧಿಕಾರಿ (ಆಡಿಟ್) ಗಳ ೨೩೦ ಹುದ್ದೆ ಭರ್ತಿಗೆ ಸಿಬ್ಬಂದಿ ಆಯ್ಕೆ ಆಯೋಗವು ೧೯೯೭ರ ನವಂಬರ್ ೧೬ರಂದು ಪರೀಕ್ಷೆ ನಡೆಸಲಿದೆ.

***ಶೈಕ್ಷಣಿಕ ಅರ್ಹತೆ*** : ಶೇಕಡ ೫೦ ಅಂಕಗಳೊಂದಿಗೆ ಪದವಿ.

***ವಯೋಮಿತಿ*** : ೧-೮-೧೯೯೭ಕ್ಕೆ ೧೮ ರಿಂದ ೨೫ ವರ್ಷದೊಳಗಿರಬೇಕು. (ಅಂದರೆ ೨-೮-೧೯೭೨ಕ್ಕಿಂತ ಮುಂಚೆ ಮತ್ತು ೧-೮-೧೯೭೯ರ ನಂತರ ಜನಿಸಿರಬಾರದು)

***ಶುಲ್ಕ*** : ರೂ. ೫೦. ಸೆಂಟ್ರಲ್ ರೆಕ್ರೂಟ್‌ಮೆಂಟ್ ಫೀ ಸ್ಟಾಂಪ್ಸ್ ಅಥವಾ ಇಂಡಿಯನ್ ಪೋಸ್ಟ್‌ಲ್‌ಆರ್ಡರ್ ಮೂಲಕ ಶುಲ್ಕ ಸಂದಾಯ ಮಾಡಬಹುದು.

***ಪರೀಕ್ಷಾ ಕೇಂದ್ರಗಳು*** : ದೇಶದಾದ್ಯಂತ ೨೨ ಕೇಂದ್ರಗಳಿವೆ.

***ಅರ್ಜಿ ಸಲ್ಲಿಸುವ ಬಗೆ:*** ಕರ್ನಾಟಕ ಹಾಗೂ ಕೇರಳದ ಅಭ್ಯರ್ಥಿಗಳು ಈ ಕೆಳಗಿನ ವಿಳಾಸಕ್ಕೆ ಅರ್ಜಿ ಸಲ್ಲಿಸಬೇಕು.

ಉಪನಿರ್ದೇಶಕರು,
ಸಿಬ್ಬಂದಿ ಆಯ್ಕೆ ಆಯೋಗ
ಒಂದನೇ ಮಹಡಿ, 'ಇ' ವಿಂಗ್,
ಕೇಂದ್ರೀಯ ಸದನ, ಕೋರಮಂಗಲ,
ಬೆಂಗಳೂರು - ೫೬೦ ೦೩೪.

**ಪರೀಕ್ಷೆಯ ವಿವರ :**

| ಪೇಪರ್ | ಪರೀಕ್ಷೆ ಹೆಸರು | ಅಂಕಗಳು | ಅವಧಿ ಮತ್ತು ವೇಳೆ |
|---|---|---|---|
| ಪೇಪರ್-೧ | ಭಾಗ-ಎ : ಇಂಗ್ಲಿಷ್ ಭಾಷೆ | ೧೦೦ | ೨ ಗಂಟೆ ಬೆಳಿಗ್ಗೆ ೧೦ ರಿಂದ ೧೨ |
| | ಭಾಗ-ಬಿ : ಜನರಲ್ ಅವೇರ್‌ನೆಸ್ | ೧೦೦ | |
| ಪೇಪರ್-೨ | ಅಂಕಗಣಿತ | ೧೦೦ | ೨ ಗಂಟೆ ಮಧ್ಯಾಹ್ನ ೧.೩೦ ರಿಂದ ೩.೩೦ |

***ಅಂತಿಮ ದಿನಾಂಕ:*** ೧೮-೮-೧೯೯೭

ಹೆಚ್ಚಿನ ವಿವರಗಳಿಗೆ ದಿನಾಂಕ ೧೯-೭-೧೯೯೭ರ ಎಂಪ್ಲಾಯ್‌ಮೆಂಟ್ ನ್ಯೂಸ್ ಪತ್ರಿಕೆಯನ್ನು ನೋಡಬಹುದು.

# ಬೆಂಗಳೂರು ವಿಶ್ವವಿದ್ಯಾಲಯ ಅಂಚೆ ಶಿಕ್ಷಣಕ್ಕೆ ಅರ್ಜಿ ಸಲ್ಲಿಸುವ ಅವಕಾಶ

| | | ಅರ್ಹತೆ |
|---|---|---|
| **೧. ಮುಕ್ತ ವಿಶ್ವವಿದ್ಯಾಲಯ** | | |
| ಬಿ.ಎ./ ಬಿ.ಕಾಂ. | (೩ ವರ್ಷ) | ೧-೭-೧೯೯೭ಕ್ಕೆ ೨೧ ವರ್ಷ ವಯಸ್ಸಾದವರು. |
| ಎಂ.ಎ. ಕನ್ನಡ, ಇಂಗ್ಲಿಷ್, ಚರಿತ್ರೆ, ಅರ್ಥಶಾಸ್ತ್ರ, ಸಮಾಜಶಾಸ್ತ್ರ, ರಾಜ್ಯಶಾಸ್ತ್ರ ಹಿಂದಿ, ತತ್ವಶಾಸ್ತ್ರ ಮತ್ತು ಉರ್ದು | (೨ ವರ್ಷ) | ೧-೭-೧೯೯೭ಕ್ಕೆ ೨೫ ವರ್ಷ ವಯಸ್ಸಾದವರು |
| ಎಂ.ಕಾಂ | (೨ ವರ್ಷ) | ೧-೭-೧೯೯೭ಕ್ಕೆ ೨೫ ವರ್ಷ ವಯಸ್ಸಾದವರು. |
| **೨. ಅಂಚೆ ಕೋರ್ಸುಗಳು** | | |
| ಬಿ.ಎ., ಬಿ.ಕಾಂ., ಬಿ.ಬಿ.ಎಂ. | (೩ ವರ್ಷ) | ಪಿ.ಯು.ಸಿ. ಅಥವಾ ಸಮಾನಾಂತರ ಪರೀಕ್ಷೆ ಪಾಸಾಗಿರಬೇಕು. |
| ಬಿ.ಇಡಿ. | (೨ ವರ್ಷ) | ಬೆಂಗಳೂರು ವಿ.ವಿ. ವ್ಯಾಪ್ತಿಯಲ್ಲಿನ ಯಾವುದಾದರೂ ಮಾನ್ಯತೆ ಪಡೆದ ಶಾಲೆಗಳಲ್ಲಿ ಮೂರು ವರ್ಷ ಅನುಭವವುಳ್ಳ ಬಿ.ಎ./ಬಿ.ಎಸ್ಸಿ. ಪದವಿ ಹೊಂದಿದ ಸೇವಾ ನಿರತ ಶಿಕ್ಷಕರು. |
| ಎಂ.ಎ. ಕನ್ನಡ, ಇಂಗ್ಲಿಷ್, ಹಿಂದಿ, ಉರ್ದು | (೨ ವರ್ಷ) | ಬಿ.ಎ./ಬಿ.ಎಸ್ಸಿ., ಬಿ.ಕಾಂ. ಪದವಿ. ಸಂಬಂಧಿಸಿದ ಭಾಷೆಯಲ್ಲಿ ಶೇಕಡ ೫೫ ಅಂಕ ಗಳಿಸಿರಬೇಕು. |
| ಎಂ.ಎ. ಚರಿತ್ರೆ, ಅರ್ಥಶಾಸ್ತ್ರ ಸಮಾಜಶಾಸ್ತ್ರ ರಾಜ್ಯಶಾಸ್ತ್ರ, ತತ್ವಶಾಸ್ತ್ರ | (೨ ವರ್ಷ) | ಬಿ.ಎ./ಬಿ.ಎಸ್ಸಿ., ಬಿ.ಕಾಂ. ಪದವಿ. ಐಚ್ಛಿಕ ವಿಷಯಗಳಲ್ಲಿ ಒಟ್ಟಾರೆ ಶೇಕಡ ೪೦ ಅಂಕ ಮತ್ತು ಸಂಬಂಧಿಸಿದ ಕೋರ್ಸಿನ ಐಚ್ಛಿಕ ಅಥವಾ ಮೇಜರ್ ವಿಷಯಗಳಲ್ಲಿ ಕೊನೇ ಪಕ್ಷ ಶೇಕಡ ೫೦ ಅಂಕಗಳು. |
| ಎಂ.ಕಾಂ. | (೨ ವರ್ಷ) | ಬಿ.ಕಾಂ. ಪದವಿಯ ಎಲ್ಲ ವಾಣಿಜ್ಯ ವಿಷಯಗಳಲ್ಲಿ, ಪದವಿಯ ಎಲ್ಲಾ ಪರೀಕ್ಷೆಗಳಲ್ಲಿ ಒಟ್ಟಾರೆ ಶೇಕಡ ೫೦ಕ್ಕಿಂತ ಕಡಿಮೆ ಅಂಕಗಳಿಲ್ಲದೆ ಬಿ.ಕಾಂ. ಪದವಿ ಪಾಸಾಗಿರಬೇಕು. |
| **೨. ಸ್ನಾತಕೋತ್ತರ ಡಿಪ್ಲೊಮಾಗಳು** | | |
| ಕಾರ್ಮಿಕ ಕಾನೂನು, ತೆರಿಗೆ ಕಾನೂನು, ಸಿಬ್ಬಂದಿ ನಿರ್ವಹಣೆ, ವಾಣಿಜ್ಯ ಆಡಳಿತ, ಮಾರುಕಟ್ಟೆ ನಿರ್ವಹಣೆ, | (೧ ವರ್ಷ) | ಯಾವುದೇ ಪದವಿ. |
| ಹಿಂದಿಯಲ್ಲಿ ತರ್ಜುಮೆ | (೧ ವರ್ಷ) | ಪದವಿ ಹಂತವಲ್ಲಿ ಹಿಂದಿ ವಿಷಯ ತೆಗೆದುಕೊಂಡು ಯಾವುದಾದರೂ ಪದವಿ. ಪಾಸಾಗಿರಬೇಕು ಅಥವಾ ಆರ್.ಬಿ. ವಿಶಾರದದೊಂದಿಗೆ ಪದವಿ. |
| ಫಂಕ್ಷನಲ್ ಹಿಂದಿ | (೧ ವರ್ಷ) | ಪದವಿ ಹಂತದಲ್ಲಿ ಹಿಂದಿ ವಿಷಯ ತೆಗೆದುಕೊಂಡು ಯಾವುದಾದರೂ ಪದವಿ ಪಾಸಾಗಿರಬೇಕು ಅಥವಾ ಆರ್.ಬಿ. ವಿಶಾರದದೊಂದಿಗೆ ಪದವಿ. |
| **೩. ಬಾಹ್ಯ ಕೋರ್ಸುಗಳು** | | |
| ಎಂ.ಎ. ಸಂಸ್ಕೃತ, ತೆಲುಗು | (೧ ವರ್ಷ) | ಬಿ.ಎ./ಬಿ.ಎಸ್ಸಿ./ ಬಿ.ಕಾಂ. ಪದವಿ. ಸಂಬಂಧಿಸಿದ ಭಾಷೆಯಲ್ಲಿ ಶೇಕಡ ೫೫ ಅಂಕಗಳು. |
| ಎಂ.ಎಸ್ಸಿ. ಗಣಿತ | (೨ ವರ್ಷ) | ಐಚ್ಛಿಕ ವಿಷಯಗಳಲ್ಲಿ ಒಟ್ಟಾರೆ ಶೇಕಡ ೪೦ ಅಂಕಗಳೊಂದಿಗೆ ಬಿ.ಎಸ್ಸಿ. ಪದವಿ ಮತ್ತು ಗಣಿತದಲ್ಲಿ ಶೇಕಡ ೫೦ ಅಂಕಗಳು. (ಗಣಿತವನ್ನು ಮೈನರ್ ಅಥವಾ ಐಚ್ಛಿಕ ವಿಷಯವನ್ನಾಗಿ ಪಡೆದ ವಿದ್ಯಾರ್ಥಿಗಳು ಅರ್ಹರಲ್ಲ) |
| **೪. ಸರ್ಟಿಫಿಕೇಟ್ ಕೋರ್ಸು** | | |
| ಕನ್ನಡ | (೧ ವರ್ಷ) | ಎಸ್.ಎಸ್.ಎಲ್.ಸಿ. ಪಾಸಾಗಿರಬೇಕು. |

## ಅರ್ಜಿ ಶುಲ್ಕ

| | |
|---|---|
| ಬಿ.ಎ./ಬಿ.ಕಾಂ. (ಅಂಚೆ ಶಿಕ್ಷಣ) | ರೂ. ೫೦/- |
| ಬಿ.ಬಿ.ಎಂ./ಬಿ.ಇ.ಡಿ./ (ಅಂಚೆ ಶಿಕ್ಷಣ) | ರೂ. ೧೦೦/- |
| ಎಂ.ಎ./ಎಂ.ಎಸ್ಸಿ./ಎಂ.ಕಾಂ. (ಅಂಚೆ ಶಿಕ್ಷಣ/ಬಾಹ್ಯ) | ರೂ. ೨೦೦/- |
| ಬಿ.ಎ./ಬಿ.ಕಾಂ. (ಮುಕ್ತ ವಿ.ವಿ.) | ರೂ. ೧೦೦/- |
| ಎಂ.ಎ./ಎಂ.ಕಾಂ. (ಮುಕ್ತ ವಿ.ವಿ.) | ರೂ. ೨೦೦/- |
| ಸ್ನಾತಕೋತ್ತರ ಡಿಪ್ಲೊಮಾ | ರೂ. ೨೦೦/- |
| ಸರ್ಟಿಫಿಕೇಟ್ ಕೋರ್ಸ್ | ರೂ. ೫೦/- |

ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಅವಿನ್ಯೂ ರಸ್ತೆ ಶಾಖೆ, ಬೆಂಗಳೂರು ಇಲ್ಲಿ ಸಂದಾಯವಾಗುವಂತೆ ಫೈನಾನ್ಸ್ ಆಫೀಸರ್, ಬೆಂಗಳೂರು ವಿ.ವಿ., ಬೆಂಗಳೂರು. ಈ ಹೆಸರಿನಲ್ಲಿ ತೆಗೆಸಿದ ಡಿ.ಡಿ.ಯನ್ನು ಸಲ್ಲಿಸಿ ಅರ್ಜಿ-ವಿವರ ಪಡೆಯಬಹುದು.

**ವಿಳಾಸ :** ನಿರ್ದೇಶಕರು, ಕರಸ್ಪಾಂಡೆನ್ಸ್ ಕೋರ್ಸುಗಳು ಮತ್ತು ಡಿಸ್ಟೆನ್ಸ್ ಎಜುಕೇಶನ್, ಸೆಂಟ್ರಲ್ ಕಾಲೇಜು, ಬೆಂಗಳೂರು-೫೬೦ ೦೦೧.

**ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ :**
ದಂಡವಿಲ್ಲದೆ ೧-೮-೧೯೯೭ ರಿಂದ ೧೮-೮-೯೭,
೨೫ ರೂ. ದಂಡ ಶುಲ್ಕದೊಂದಿಗೆ ೧೯-೮-೯೭ರಿಂದ ೨೫-೮-೯೭,
೫೦ ರೂ. ವಿಶೇಷ ದಂಡದೊಂದಿಗೆ ೨೬-೮-೯೭ ರಿಂದ ೧-೯-೯೭

ಆರ್.ಪಿ. ಚೆನ್ನಗೇರಿ

**ಮಾನ್ಯರೇ, ನಾನು ಪದವಿ ಮುಗಿಸಿದ್ದು ಶೇ. ೪೭ರಷ್ಟು ಅಂಕಗಳೊಂದಿಗೆ ತೇರ್ಗಡೆಯಾಗಿ ಮುಂದೆ ನಾನು ಬಿ.ಎಡ್. ಕೋರ್ಸ್ ಮಾಡಬೇಕೆಂದಿದ್ದೇನೆ. ಇದನ್ನು ಅಂಚೆ ತೆರಪಿನ ಮೂಲಕ ಮಾಡಬಹುದೆ. ನಾನು ಜಾತಿಯಂದ ಎಸ್.ಸಿ.ಆಗಿದ್ದು, ಮುಂದೆ ನಾನು ಏನು ಮಾಡಬೇಕೆಂಬುದರ ಬಗ್ಗೆ ದಯವಿಟ್ಟು ತಿಳಿಸಿ.**

ನೀವು ಅಗತ್ಯವಾಗಿ ಪದವಿ ಆಧಾರದ ಮೇಲೆ ಬಿ.ಎಡ್. ಪದವಿಯನ್ನು ಅಂಚೆ ತೆರಪಿನ ಶಿಕ್ಷಣದ ಮೂಲಕ ಮುಂದುವರಿಸಬಹುದು. ಈ ಕೋರ್ಸ್ ಒಂದು ವರ್ಷದ ಅವಧಿಯದಾಗಿರುತ್ತದೆ. ನೀವು ವಿವರಿಗಳಿಗಾಗಿ ಇನ್‌ಸ್ಟಿಟ್ಯುಟ್ ಆಫ್ ಕರೆಸ್ಪಾಂಡೆನ್ಸ್ ಕೋರ್ಸಸ್ ಅಂಡ್ ಕಂಟಿನ್ಯುಯಿಂಗ್ ಎಜುಕೇಷನ್, ಕರ್ನಾಟಕ ಮುಕ್ತ ವಿಶ್ವವಿದ್ಯಾಲಯ, ಅಣ್ಣಾಮಲೈನಗರ-೬೦೮ ೦೦೨ ಇವರನ್ನು ಸಂಪರ್ಕಿಸಿರಿ.

ಶಿವಕುಮಾರ್ ಎಸ್. ಜವಳಿ

**ಸರ್, ನಾನು ಪಿ.ಯು.ಸಿ. ಮೊದಲನೆ ವಿಭಾಗದಲ್ಲಿ ವ್ಯಾಸಂಗ ಮಾಡಿದ್ದೇನೆ. ಮುಂದೆ ನಾನು ನೇರವಾಗಿ ಎರಡನೆ ಪಿ.ಯು.ಸಿ. ಪರೀಕ್ಷೆಯನ್ನು ಖಾಸಗಿಯಾಗಿ ಕುಳಿತು ಬರೆಯಬಹುದೆ. ಇದಕ್ಕೆ ಯಾರನ್ನು ಸಂಪರ್ಕಿಸಬೇಕು. ಇದಕ್ಕೆ ಮಾನ್ಯತೆ ಇದೆಯೆ? ದಯಮಾಡಿ ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿ.**

ನೀವು ಯಾವುದೇ ಆಧಾರವಿಲ್ಲದೆ ನೇರವಾಗಿ ವಯಸ್ಸಿನ ಆಧಾರದ ಮೇಲೆ ಪಿ.ಯು.ಸಿ. ಎರಡನೆಯ ಪರೀಕ್ಷೆಯನ್ನು ಬರೆಯಬಹುದು. ವಯಸ್ಸು ೧೯ ಆಗಿರಬೇಕು. ಈ ಕುರಿತಾಗಿ ಆಗಸ್ಟ್-ಸೆಪ್ಟಂಬರ್ ತಿಂಗಳಲ್ಲಿ ಪತ್ರಿಕೆಗಳಲ್ಲಿ ಜಾಹೀರಾತು ನೀಡಲಾಗುವುದು. ಇಲ್ಲವೆ ನಿಮ್ಮ ಹತ್ತಿರದ ಯಾವುದೇ ಸರಕಾರಿ ಪದವಿ ಪೂರ್ವ ಕಾಲೇಜನ್ನು ಸಂಪರ್ಕಿಸಬಹುದು. ಇದರ ಆಧಾರದ ಮೇಲೆ ನೀವು ಮುಂದೆ ಪದವಿಯನ್ನು ಕೂಡಾ ಮಾಡಬಹುದು. ಇದಕ್ಕೆ ಕೂಡಾ ಮಾನ್ಯತೆ ಇರುತ್ತದೆ. ಈ ಬಗ್ಗೆ ಯಾವ ರೀತಿಯ ಸಂದೇಹ ಬೇಡ.



# ಮಾರ್ಗದರ್ಶಿ

○ ಡಾ. ಎಸ್.ಸಿ. ಶರ್ಮಾ
ಪ್ರಾಧ್ಯಾಪಕರು
ಆರ್.ವಿ. ಇಂಜಿನಿಯರಿಂಗ್ ಕಾಲೇಜು,
ಮೈಸೂರು ರಸ್ತೆ, ಬೆಂಗಳೂರು - ೫೬೦ ೦೫೯

ಶ್ರೀನಿವಾಸ, ದೇವದುರ್ಗ

**ಸರ್, ನಾನು ಬಿ.ಕಾಂ. ಪದವೀಧರನಾಗಿದ್ದು, ಮುಂದೆ ನಾನು ಎಂ.ಬಿ.ಎ. ಮಾಡಲು ಇಚ್ಛಿಸುತ್ತೇನೆ. ಅದರ ವಿವರಗಳನ್ನು ಹಾಗೂ ವಿಳಾಸವನ್ನು ದಯಮಾಡಿ ತಿಳಿಸಬೇಕಾಗಿ ತಮ್ಮಲ್ಲಿ ಕೇಳಿಕೊಳ್ಳುತ್ತೇನೆ**

ನೀವು ಅಗತ್ಯವಾಗಿ ಎಂ.ಬಿ.ಎ. (M.B.A.) ಕೋರ್ಸನ್ನು ಮಾಡಬಹುದು. ಇದಕ್ಕಾಗಿ ನೀವು ಖಾಸಗಿ ವಿದ್ಯಾಸಂಸ್ಥೆಗಳು ಹಾಗೂ ವಿಶ್ವವಿದ್ಯಾಲಯಗಳು ನಡೆಸುವ ಲಿಖಿತ ಪ್ರವೇಶ ಪರೀಕ್ಷೆಯನ್ನು ಬರೆಯಬೇಕಾಗುವುದು. ಇದು ಎರಡು ವರ್ಷಗಳ ಪೋಸ್ಟ್ ಗ್ರಾಜ್ಯುವೇಶನ್ ಕೋರ್ಸ್ ಆಗಿರುತ್ತದೆ. ಇದನ್ನು ನೀವು ಅಂಚೆ ತೆರಪಿನ ಮೂಲಕ ಕೂಡಾ ಮಾಡಬಹುದಾಗಿದೆ. ಆದರೆ ಸಮಯಾವಕಾಶ ಹೆಚ್ಚಾಗಿರುತ್ತದೆ. ಇದಕ್ಕಾಗಿ ನೀವು ಅಣ್ಣಾಮಲೈ ಯುನಿವರ್ಸಿಟಿ, ಅಣ್ಣಾಮಲೈನಗರ-೬೦೮ ೦೦೨ ತಮಿಳುನಾಡು ಅಥವಾ ಐ.ಜಿ.ಎನ್.ಓ.ಯು., ಮೈದಾನ್ ಗಲ್ಲಿ, ನವ ದೆಹಲಿ-೧೧೦ ೦೬೮ ಇವರನ್ನು ಸಂಪರ್ಕಿಸಬಹುದು.

ಕೆ. ಪ್ರಶಾಂತ, ಹುಬ್ಬಳ್ಳಿ

**ನಾನು ಪಿ.ಯು.ಸಿ. (ವಿಜ್ಞಾನ) ಓದಿದ್ದು, ಕಾರಣಾಂತರಗಳಿಂದ ಓದು ನಿಲ್ಲಿಸಿದ್ದೇನೆ. ನಾನು ನೇರವಾಗಿ ಬಿ.ಎಸ್ಸಿ ಅಂಚೆ ತೆರಪಿನ ಮೂಲಕ ಮಾಡಬೇಕೆಂದಿದ್ದೇನೆ. ನನಗೆ ಈಗ ೨೧ ವರ್ಷ ವಯಸ್ಸು. ಇದಕ್ಕೆ ಸೂಕ್ತ ವಿಶ್ವವಿದ್ಯಾನಿಲಯ ಹಾಗೂ ಅರ್ಹತೆ ವಿವರಗಳನ್ನು ತಿಳಿಸಿ. ಇದರ ಆಧಾರದ ಮೇಲೆ ಐ.ಎ.ಎಸ್. ಪರೀಕ್ಷೆಯನ್ನು ಬರೆಯಬಹುದೆ?**

ನೀವು ಅಗತ್ಯವಾಗಿ ಬಿ.ಎಸ್ಸಿಯನ್ನು ಅಂಚೆ ತೆರಪಿನ ಮೂಲಕ ಮಾಡಬಹುದಾಗಿದೆ. ಇದಕ್ಕೆ ಅರ್ಹತೆ ಎಂದರೆ ಪಿ.ಯು.ಸಿ.ಯಲ್ಲಿ ವಿಜ್ಞಾನ ವಿಷಯಗಳನ್ನು ತೆಗೆದುಕೊಂಡಿರಬೇಕು. ಇದಕ್ಕಾಗಿ ನೀವು ಐ.ಜಿ.ಎನ್.ಓ.ಯು., ಮೈದಾನ್ ಗಲ್ಲಿ, ನವ ದೆಹಲಿ-೧೧೦ ೦೬೮, ಇವರನ್ನು ಸಂಪರ್ಕಿಸಬಹುದು ಅಥವಾ ಅಣ್ಣಾಮಲೈ ಯುನಿವರ್ಸಿಟಿ, ಅಣ್ಣಾಮಲೈನಗರ-೬೦೮ ೦೦೨ ಇವರನ್ನು ಕೂಡಾ ಸಂಪರ್ಕಿಸಬಹುದು. ಇದರ ಆಧಾರದ ಮೇಲೆ ಅಗತ್ಯವಾಗಿ ಐ.ಎ.ಎಸ್., ಐ.ಪಿ.ಎಸ್. ಪರೀಕ್ಷೆಗಳನ್ನು ಬರೆಯಬಹುದು.

ಎಂ. ಸುರೇಶಕುಮಾರ, ಅಂತರಸಂತೆ.

**ನಾನು ಬಿ.ಎ. ಪದವಿಯನ್ನು ಇತಿಹಾಸ, ಮಾನವಶಾಸ್ತ್ರ ಪುರಾತತ್ವಶಾಸ್ತ್ರ ಮತ್ತು ಪ್ರಾಚ್ಯಶಾಸ್ತ್ರ ವಿಷಯಗಳಲ್ಲಿ ಮೊದಲನೆ ವರ್ಷದಲ್ಲಿ ಓದುತ್ತಿದ್ದು. ಮುಂದೆ ನಾನು ಸ್ನಾತಕೋತ್ತರವನ್ನು ಪುರಾತತ್ವಶಾಸ್ತ್ರ (Archaeology)ದಲ್ಲಿ ಮಾಡಬೇಕೆಂದಿದ್ದೇನೆ. ಇದರ ಸಂಪೂರ್ಣ ವಿವರಗಳನ್ನು ತಿಳಿಸಿ.**

ನೀವು ಅಗತ್ಯವಾಗಿ ಸ್ನಾತಕೋತ್ತರ ಪದವಿಯನ್ನು Archaeology-ದಲ್ಲಿ ಮಾಡಬಹುದು. ಇದಕ್ಕಾಗಿ ನೀವು ಯಾವುದೇ ಖಾಸಗಿ ವಿದ್ಯಾಸಂಸ್ಥೆಗಳು ಹಾಗೂ ವಿಶ್ವವಿದ್ಯಾಲಯಗಳನ್ನು ಸಂಪರ್ಕಿಸಬಹುದು. ಇದಕ್ಕೆ ಅರ್ಹತೆ ಎಂದರೆ ಪದವಿಯಲ್ಲಿ Archaeology ವಿಷಯವನ್ನು ತೆಗೆದುಕೊಂಡಿರಬೇಕು. ಇದು ಎರಡು ವರ್ಷದ ಕೋರ್ಸ್ ಆಗಿರುತ್ತದೆ. ಈ ವಿಷಯದಲ್ಲಿ ಸ್ನಾತಕೋತ್ತರ ಪದವಿ ಮಾಡಲು ಮೈಸೂರು ವಿಶ್ವವಿದ್ಯಾಲಯವನ್ನು ಸಂಪರ್ಕಿಸಬಹುದು. ಸ್ನಾತಕೋತ್ತರ ಪದವಿಯ ನಂತರ ಪಿ.ಜಿ. ಡಿಪ್ಲೋಮಾ ಕೂಡಾ ಮಾಡಬಹುದು. ಪಿ.ಜಿ. ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಪಡೆಯುವ ಅವಕಾಶಗಳು ಇರುತ್ತವೆ.

ವಿಠ್ಠಲ್ ರಾವ್, ಚಿಕ್ಕಮಗಳೂರು.

**ಮಾನ್ಯರೆ, ನಾನು ಬಿ.ಎಸ್ಸಿ. ಪದವಿಯನ್ನು ವ್ಯಾಸಂಗ ಮಾಡುತ್ತಿದ್ದು, ಮುಂದೆ ನನಗೆ C.F.A.ಮಾಡಬೇಕೆಂಬ ಆಸೆ ಇದೆ. ಸಂಪರ್ಕಿಸಬೇಕಾದ ವಿಳಾಸವನ್ನು ಮತ್ತು ವಿವರಗಳನ್ನು ತಿಳಿಸಿ.**

ನೀವು ಅಗತ್ಯವಾಗಿ C.F.A.ಕೋರ್ಸನ್ನು ಮಾಡಬಹುದು. ಅಂತಿಮ ಪದವಿಯಲ್ಲಿರುವಾಗಲೇ ಪ್ರವೇಶ ಪರೀಕ್ಷೆಯನ್ನು ಬರೆಯಲು ಅರ್ಹರಾಗಿರುತ್ತೀರಿ. ಇದು ಮೂರು ವರ್ಷದ ಅಂಚೆ ತೆರಪಿನ ಕೋರ್ಸ್ ಆಗಿರುತ್ತದೆ. ವಿವರಗಳಿಗಾಗಿ, I.C.F.A.I., Banjara hills, Hyderabad ಅಥವಾ International Management Institute, New Delhi ಇವರನ್ನು ಸಂಪರ್ಕಿಸಿ.

ರಾಜೇಶ್, ಹಾಸನ.

**ಪೂಜ್ಯ ಗುರುಗಳೇ, ನಾನು ಪದವಿಯನ್ನು (ಫೈನ್ ಆರ್ಟ್ಸ್) ವ್ಯಾಸಂಗ ಮಾಡುತ್ತಿದ್ದು ಮುಂದೆ ನನಗೆ ಕೋರಿಯೋಗ್ರಾಫಿ ಕೋರ್ಸ್ ಮಾಡುವ ಆಸೆ ಇರುತ್ತದೆ. ಆದ್ದರಿಂದ ಈ ಕೋರ್ಸ್‌ನ್ನು ನಡೆಸುವ ಬೆಂಗಳೂರಿನ ಸಂಸ್ಥೆಯ ವಿಳಾಸವನ್ನು ದಯಮಾಡಿ ತಿಳಿಸಿ.**

ನೀವು ಅವಶ್ಯವಾಗಿ ಕೋರಿಯೋಗ್ರಾಫಿ ಕೋರ್ಸ್‌ನ್ನು ಮಾಡಬಹುದು. ಇದು ಮೂರು ವರ್ಷದ ಡಿಪ್ಲೊಮಾ ಕೋರ್ಸ್ ಆಗಿದೆ. ಇದರ ವಿಳಾಸ : The Institute of Katahak and Choriography, Bangalore ಇವರನ್ನು ಸಂಪರ್ಕಿಸಬಹುದು.

ಕಿರಾಪ್ಪ, ರಾಜಳ್ಳಿ

**ಮಾನ್ಯರೇ, ನಾನು ಬಿ.ಕಾಂ. ಪದವಿ ಮಾಡಿದ್ದು ನಾನು ಪಿ.ಜಿ.ಡಿ.ಬಿ.ಎಂ. (PGDBM) ಕೋರ್ಸ್ ಮಾಡಬೇಕೆಂಬ ಆಸೆ ತುಂಬಾ ಇದ್ದು, ಇದರ ವಿವರಗಳನ್ನು ದಯಮಾಡಿ ತಿಳಿಸಿರಿ.**

ನೀವು ಅಗತ್ಯವಾಗಿ ಪೋಸ್ಟ್ ಗ್ರಾಜುವೇಟ್ ಡಿಪ್ಲೊಮಾ ಇನ್ ಬಿಜಿನೆಸ್ ಮ್ಯಾನೇಜಮೆಂಟ್ ಕೋರ್ಸನ್ನು ಮಾಡಬಹುದು. ಇದನ್ನು ನೀವು ಡಿಸ್ಟನ್ಸ್ ಎಜುಕೇಶನ್ ಅಥವಾ ಅಂಚೆ ತೆರಪಿನ ಮೂಲಕ ಮಾಡಬಹುದು. ಹೆಚ್ಚಿನ ವಿವರಗಳಿಗಾಗಿ ಇಂದಿರಾಗಾಂಧಿ ಮುಕ್ತವಿಶ್ವವಿದ್ಯಾಲಯ, ಬೆಂಗಳೂರು ಅಥವಾ ಮೈಸೂರು ವಿಶ್ವವಿದ್ಯಾಲಯ, ಅಣ್ಣಾಮಲೈ ವಿಶ್ವವಿದ್ಯಾಲಯವನ್ನು ಸಂಪರ್ಕಿಸಬೇಕು.

ಎಂ. ಸುಮಾ, ಬಾಗೇಪಲ್ಲಿ

**ಮಾನ್ಯರೆ, ನಾನು ಪಿ.ಯು.ಸಿ. (ವಿಜ್ಞಾನ) ವಿಭಾಗದಲ್ಲಿ ಓದುತ್ತಿದ್ದು, ಮುಂದೆ ನಾನು ನರ್ಸಿಂಗ್ ಕೋರ್ಸ್ ಮಾಡಬೇಕೆಂದಿದ್ದೇನೆ. ಇದಕ್ಕೆ ಸೂಕ್ತ ವಿಶ್ವವಿದ್ಯಾನಿಲಯ ಹಾಗೂ ಅರ್ಹತೆ ವಿವರಗಳನ್ನು ತಿಳಿಸಿ. ಇದು ಎಷ್ಟು ವರ್ಷದ ಕೋರ್ಸ್ ಆಗಿರುತ್ತದೆ?**

ನೀವು ನರ್ಸಿಂಗ್ ಕೋರ್ಸ್ ಮಾಡಬೇಕಾದಲ್ಲಿ ಪ್ರವೇಶ ಪರೀಕ್ಷೆಯನ್ನು ಬರೆಯಬೇಕಾಗುವುದು. ಪಿ.ಯು.ಸಿ.ಯಲ್ಲಿ ಕನಿಷ್ಠ ಶೇ.೫೦ ಅಂಕಗಳೊಂದಿಗೆ ತೇರ್ಗಡೆಯಾಗಬೇಕು. ಇದು ನಾಲ್ಕು ವರ್ಷದ ಕೋರ್ಸ್ ಆಗಿರುತ್ತದೆ. ಈ ಕೋರ್ಸ್ ಮುಗಿಸಿದವರಿಗೆ ತುಂಬಾ ಬೇಡಿಕೆ ಇರುತ್ತದೆ.

ಕೆ.ನರೇಂದ್ರ ಕುಮಾರ, ತಾಳೂರು.

**ನಾನು, ಡಿಪ್ಲೋಮಾ ಇನ್ ಮೆಟಲರ್ಜಿ ಅಂತಿಮ ವರ್ಷದ ಪರೀಕ್ಷೆಯನ್ನು ಬರೆದಿದ್ದೇನೆ. ಮುಂದೆ ನಾನು ಕೆಲಸ ಮಾಡಿಕೊಂಡು ಎಂಜಿನಿಯರಿಂಗ್ ಸಮಾನವಾದ ಯಾವ ಕೋರ್ಸನ್ನು ಮಾಡಬಹುದು? ವಿವರಗಳನ್ನು ತಿಳಿಸಿ.**

ನೀವು ಅವಶ್ಯವಾಗಿ ಡಿಪ್ಲೋಮಾ ಆಧಾರದ ಮೇಲೆ ಎಂಜಿನಿಯರಿಂಗ್ ಸಮಾನವಾದ ಎ.ಎಂ.ಐ.ಇ. ಕೋರ್ಸನ್ನು ಇದೇ ವಿಭಾಗದಲ್ಲಿ ಮಾಡಬಹುದು. ಈ ಕೋರ್ಸನ್ನು ನೀವು ಕೆಲಸದಲ್ಲಿ ಇದ್ದುಕೊಂಡು ಮಾಡಬಹುದು. ಹೆಚ್ಚಿನ ವಿವರಗಳಿಗಾಗಿ ದಿ ಇನ್ಸಿಟ್ಯೂಟ್ ಆಫ್ ಇಂಜಿನಿಯರ್ಸ್ (ಇಂಡಿಯಾ), ನಂ. ೮, ಗೋಖಲೆ ರೋಡ್, ಕಲ್ಕತ್ತಾ-೭೦೦ ೦೨೦ ಇವರನ್ನು ಸಂಪರ್ಕಿಸಬಹುದು.

ಬಿ.ಡಿ. ಮುಕರ್ತಿಹಾಳ

**ಮಾನ್ಯರೆ, ನಾನು ಕಲಾ ವಿಭಾಗದಲ್ಲಿ ಪದವಿಯನ್ನು ಎರಡನೆ ದರ್ಜೆಯಲ್ಲಿ ಮುಗಿಸಿದ್ದು ಮುಂದೆ ನಾನು ಸ್ನಾತಕೋತ್ತರ ಪದವಿಯನ್ನು ಸಮಾಜ ಸೇವೆಯಲ್ಲಿ (Master of Social Work) ಮಾಡಬೇಕೆಂದಿದ್ದೇನೆ. ಇದಕ್ಕಾಗಿ ಯಾರನ್ನು ಸಂಪರ್ಕಿಸಬೇಕು? ವಿಳಾಸ ಮತ್ತು ಅರ್ಹತೆಗಳನ್ನು ದಯವಿಟ್ಟು ತಿಳಿಸಬೇಕು.**

ನೀವು ಅಗತ್ಯವಾಗಿ ಸ್ನಾತಕೋತ್ತರ ಪದವಿಯನ್ನು ಸಮಾಜ ಸೇವೆಯಲ್ಲಿ ಮಾಡಬಹುದು. ಇದಕ್ಕಾಗಿ ನೀವು ಕರ್ನಾಟಕದ ಯಾವುದೇ ವಿಶ್ವವಿದ್ಯಾಲಯವನ್ನು ಸಂಪರ್ಕಿಸಬಹುದು. ಇದು ಎರಡು ವರ್ಷದ ಕೋರ್ಸ್ ಆಗಿದ್ದು ಇದಕ್ಕೆ ಅರ್ಹತೆ ಎಂದರೆ ಪದವಿಯಾಗಿರುತ್ತದೆ. ಲಿಖಿತ ಪ್ರವೇಶ ಪರೀಕ್ಷೆಯ ಮೂಲಕ ಆಯ್ಕೆ ಮಾಡಲಾಗುವುದು. ಹೆಚ್ಚಿನ ವಿಷಯಗಳಾಗಿ ಕರ್ನಾಟಕ ವಿಶ್ವವಿದ್ಯಾಲಯವನ್ನು ಸಂಪರ್ಕಿಸಬಹುದು.

ಆರ್.ಬಿ. ತಳವಾರ

**ಸರ್, ನಾನು ದ್ವಿತಿಯ ಪಿ.ಯು.ಸಿ. (ವಾಣಿಜ್ಯ) ವ್ಯಾಸಂಗ ಮಾಡುತ್ತಿದ್ದು ಮುಂದೆ ನಾನು ಐ.ಎ.ಎಸ್. ಮಾಡಬೇಕೆಂದಿದ್ದೇನೆ. ಇದರ ಬಗ್ಗೆ ಹೆಚ್ಚಿನ ಮಾಹಿತಿ ತಿಳಿಸಿ.**

ನೀವು ಐ.ಎ.ಎಸ್. ಮಾಡಬೇಕಾದಲ್ಲಿ ಕನಿಷ್ಠ ಪದವಿಯನ್ನು ಪಡೆದಿರಬೇಕು. ಇದರ ವಯೋಮಿತಿ ೨೧-೨೮, ನಾಲ್ಕು ಸಲ ಈ ಪರೀಕ್ಷೆಯನ್ನು ಬರೆಯಲು ಅನುಮತಿ ನೀಡಲಾಗುವುದು. ಇದರಲ್ಲಿ ಪರಿಶಿಷ್ಟ ಜಾತಿ/ಪಂಗಡದವರಿಗೆ ಸಡಿಲಿಕೆ ಇರುತ್ತದೆ. ಯು.ಪಿ.ಎಸ್.ಸಿ.ರವರು ನವಂಬರ್-ಡಿಸೆಂಬರ್ ತಿಂಗಳಲ್ಲಿ ಅರ್ಜಿಗಳನ್ನು ಕರೆಯುತ್ತಾರೆ. ಆಯ್ಕೆಯನ್ನು ಮೆರಿಟ್ ಆಧಾರದ ಮೇಲೆ ಮಾಡಲಾಗುವುದು. ಪರಿಶಿಷ್ಟ ಜಾತಿ/ಪಂಗಡದವರಿಗೆ ಸರಕಾರವು ಉಚಿತ ತರಬೇತಿಯನ್ನು ನೀಡುತ್ತದೆ. ಈ ಕುರಿತು Under Secretary, UPSC, Dholpur House, New Delhi-110 001. ಇವರನ್ನು ಸಂಪರ್ಕಿಸಬಹುದು.

# ಸಿಂಗಾಪೂರದ ರಾಷ್ಟ್ರೀಯ ವಿಶ್ವವಿದ್ಯಾಲಯ

ಇತ್ತೀಚಿನ ವರುಷಗಳಲ್ಲಿ ಅನೇಕ ಪ್ರತಿಭಾವಂತ ವಿದ್ಯಾರ್ಥಿಗಳು ಸಿಂಗಾಪೂರದ ರಾಷ್ಟ್ರೀಯ ವಿಶ್ವವಿದ್ಯಾಲಯದ ಅನೇಕ ವಿಭಾಗಗಳಲ್ಲಿ ಪ್ರವೇಶ ಪಡೆದಿದ್ದಾರೆ. ಒಂದು ಒಳ್ಳೆಯ ಪರಂಪರೆಯ ಈ ವಿಶ್ವವಿದ್ಯಾಲಯ ೧೯೮೦ರಲ್ಲಿ ಅಸ್ತಿತ್ವ ಪಡೆಯಿತು. ಅನೇಕ ಆಧುನಿಕ ಪ್ರಯೋಗಶಾಲೆಗಳನ್ನು ಪಡೆದ ಇದು ವಿಶ್ವದಾದ್ಯಂತದ ಒಳ್ಳೆಯ ಹೆಸರು ಮಾಡಿದ ಅನೇಕ ವಿಶ್ವವಿದ್ಯಾಲಯಗಳ ಸಾಲಿನಲ್ಲಿ ನಿಲ್ಲಬಹುದಾಗಿದೆ. ಪಾಶ್ಚಿಮಾತ್ಯ ವಿಶ್ವ ವಿದ್ಯಾಲಯಗಳೊಂದಿಗೆ ಅನುಕೂಲವಾದ ತುಲನೆಯೂ ಸಾಧ್ಯವಿದೆ. ಬೋಧಕ ವರ್ಗದಲ್ಲಿ ಅಸಾಧಾರಣ ಖ್ಯಾತಿಯವರೂ ಇದ್ದಾರೆ.

ರಾಷ್ಟ್ರೀಯ ವಿಶ್ವವಿದ್ಯಾಲಯದ ಕಟ್ಟಡಗಳು ಸುಮಾರು ನಾನ್ನೂರು ಎಕರೆ ವಿಸ್ತೀರ್ಣದ ಕೆಂಡ್‌ರಿಜ್ ಕ್ಯಾಂಪಸ್‌ನಲ್ಲಿ ಹರಡಿರುತ್ತದೆ. ಸದ್ಯ ಎಂಟು ವಿಶಾಲ ಕ್ಷೇತ್ರಗಳ (Faculties) ಅಧ್ಯಯನಕ್ಕೆ ಅವಕಾಶವಿದ್ದು, ನಾಲ್ಕು ಸ್ನಾತಕೋತ್ತರ ಸಂಸ್ಥೆಗಳು ಮತ್ತು ಕೆಲವು ಸಂಶೋಧನ ಸಂಸ್ಥೆಗಳು ಅನೇಕ ಸ್ನಾತಕೋತ್ತರ ಕಾರ್ಯಕ್ರಮ/ಯೋಜನೆಗಳಲ್ಲಿ ನಿರತವಾಗಿವೆ. ಅಲ್ಲದೆ, ವೈದ್ಯಕೀಯ, ದಂತವಿಜ್ಞಾನ, ವಾಣಿಜ್ಯ ಮತ್ತು ಇಂಜಿನಿಯರಿಂಗ್ ಕ್ಷೇತ್ರಗಳಲ್ಲಿ ಸಹ ನಾಲ್ಕು ಸ್ನಾತಕೋತ್ತರ ಸಂಸ್ಥೆಗಳು (schools) ಬೋಧನೆ-ಸಂಶೋಧನೆಗಳಲ್ಲಿ ನಿರತವಾಗಿವೆ.

'ಸಿಸ್ಟೆಮ್‌ಸೈನ್ಸ್', 'ಮಾಲೆಕ್ಯುಲರ್ ಮತ್ತು ಸೆಲ್ ಬಾಯಾಲಜಿ' ಮತ್ತು 'ಮಾಲೆಕ್ಯುಲರ್ ಅಗ್ರೊ ಬಾಯಾಲಜಿ' ಈ ಮೂರು ಸಂಸ್ಥೆಗಳು ಸಿಂಗಾಪೂರದ 'ಬಾಯೊಟೆಕ್ನಾಲಾಜಿ' ಕ್ಷೇತ್ರದಲ್ಲಿ ಬೇಕಾಗುವ ಸಂಶೋಧಕರನ್ನು ತರಬೇತುಗೊಳಿಸಿ ಬೇಕಾದ ಸಂಶೋಧನ ಸಾಮರ್ಥ್ಯವನ್ನು ಬೆಳೆಸಲು ಅಸ್ತಿತ್ವಪಡೆದವು. 'ದಿ ಸೆಂಟರ್ ಫಾರ್ ಅಡ್‌ವಾನ್ಸ್‌ಡ್ ಸ್ಟಡೀಜ್' (The Centre for advanced studies) ಅನೇಕ ಕ್ಷೇತ್ರಗಳನ್ನೊಳಗೊಂಡ ಸಂಶೋಧನ ಕೇಂದ್ರವಾಗಿದ್ದು, ಸ್ನಾತಕೋತ್ತರ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ; ಕಲೆ, ಸಮಾಜಶಾಸ್ತ್ರಗಳೂ ಇದರಲ್ಲಿ ಅಡಕವಾಗಿವೆ.

ಇಂಥ ವಿಶ್ವವಿದ್ಯಾಲಯದ ವಿಭಾಗವೊಂದರಲ್ಲಿ ಪ್ರವೇಶ ಪಡೆಯಲು ಅರ್ಹತೆಯೊಂದಿಗೆ ಪ್ರತಿಭೆಯೂ ಬೇಕಾಗುತ್ತದೆ. ಅಲ್ಲದೆ ಟಾಫೆಲ್ (TOEFL), ಗ್ರಾಜುಯೇಟ್ ಆ್ಯಪ್ಟಿಟ್ಯೂಡ್ ಟೆಸ್ಟ್ (GRE) ಮತ್ತು ಗ್ರಾಜುಯೇಟ್ ಮೇನೇಜಮೆಂಟ್ ಟೆಸ್ಟ್ (GMAT) ಇವುಗಳನ್ನು ತೆಗೆದುಕೊಂಡು ಮೇಲ್ಪಂಕ್ತಿಯಲ್ಲಿ ಬರಬೇಕಾಗುತ್ತದೆ.

ಸ್ನಾತಕೋತ್ತರ ಸಂಶೋಧನ ಪದವಿ ಹಾಗು ಪಿ.ಎಚ್.ಡಿ.ಗಾಗಿ ಪ್ರವೇಶ ಬಯಸಿದರೆ ಶಿಷ್ಯ ವೇತನವೂ ಸಾಧ್ಯವಾಗಬಹುದು. ಒಟ್ಟಿನ ಮೇಲೆ ಪ್ರವೇಶವಾಗಲಿ, ಶಿಷ್ಯ ವೇತನವಾಗಲಿ, ಎಲ್ಲವೂ ಅರ್ಹತೆಯ ಮೇಲೇ ನಿಂತಿವೆ; ಬೇರೆ ಯಾವ ತರಹದ ಪ್ರಭಾವವೂ ನಿರ್ಣಯವನ್ನು ಬದಲಿಸಲು ಸಾಧ್ಯವಿಲ್ಲ. ●

# ವಿಜ್ಞಾನ ವಿದ್ಯಾರ್ಥಿಗಳಿಗೆ ಫೆಲೋಶಿಪ್

ಬೆಂಗಳೂರಿನ ವಿಶ್ವವಿಖ್ಯಾತ ಭಾರತೀಯ ವಿಜ್ಞಾನ ಸಂಸ್ಥೆಯು ಇದೇ ವರುಷ ಒಂದು ಹೊಸ ಯೋಜನೆಯನ್ನು ಹಮ್ಮಿಕೊಂಡಿದ್ದು. ಅದು ನೂರಾರು ಪ್ರತಿಭೆಯುಳ್ಳ ವಿದ್ಯಾರ್ಥಿಗಳಿಗೆ ವಿಜ್ಞಾನ ಅಧ್ಯಯನಕ್ಕೆ ಬೇಕಾದ ಪ್ರೇರಣೆ, ಪ್ರೋತ್ಸಾಹ ಒದಗಿಸಲಿದೆ. ಪಿ.ಯು.ಸಿ.ಗಾಗಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳು ಪಿ.ಯು.ಬೋರ್ಡ್ ಅಥವಾ ವಿಶ್ವವಿದ್ಯಾಲಯಕ್ಕೆ ಇಪ್ಪತ್ತರೊಳಗೆ ರ‍್ಯಾಂಕ್ ಪಡೆದು ಪಾಸಾಗಿದ್ದರೆ, ಮುಂದಿನ ಕ್ರಮವಾಗಿ ಬಿ.ಎಸ್.ಸಿ.ಯಲ್ಲಿ ಭೌತಶಾಸ್ತ್ರ, ರಸಾಯನ ಶಾಸ್ತ್ರ, ಜೀವಶಾಸ್ತ್ರ ಮತ್ತು ಗಣಿತಶಾಸ್ತ್ರಗಳನ್ನು ತೆಗೆದುಕೊಂಡು ನಿಮಗೆ ಇಷ್ಟವಿದ್ದ ಮಹಾವಿದ್ಯಾಲಯ/ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುತ್ತಿದ್ದರೆ ಅಂಥ ವಿದ್ಯಾರ್ಥಿಗಳು 'ಭಾರತೀಯ ವಿಜ್ಞಾನ ಸಂಸ್ಥೆಯ ಕಿರಿಯ ಫೆಲೊ' (I.I.Sc. Young Fellow) ಎಂದು ಪರಿಗಣಿಸಲಾಗುವದು. ವಿದ್ಯಾರ್ಥಿ ಫೆಲೊ ಎಂದು ಆಯ್ಕೆಯಾದ ಪಕ್ಷದಲ್ಲಿ ಬೋಧನ ಶುಲ್ಕ ಮತ್ತು ಪುಸ್ತಕ ಕೊಂಡುಕೊಳ್ಳಲು ಧನ ಸಹಾಯವನ್ನು ಸಂಸ್ಥೆಯು ಕೊಡುವದು. ಅಲ್ಲದೆ, ರಜೆಯ ಅವಧಿಯಲ್ಲಿ ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿಯ ಸಂಶೋಧನ ಪ್ರಯೋಗಶಾಲೆಗಳಲ್ಲಿ ಅಧ್ಯಯನಕ್ಕೆ ಅನುಕೂಲ ಮಾಡಿಕೊಡಲಾಗುವದು. ಬಂದು-ಹೋಗುವ ಖರ್ಚು, ವಾಸಕ್ಕೆ ಅವಕಾಶವನ್ನು ಮಾಡಿಕೊಡಲಾಗುವುದು. ಈ ಅವಧಿಯಲ್ಲಿ ಅಸಾಧಾರಣ ಪ್ರತಿಭೆಯನ್ನು ತೋರಿಸಿದರೆ ಬಿ.ಎಸ್.ಸಿ. ಮುಗಿದ ನಂತರ ಸಂಸ್ಥೆಯಲ್ಲಿರುವ ಸಮಗ್ರ ಪಿ.ಎಚ್.ಡಿ. ಕಾರ್ಯಕ್ರಮ/ಅಧ್ಯಯನಕ್ಕೆ ಪ್ರವೇಶ ಕೊಡಲಾಗುವುದು. ಬಿ.ಎಸ್.ಸಿ. ನಂತರ ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿಯೇ ಪ್ರವೇಶ ಪಡೆಯಬೇಕೆಂಬ ಯಾವ ನಿರ್ಬಂಧವೂ ಇಲ್ಲ. ನೀವು ಬಿ.ಎಸ್.ಸಿ. ಸೇರಿದ ನಂತರ ನೀವು ಪಡೆದ ರ‍್ಯಾಂಕ್ ನಮೂದಿಸಿ ಒಂದು ಬಿಳಿಯ ಹಾಳೆಯ ಮೇಲೆ ಅರ್ಜಿ ಬರೆದು ಕಾಲೇಜು ಪ್ರಿನ್ಸಿಪಾಲ್/ಅಧಿಕಾರಿಗಳ ಮುಖಾಂತರ ತಕ್ಷಣ ಕಳಿಸಿಕೊಡಬೇಕು.

ವಿಳಾಸ :

ರಿಜಿಸ್ಟ್ರಾರ್, ಭಾರತೀಯ ವಿಜ್ಞಾನ ಸಂಸ್ಥೆ ಬೆಂಗಳೂರು - ೫೬೦ ೦೧೨, ಫ್ಯಾಕ್ಸ್ ನಂಬರ್ ೩೩೪೧೬೮೩

ಲಕೋಟೆಯ ಮೇಲೆ 'ಭಾ.ವಿ.ಸಂ. ಕಿರಿಯ ಫೆಲೊ' ಎಂದು ಬರೆಯಬೇಕು.

ಆಯ್ಕೆಯಲ್ಲಿ ಸಂಸ್ಥೆ ನಿರ್ಣಯವೇ ಅಂತಿಮವಾದುದು.

ಈ ಹೊಸ ಯೋಜನೆಯ ಉದ್ದೇಶ ವೈಜ್ಞಾನಿಕ ಕ್ಷೇತ್ರಗಳಲ್ಲಿ ಹೊಸ ಪ್ರತಿಭೆಯ ವಿದ್ಯಾರ್ಥಿಗಳನ್ನು ಪರಿಚಯಿಸುವದಾಗಿದೆ.

○ ನಾರಾಯಣ್ ಮಹಿಷಿ

# ಒಕ್ಕಲುತನದಲ್ಲಿ ವಿದ್ಯೆ-ಉದ್ಯೋಗ ಅವಕಾಶಗಳು

**ಸುಮಾರು ಕಾಲು ಶತಮಾನದ ಹಿಂದೆ ವ್ಯವಸಾಯ ಕ್ಷೇತ್ರಕ್ಕೆ ಬರಬೇಕಾದರೆ ಯಾವ ಔಪಚಾರಿಕ ತರಬೇತಿ ಬೇಕಿರಲಿಲ್ಲ. ದೊಡ್ಡವರೊಂದಿಗೆ ಮಕ್ಕಳೂ ಹೋಗಿ ಅನುಭವ ಪಡೆದು ಪರಂಪರೆಗೆ ನಾಂದಿ ಹಾಡಿದರು. ಆದರೆ ಈಗ ಕಣ್ಣು ಕುಕ್ಕಿಸುವಂಥ ಸುಧಾರಣೆಗಳು ಆದುದರಿಂದ ಶಿಕ್ಷಣ, ತರಬೇತಿ ಇವೆಲ್ಲ ಅವಶ್ಯಕವೆನಿಸಿವೆ.**

**○ ನಾರಾಯಣ್ ಮಹಿಷಿ**

**ಭಾ**ರತವು ಹಳ್ಳಿಗಳ ದೇಶ ಆಗಿರುವುದರಿಂದಲೇ ಕೃಷಿ ಪ್ರಧಾನವಾದ ದೇಶವಾಗಿದೆ. ದೇಶದ ಆರ್ಥಿಕ ವ್ಯವಸ್ಥೆಯಲ್ಲಿ ಕೃಷಿಯ ಪಾಲು ಗಮನಾರ್ಹವಾಗಿದೆ. ೧೯೫೦ರ ದಶಕದಲ್ಲಿ ರಾಷ್ಟ್ರೀಯ ಉತ್ಪಾದನೆಯಲ್ಲಿ ಶೇಕಡ ಐವತ್ತರಷ್ಟು ಕೃಷಿ ಕ್ಷೇತ್ರಕ್ಕೇ ಸಂಬಂಧಿಸಿತ್ತು. ಇತ್ತೀಚಿನ ವರುಷಗಳಲ್ಲಿ ಇದು ಕಡಿಮೆಯಾಗಿ ಮೂವತ್ತೈದಕ್ಕೆ ಇಳಿದಿದೆ! ಆದರೆ ಆ ಕ್ಷೇತ್ರಕ್ಕೆ ಮಾತ್ರ ಮೊದಲಿಗಿಂತಲೂ ಇಂದು ಹೆಚ್ಚಿನ ಮಹತ್ವ ಪ್ರಾಪ್ತವಾಗಿದೆ. ವ್ಯವಸಾಯ ಕ್ಷೇತ್ರದಲ್ಲಿ ಕೆಲಸ ಮಾಡುವವರ ಸಂಖ್ಯೆ ಸುಮಾರು ಶೇಕಡ ಎಪ್ಪತ್ತರಷ್ಟು. ಉಳಿದ ಉದ್ದಿಮೆಗಳೊಂದಿಗೆ ವ್ಯವಸಾಯ ಕ್ಷೇತ್ರ ನಿಕಟ ಸಂಬಂಧ ಹೊಂದಿದೆ. ದೇಶದ ಜನಸಂಖ್ಯೆಗೆ ಬೇಕಾಗುವ ಆಹಾರ ವ್ಯವಸಾಯ ಕ್ಷೇತ್ರದಿಂದಲೇ ಬರುತ್ತದೆಂಬುದು ಎಲ್ಲರಿಗೂ ಗೊತ್ತಿದ್ದ ವಿಷಯ. ಉತ್ಪಾದನ ಕ್ಷೇತ್ರದಲ್ಲಿಯ ಅನೇಕ ಉದ್ದಿಮೆಗಳಿಗೆ ಕೃಷಿ ಉತ್ಪಾದನೆಗಳೇ ಕಡ್ಡಾಯ ವಸ್ತುಗಳಾಗಿ ಬರುತ್ತವೆ. ಹೊಲ-ಗದ್ದೆಗಳಲ್ಲಿ ಆಹಾರ ಬೆಳೆದು ಜನರ ಹಂತಕ್ಕೆ ಬರಬೇಕಾದರೆ ಉದ್ದಿಮೆಗಳು ಸಂಸ್ಕರಿಸಿ, ಬೇರೆ ಬೇರೆ ಭಾಗಗಳಿಗೆ ಲಾರಿಗಳ ಅಥವಾ ಟ್ರೈನ್ ಮೂಲಕ ಕಳಿಸಬೇಕಾಗುತ್ತದೆ. ಆಹಾರ ಬಹಳ ದೊಡ್ಡ ಪ್ರಮಾಣದಲ್ಲಿ ಬೆಳೆಯಬೇಕಾದರೆ ಹೆಚ್ಚು ಹೆಚ್ಚು ಜಮೀನನ್ನು ಸಾಗು ಮಾಡಬೇಕಾಗುತ್ತದೆ; ನೀರಾವರಿ ವ್ಯವಸ್ಥೆಯೂ ಆದಷ್ಟು ಹೆಚ್ಚಿನ ಪ್ರಮಾಣದಲ್ಲಿ ಸಾಧ್ಯವಾಗಬೇಕಾಗುತ್ತದೆ. ಜೊತೆಗೆ ಜೀವ ರಸಾಯನಶಾಸ್ತ್ರಜ್ಞರು ತಳಿ ಶಾಸ್ತ್ರದ ಆಧಾರ ಪಡೆದು, ಸೂಕ್ಷ್ಮಾಣುಜೀವಿಗಳ ಸಹಾಯ ದಿಂದ, ರಾಸಾಯನಿಕ ಗೊಬ್ಬರ, ರೋಗಾಣು ಜೀವಿ ನಾಶಕಗಳ ಸಹಾಯದಿಂದ ಅನೇಕ ಪಟ್ಟು ಆಹಾರ ಧಾನ್ಯದ ಪ್ರಮಾಣವನ್ನು ಹೆಚ್ಚಿಸ ಬೇಕಾಗಿದೆ. ಇಂಥ ಕ್ರಮಗಳು ಸಾಧ್ಯವಾಗಿದ್ದ ರಿಂದಲೇ ಆಹಾರಧಾನ್ಯ ಉತ್ಪಾದನೆಯು ಇಂದಿನ ೯೫ ಕೋಟಿ ಜನಸಂಖ್ಯೆಗೆ ಸಾಕಾಗುತ್ತದೆ ಎಂದು ಸ್ಥೂಲವಾಗಿ ಹೇಳಬಹುದು.

ವ್ಯವಸಾಯ ಕ್ಷೇತ್ರವೆಂದರೆ ಕೇವಲ ಹಳ್ಳಿಗಳಲ್ಲಿ ಜಮೀನಿಗೆ ಸಂಬಂಧಿಸಿದ ವಿಷಯವೆಂದು ತಿಳಿಯುತ್ತಾರೆ! ಆ ಕ್ಷೇತ್ರದ ಚಟುವಟಿಕೆಗಳು ನಿಂತದ್ದೇ ಆದರೆ ಜಗತ್ತಿನಲ್ಲಿ ಹಾಹಾಕಾರ ಉಂಟಾಗುತ್ತದೆ. ಎಷ್ಟೋ ಸಲ ನಾವು ಸುದ್ದಿ ಪತ್ರಿಕೆಗಳಲ್ಲಿ ಬರಗಾಲದ ಬಗ್ಗೆ ಓದುತ್ತೇವೆ; ಸಾವಿರಾರು ಜನ ಸಾಯುತ್ತಾರೆ. ಈ ಹಿನ್ನೆಲೆಯಲ್ಲಿ ನಾವು ವ್ಯವಸಾಯದ ಮಹತ್ವವನ್ನು ತಿಳಿದುಕೊಳ್ಳಬಹುದು. ಇಂಥ ಒಂದು ರಾಷ್ಟ್ರೀಯ ದೈತ್ಯಾಕಾರದ ಯೋಜನೆಯು ಯಶಸ್ವಿಯಾಗಬೇಕಾದರೆ ಅನೇಕ ಹಂತಗಳಲ್ಲಿ ವಿವಿಧ ವೃತ್ತಿ ನಿರತರನ್ನು ತರಬೇತುಗೊಳಿಸಬೇಕಾಗುತ್ತದೆ. ಅದಕ್ಕೆಂದೇ ಕೃಷಿ ವಿಶ್ವವಿದ್ಯಾಲಯಗಳು, ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಶಾಲೆಗಳು, ಮಣ್ಣು ಪರೀಕ್ಷೆ ಪ್ರಯೋಗ ಶಾಲೆಗಳು ಅಸ್ತಿತ್ವದಲ್ಲಿ ಬಂದಿವೆ. ಆರ್ಥಿಕ ಉದಾರೀಕರಣದಿಂದಾಗಿ 'ಆಹಾರ'ಕ್ಕೆ ಸಂಬಂಧಿಸಿದ ವ್ಯಾಪಾರ ದೇಶದಲ್ಲಿಯಂತೆ, ಅಂತರ್ದೇಶೀಯವಾಗಿ ಅನೇಕ ಪಟ್ಟು ಬೆಳೆದಿದೆ. ಈ ಕ್ಷೇತ್ರಕ್ಕೇ ಬಹಳ ನಿಕಟವಾದ ಹೈನೋದ್ಯಮವು ಸಹ ಕಲ್ಪನಾತೀತವಾಗಿ ಬೆಳೆದಿದೆ, ಬೆಳೆಯುತ್ತಿದೆ.

ವ್ಯವಸಾಯಕ್ಷೇತ್ರದ ಯಶಸ್ಸು ಇಂಥ ಒಂದೇ ಕಾರಣಕ್ಕಾಗಿ ಸಾಧ್ಯವಾಗಿದೆ ಎಂದು ಹೇಳುವದು ಅಸಾಧ್ಯ. ಆದರ ಹಿನ್ನೆಲೆಯಲ್ಲಿ ಅನೇಕ ಕಾರಣಗಳಿವೆ. ಅನೇಕ ಕಾರ್ಮಿಕರಿಗೆ ಔಪಚಾರಿಕವಾದ ತರಬೇತು ಇಲ್ಲದಿದ್ದರೂ ಒಪ್ಪು-ತಪ್ಪುಗಳ ಆಧಾರದ ಮೇಲೆ ಅನುಭವ ಪಡೆದಿರುತ್ತಾರೆ. ಪ್ರಾತ್ಯಕ್ಷಿಕೆಗಳಂತೂ ಗ್ರಾಮೀಣ ಪ್ರದೇಶಗಳಲ್ಲಿ ನಡೆದೇ ಇರುತ್ತವೆ. ಇವುಗಳನ್ನು ನೋಡಿ, ಪ್ರಶ್ನೆ ಕೇಳಿ ವಿದ್ಯೆ ಸಂಪಾದಿಸಿದವರು ಲಕ್ಷಾವಧಿ ಜನ. ಇದರ ಜೊತೆಗೆ ಅನೇಕ ಹಂತಗಳಲ್ಲಿ ಪರಿಣತರೂ ಬೇಕಾಗುತ್ತಾರೆ. ಗ್ರಾಮೀಣ ಅಭಿವೃದ್ಧಿಯಲ್ಲಿ ವ್ಯವಸ್ಥಾಪಕರ ಪಾತ್ರ ಬಹಳ ಹಿರಿದು. ಸಂಬಂಧಿಸಿದ ಸಂಶೋಧನೆಯಂತೂ ಅನಂತ ಕಾಲದವರೆಗೆ ನಡೆಯಬೇಕಾದದ್ದು; ಅದಕ್ಕಾಗಿ ಸಂಶೋಧಕರು ಬೇಕು, ಪ್ರಯೋಗ ಶಾಲೆಗಳು ಬೇಕು, ಶಿಕ್ಷಣ ಸಂಸ್ಥೆಗಳು ಬೇಕು. ವ್ಯವಸಾಯಕ್ಕೆ ಸಂಬಂಧಿಸಿದ ಇನ್ನಿತರ ಕ್ಷೇತ್ರಗಳೆಂದರೆ ತೋಟಗಾರಿಕೆ, ರೇಷ್ಮೆ ವ್ಯವಸಾಯ, ಹೂ ಬೇಸಾಯ.

ಉತ್ತುವದು, ಬೆಳೆಯುವುದು, ಧಾನ್ಯ ಬೇರ್ಪಡಿಸುವದು, ಮಾರಾಟ ಇವುಗಳ ಜೊತೆಗೆ ಉತ್ತಮ ತಳಿಯ ಬೀಜ ತಯಾರಿಕೆ, ರಾಸಾಯನಿಕ ಗೊಬ್ಬರ, ರೋಗಾಣು ಜೀವಿ ವಿರೋಧಿ ಹೊಸ ತಳಿಗಳ ಸಂಶೋಧನೆ, ಹೊಸ ಹೊಸ ಕ್ರಿಮಿನಾಶಕಗಳು ಇವೆಲ್ಲ ಸಂಬಂಧಿಸಿದ ಚಟುವಟಿಕೆಗಳು. ವ್ಯವಸಾಯದಲ್ಲಿ ಅವಶ್ಯವಿದ್ದ ಯಂತ್ರ ಸಾಮಗ್ರಿಗಳ ಸಂಶೋಧನೆಯೂ ಒಂದು ಮಹತ್ವದ ಚಟುವಟಿಕೆ!

## ಪ್ರವೇಶ

ಸುಮಾರು ಕಾಲು ಶತಮಾನದ ಹಿಂದೆ ವ್ಯವಸಾಯ ಕ್ಷೇತ್ರಕ್ಕೆ ಬರಬೇಕಾದರೆ ಯಾವ ಔಪಚಾರಿಕ ತರಬೇತಿ ಬೇಕಿರಲಿಲ್ಲ. ದೊಡ್ಡವರೊಂದಿಗೆ ಮಕ್ಕಳೂ ಹೋಗಿ ಅನುಭವ ಪಡೆದು ಪರಂಪರೆಗೆ ನಾಂದಿ ಹಾಡಿದರು. ಆದರೆ ಈಗ ಕಣ್ಣು ಕುಕ್ಕಿಸುವಂಥ ಸುಧಾರಣೆಗಳು ಆದುದರಿಂದ ಶಿಕ್ಷಣ, ತರಬೇತಿ ಇವೆಲ್ಲ ಅವಶ್ಯಕವೆನಿಸಿವೆ.

ಕೃಷಿ ವಿಶ್ವವಿದ್ಯಾಲಯಗಳು ಅಸ್ತಿತ್ವದಲ್ಲಿ ಬಂದು ಕ್ರಾಂತಿಯನ್ನೇ ಮಾಡಿವೆ. ಪ್ರತಿ ರಾಜ್ಯದಲ್ಲೂ ಹರಡಿಕೊಂಡಿರುವ ಈ ಸಂಸ್ಥೆಗಳಲ್ಲಿ ಬಿ.ಎಸ್.ಸಿ., ಎಂ.ಎಸ್.ಸಿ. ಮತ್ತು ಪಿ.ಎಚ್.ಡಿ. ಪದವಿಗಳನ್ನು ಪಡೆಯಬಹುದು. ಪ್ರವೇಶ ವಿಷಯದಲ್ಲಿ ಅರ್ಜಿದಾರ-ವಿದ್ಯಾರ್ಥಿ ಕೃಷಿಕ ಮನೆತನಕ್ಕೆ ಸೇರಿದ್ದರೆ ಅವನಿಗೆ ಪ್ರವೇಶ ಸುಲಭವಾಗುತ್ತದೆ. ಇದರೊಂದಿಗೆ ಗ್ರಾಮೀಣ ವ್ಯವಸ್ಥಾಪನೆಯಲ್ಲಿ ಸಹ ಸಂಸ್ಥೆಗಳು ಬಂದಿದ್ದು ಅಲ್ಲಿಯೂ ಸಹ ಔಪಚಾರಿಕ ಶಿಕ್ಷಣವನ್ನು ಒದಗಿಸಲಾಗುತ್ತದೆ. ಬಿ.ಎಸ್.ಸಿ. ಪದವಿ ಪ್ರವೇಶಕ್ಕೆ ವಿದ್ಯಾರ್ಥಿ ವಿಜ್ಞಾನ ವಿಷಯಗಳೊಂದಿಗೆ ಪಿ.ಯು.ಸಿ. ಪಾಸಾಗಿರಬೇಕು. ಪ್ರವೇಶ ಪರೀಕ್ಷೆ ಸಹ ಇರುತ್ತದೆ. ಎಂ.ಎಸ್.ಸಿ. ಪ್ರವೇಶಕ್ಕೆ ಬಿ.ಎಸ್‌ಸಿ ಮೇಲ್ಪಂಕ್ತಿಯಲ್ಲಿ ಪಾಸಾಗಿರಬೇಕು. ಹೆಚ್ಚಾಗಿ ಪ್ರತಿಭೆಯುಳ್ಳವರಿಗೇ ಪಿ.ಎಚ್‌ಡಿ. ಪ್ರವೇಶ ಸಾಧ್ಯ. ಬಿ.ಎಸ್.ಸಿ.ಯ ಕೊನೆಯ ವರುಷ ಅಧ್ಯಯನ ಮಾಡುತ್ತಿದ್ದಾಗಲೂ ಎಂ.ಎಸ್‌ಸಿಯ ಪ್ರವೇಶ ಪರೀಕ್ಷೆಗೆ ಅರ್ಜಿ ಸಲ್ಲಿಸಬಹುದು. ಗ್ರಾಮೀಣ ವ್ಯವಸ್ಥಾಪನಾ ಅಧ್ಯಯನ ಸಂಸ್ಥೆಯಲ್ಲಿ ಪ್ರವೇಶ ಪಡೆಯುವವರ ಸಂಖ್ಯೆಯೂ ಕ್ರಮೇಣ ಹೆಚ್ಚಾಗುತ್ತಲಿದೆ.

ಇತ್ತೀಚಿನ ವರುಷಗಳಲ್ಲಿ ಪ್ರವೇಶವನ್ನು ಅದಕ್ಕೆ ಸಂಬಂಧಿಸಿದ ಪರೀಕ್ಷೆಯ ಫಲಿತಾಂಶದ ಮೇಲೆಯೇ ನೀಡಲಾಗುತ್ತದೆ. ಒಬ್ಬ ಪ್ರತಿಭೆಯುಳ್ಳ ವಿದ್ಯಾರ್ಥಿ ಯಾವದೋ ಕಾರಣಕ್ಕಾಗಿ, ಪರೀಕ್ಷೆಯ ಸಮಯದಲ್ಲಿ ಅವನ ಆರೋಗ್ಯ ಸರಿ ಇಲ್ಲದೆ ಇರಬಹುದು ಅಥವಾ ತಂದೆ - ತಾಯಂದಿರ ಆರೋಗ್ಯ ಸರಿ ಇಲ್ಲದೆ ಇರಬಹುದು-ಆವಾಗ ಅವನು ದ್ವಿತೀಯ ವರ್ಗದಲ್ಲಿ ಪಾಸಾಗಿರುತ್ತಾನೆ. ಎಂದ ಮಾತ್ರಕ್ಕೆ, ಅವನ ಪ್ರತಿಭೆ ಕುಂದಿದೆ ಎಂಬರ್ಥವಲ್ಲ. ಪ್ರವೇಶ ಪರೀಕ್ಷೆ ಅವನಿಗೂ ಒಂದು ಸದವಕಾಶವನ್ನು ಒದಗಿಸಿಕೊಡುತ್ತದೆ. ಪ್ರತಿಷ್ಠಿತ ಸಂಸ್ಥೆಗಳಲ್ಲಿ ಪಿ.ಎಚ್.ಡಿಗಾಗಿ ಸಹ ಪ್ರವೇಶ ಪರೀಕ್ಷೆ ನಡೆಸುವ ಸಂಪ್ರದಾಯ ಪ್ರಾರಂಭವಾಗಿದೆ. ಇದರಲ್ಲಿ ಯಶಸ್ವಿಯಾಗಿ ಹೊರಬಂದ ಸಂಕ್ಷಿಪ್ತ ಪಟ್ಟಿಯ (SHORT-LISTED) ವಿದ್ಯಾರ್ಥಿಗಳಿಗೆ ಸಂದರ್ಶನ ಇರುತ್ತದೆ. ಎಂಟು-ಹತ್ತು ಪ್ರಾಧ್ಯಾಪಕ - ಸಂಶೋಧಕರ ಸಮಿತಿಯೊಂದು ವಿದ್ಯಾರ್ಥಿಯ ಅನೇಕ ಬೌದ್ಧಿಕ ಅಂಗಗಳನ್ನು ವಿವರವಾಗಿ ಪರೀಕ್ಷಿಸುತ್ತಾರೆ. ಆಮೇಲೆ ಅಂತಿಮ ನಿರ್ಣಯ. ಬಿ.ಎಸ್‌ಸಿ (೪ ವರುಷ), ಎಂ.ಎಸ್‌ಸಿ (ಎರಡು ವರುಷ), ಗ್ರಾಮೀಣ ವ್ಯವಸ್ಥಾಪನ ಅಧ್ಯಯನ (ಎರಡು ವರುಷ) ಇದೆಲ್ಲವುಗಳಿಗೆ ಅಧ್ಯಯನದ ಅವಧಿ ಬೇರೆ ಬೇರೆಯಾಗಿರುತ್ತದೆ.

## ಕೆಲಸಗಳಿಗೆ ಅವಕಾಶ

ಕೃಷಿ ಕ್ಷೇತ್ರದಲ್ಲಿ ಇತ್ತೀಚಿನ ವರುಷಗಳಲ್ಲಿ ಕೆಲಸಗಳ ಸಂಖ್ಯೆ ಹೆಚ್ಚಾಗುತ್ತಲೇ ಇದೆ. ರಾಸಾಯನಿಕ ಗೊಬ್ಬರ, ಕ್ರಿಮಿನಾಶಕಗಳನ್ನು (PESTICIDES) ಮಾರಾಟ ಮಾಡಲು ಬಿ.ಎಸ್‌ಸಿ (ಅಗ್ರಿ) ಪಾಸಾದ ವಿದ್ಯಾರ್ಥಿಗಳನ್ನೇ ಕಂಪನಿಯವರು ನೋಡುತ್ತಿರುತ್ತಾರೆ. ಕೇವಲ ಮಾರಾಟ ಮಾಡುವದೊಂದೇ ಇದರ ಉದ್ದೇಶವಲ್ಲ. ಅದಕ್ಕೆ ಸಂಬಂಧಿಸಿದ ಎಲ್ಲ ವಿವರಗಳನ್ನು ಗ್ರಾಹಕರಲ್ಲಿ ನಂಬಿಕೆ ನೆಲೆಯೂರುವಂತೆ ತಿಳಿಸಿ ಹೇಳಬೇಕಾಗುತ್ತದೆ. ಪಿ.ಎಚ್.ಡಿ. ಮುಗಿಸಿದ ಪರಿಣತರು ರಾಜ್ಯಸರ್ಕಾರದ ಅಥವಾ ಕೇಂದ್ರ ಸರ್ಕಾರದ ಸೇವೆಯಲ್ಲಿ ಕೆಲಸ ನೋಡಬೇಕಾಗುತ್ತದೆ. ಪ್ರಾಧ್ಯಾಪಕ ಅಥವಾ ಸಂಶೋಧನ ವೃತ್ತಿಯಲ್ಲಿ ಇಷ್ಟವಿದ್ದವರು ಕೃಷಿ ವಿಶ್ವವಿದ್ಯಾಲಯಗಳನ್ನು ಸೇರಬೇಕಾಗುತ್ತದೆ. ಭಾರತದಲ್ಲಿ ಈಗ ಅನೇಕ ಬಹುರಾಷ್ಟ್ರೀಯ ಸಂಸ್ಥೆಗಳೂ ಬಂದದ್ದರಿಂದ ಅನೇಕ ಒಳ್ಳೆಯ ಕೆಲಸಗಳು, ವಿವಿಧ ಹಂತದಲ್ಲಿ ಸಿಗಬಹುದಾಗಿದೆ; ಉತ್ತಮ ತಳಿಯ ಬೀಜ ಉತ್ಪಾದನೆ, ಮಾರಾಟ, ಮೊಟ್ಟೆಗಳಿಂದ ಪೌಡರ್ ತಯಾರಿಸುವದು ಇತ್ಯಾದಿ. ಭಾರತೀಯ ಕೃಷಿ ಸಂಶೋಧನ ಮಂಡಲಿ, ಹಣ್ಣು ತರಕಾರಿ ಸಂಶೋಧನ ಮಂಡಲಿ ಇವು ಸಂಶೋಧಕರಿಗೆ ವಿಪುಲ ಅವಕಾಶ ಮಾಡಿಕೊಡುತ್ತವೆ. ಔಷಧಿಯ ಸಸ್ಯ ಬೆಳೆಸಿ ಅವುಗಳಲ್ಲಿಯ ರಾಸಾಯನಿಕಗಳನ್ನು ಬೇರ್ಪಡಿಸಿ ಔಷಧಿ ಸಂಶೋಧನ ಕಂಪನಿಗಳಿಗೆ ಮುಂದಿನ ಸಂಶೋಧನ ಕ್ರಮಗಳಿಗಾಗಿ ಮಾರಾಟ ಮಾಡುವದೂ ಒಂದು ಲಾಭದಾಯಕ ಉದ್ದಿಮೆಯಾಗಿ ಬರಲಿದೆ. ಹೈನು, ಹೈನುಗಾರಿಕೆಗೆ ಸಂಬಂಧಿಸಿದ ಅನೇಕ ಸಂಸ್ಥೆಗಳು ಭಾರತದಾದ್ಯಂತ, ಗ್ರಾಮೀಣ ಪ್ರದೇಶಗಳಲ್ಲಿ ಅಸ್ತಿತ್ವದಲ್ಲಿ ಬಂದಿದ್ದು ಕೃಷಿ ಪದವೀಧರರಿಗೆ ಒಂದು ವರದಾನವಾಗಿದೆ. ಇದೇ ಶ್ವೇತಕ್ರಾಂತಿಗೆ ಮಾರ್ಗವನ್ನುವಂತಾಗಿದೆ. ದೊಡ್ಡ ದೊಡ್ಡ ವಾಣಿಜ್ಯ ಸಂಸ್ಥೆಗಳಲ್ಲಿ, ಸಾವಿರಾರು ಬ್ಯಾಂಕ್‌ಗಳಲ್ಲಿ ಕೃಷಿ ಪದವೀಧರರು, ಎಂ.ಎಸ್‌ಸಿ. ಪದವೀಧರರು ಬೇಕಾಗುತ್ತಾರೆ. ಒಟ್ಟಿನ ಮೇಲೆ, ಸಂಕ್ಷಿಪ್ತವಾಗಿ ಹೇಳುವದಾದರೆ ನಾವಿಂದು ಹಿಂದೆಂದಿಗಿಂತಲೂ ಒಳ್ಳೆಯ ಸ್ಥಿತಿಯಲ್ಲಿದ್ದೇವೆ - ಸಿಗಬಹುದಾದ ಸುಸಂಧಿಗಳ ದೃಷ್ಟಿಯಿಂದ. ಆದರೆ ವಿದ್ಯಾರ್ಥಿಗಳು ತಾವು ಬುದ್ಧಿವಂತರೆಂದು ಪ್ರತಿ ಹಂತದಲ್ಲೂ ತೋರಿಸಿಕೊಡಬೇಕಾಗುತ್ತದೆ; ಅದು ಪರೀಕ್ಷೆಯೇ ಇರಬಹುದು ಅಥವಾ ಸಂದರ್ಶನವೇ ಇರಬಹುದು. ಕೆಲಸ ಸಿಕ್ಕಮೇಲೂ ಸಹ ಫಲಿತಾಂಶಗಳನ್ನು ತೋರಿಸಿಕೊಡಬೇಕಾಗುತ್ತದೆ. ಇದುವೇ ಯಶಸ್ಸಿಗೆ ದಾರಿ. ಆಕಾಶವನ್ನೇ ಮುಟ್ಟಬೇಕೆಂಬ ಛಲವಿದ್ದರೆ ಅದನ್ನೂ ಸಾಧಿಸಿ ತೀರಿಸಲು ಸರಿಯಾದ ವಾತಾವರಣ ನಮ್ಮಲ್ಲಿದೆ. ಅದನ್ನು ಮನಗಂಡು ಅಖಂಡ ಪರಿಶ್ರಮಕ್ಕೆ ಸಿದ್ಧವಾಗಬೇಕು.

### ನ(ಹ)ಗೆ

ನನ್ನ ನಲ್ಲೆಯನ್ನು
ಕಂಡರೆ ಎಲ್ಲರಿಗೂ
ಹಗೆ
ಕಾರಣ ಅವಳ
ಸುಂದರ ಮೋಹಕ
ನಗೆ!!

- ಆರ್. ಸುನಿಲ್,
ತರೀಕೆರೆ

# ಜಿಲ್ಲಾಧಿಕಾರಿಯಾಗುವುದು ಹೇಗೆ?

ಸಾಮಾನ್ಯವಾಗಿ ಎಲ್ಲಾ ವಿದ್ಯಾರ್ಥಿಗಳು ಒಳ್ಳೆಯ ಹುದ್ದೆಗಳಿಗೆ ಹೋಗುವ ಹಂಬಲ ಹೊತ್ತು ಕಾತರರಾಗಿರುತ್ತಾರೆ. ಇಂತಹದರಲ್ಲಿ ಜಿಲ್ಲಾಧಿಕಾರಿಯಾಗುವ ಕನಸು ಕಾಣುವ ಬಹಳಷ್ಟು ವಿದ್ಯಾರ್ಥಿಗಳನ್ನು ನಾವು ಕಾಣಬಹುದು. ಈ ಹುದ್ದೆಗೆ ಇರಬೇಕಾದ ಅರ್ಹತೆ, ಪಠ್ಯಕ್ರಮ ಹಾಗು ವಿಧಾನದ ಸರಿಯಾದ ಮಾಹಿತಿ ಮತ್ತು ಮಾರ್ಗದರ್ಶನವಿಲ್ಲದೆ ಈ ಆಸೆ ಕನಸಾಗಿಯೇ ಉಳಿಯುವ ಸಂಭವ ಹೆಚ್ಚು.

ಜಿಲ್ಲಾಧಿಕಾರಿಯಾಗಲು ಇರಬೇಕಾದ ಅರ್ಹತೆಗಳಲ್ಲಿ ಮುಖ್ಯವಾದುದು ಎಂದರೆ ಯು.ಪಿ.ಎಸ್.ಸಿ.ರವರು ನಡೆಸುವ ಐ.ಎ.ಎಸ್. (ಸಿವಿಲ್ ಸರ್ವಿಸ್) ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವುದು. ಐ.ಎ.ಎಸ್. ತೇರ್ಗಡೆ ಹೊಂದಿದ ವಿದ್ಯಾರ್ಥಿಗಳಿಗೆ ರ್‍ಯಾಂಕಿಂಗ್ ಆಧಾರದ ಮೇಲೆ ಪ್ರಪ್ರಥಮವಾಗಿ ಅಸಿಸ್ಟೆಂಟ್ ಕಮಿಷನರ್ ಹುದ್ದೆಯನ್ನು ಕೊಡಲಾಗುವುದು. ಈ ಹುದ್ದೆಗೆ ಮೊದಲು ಎರಡು ವರ್ಷ ಪ್ರೊಬೆಷನರಿ ಟ್ರೈನಿಂಗ್ ಕೊಡಲಾಗುವುದು. ಇದಾದ ನಂತರ ಜಿಲ್ಲಾಧಿಕಾರಿಯ ಹುದ್ದೆಯನ್ನು ಪಡೆಯಬಹುದು.

**ಅರ್ಹತೆಗಳು :**

೧. ವಿದ್ಯಾರ್ಥಿಯ ಕನಿಷ್ಠ ಮತ್ತು ಗರಿಷ್ಠ ವಯಸ್ಸು ೨೧ ಮತ್ತು ೨೮ (ಪರಿಶಿಷ್ಟ ಪಂಗಡ ಹಾಗೂ ಪರಿಶಿಷ್ಟ ಜಾತಿಯವರಿಗೆ ವಯಸ್ಸಿನ ಮಿತಿಯಲ್ಲಿ ೫ ವರ್ಷ ಹಾಗೂ ಇತರ ಹಿಂದುಳಿದ ಜಾತಿಯವರಿಗೆ ೩ ವರ್ಷ ಸಡಿಲಿಕೆ ಇರುತ್ತದೆ) ಆಗಿರಬೇಕು.

೨. ಸರಕಾರದಿಂದ ಮಾನ್ಯತೆ ಪಡೆದ ಯಾವುದೇ ಪದವಿಯನ್ನು ಹೊಂದಿರಬೇಕು.

೩. ಈ ಪರೀಕ್ಷೆಯನ್ನು ಒಬ್ಬ ವಿದ್ಯಾರ್ಥಿಯು ಗರಿಷ್ಠ ನಾಲ್ಕು ಬಾರಿ ಕಟ್ಟಬಹುದಾಗಿದೆ. ಆದರೆ ಪ.ಜಾ./ಪ.ಪಂಗಡದವರಿಗೆ ಪರೀಕ್ಷೆ ಅವಕಾಶದ ಮಿತಿ ಇರುವದಿಲ್ಲ ಮತ್ತು ಇತರ ಹಿಂದುಳಿದ ವರ್ಗದವರಿಗೆ ಏಳು ಬಾರಿ ಪರೀಕ್ಷೆ ಕಟ್ಟುವ ಅವಕಾಶ ಇರುತ್ತದೆ.

**ಆಯಾ ವೃತ್ತಿಗಳಲ್ಲಿ ಯಶಸ್ವಿಯಾದವರ ಮೂಲಕವೇ ವಿದ್ಯಾರ್ಥಿಗಳಿಗೆ ವೃತ್ತಿ ಮಾರ್ಗದರ್ಶನ ಮಾಡಿಸುವ ಅಪೂರ್ವ ಪ್ರಯೋಗವಿದು. ಪ್ರತಿ ತಿಂಗಳು ಒಬ್ಬ ವೃತ್ತಿ ನಿರತರು ನಿಮ್ಮ ಮುಂದೆ ಪ್ರತ್ಯಕ್ಷವಾಗಲಿದ್ದಾರೆ.**

**ಪರೀಕ್ಷೆಯ ವಿಧಾನ**

ಈ ಪರೀಕ್ಷೆಯನ್ನು ಒಟ್ಟಾರೆ ಮೂರು ಭಾಗಗಳನ್ನಾಗಿ ವಿಂಗಡಿಸಿದ್ದಾರೆ. ಅಂದರೆ ಮೊದಲನೆಯದಾಗಿ ವಿದ್ಯಾರ್ಥಿಯು ಪ್ರಿಲಿಮಿನರಿ (ಪೂರ್ವಭಾವಿ) ಪರೀಕ್ಷೆಯನ್ನು ಎದುರಿಸಬೇಕಾಗುವುದು. ಇದರಲ್ಲಿ ತೇರ್ಗಡೆಯಾದ ನಂತರ ಮೇನ್ (ಮುಖ್ಯ) ಪರೀಕ್ಷೆ ಎದುರಿಸಬೇಕಾಗುವುದು. ಇದರಲ್ಲಿ ತೇರ್ಗಡೆಯಾದ ನಂತರ ಸಂದರ್ಶನವನ್ನು ಎದುರಿಸಬೇಕಾಗುವುದು. ಈ ಮೇಲಿನ ರೀತಿಯಲ್ಲಿ ವಿದ್ಯಾರ್ಥಿಯನ್ನು ಆಯ್ಕೆ ಮಾಡಲಾಗುತ್ತದೆ.

**ಪರೀಕ್ಷೆಗೆ ಸಿದ್ಧತೆಗಳು**

ಈ ಪರೀಕ್ಷೆಯನ್ನು ತೇರ್ಗಡೆಯಾಗುವುದು ಅಭ್ಯರ್ಥಿಯ ಸ್ವಂತ ತಿಳುವಳಿಕೆಯ ಮೇಲೆ ಆಧಾರಪಟ್ಟಿರುತ್ತದೆ. ಇದಕ್ಕೆ ಅನುಗುಣವಾಗಿ ಸುಮಾರು ಪುಸ್ತಕಗಳು ಮಾರುಕಟ್ಟೆಯಲ್ಲಿ ದೊರೆಯುತ್ತವೆ. ಈ ಪುಸ್ತಕಗಳು ಓದಬೇಕಾದ ವಿಷಯಗಳು, ಹಿಂದಿನ ಪ್ರಶ್ನೋತ್ತರಗಳು ಹಾಗೂ ತೇರ್ಗಡೆ ಹೊಂದಲು ಕೆಲವು ಮುಂಜಾಗ್ರತೆ ಮಾಹಿತಿಗಳನ್ನು ಹೊಂದಿರುತ್ತವೆ. ಅಭ್ಯರ್ಥಿಯು ದಿನಾಲು ದಿನ ಪತ್ರಿಕೆ, ಮಾಸ ಪತ್ರಿಕೆ, ವಾರ ಪತ್ರಿಕೆಗಳು, ದೇಶಿಯ ಹಾಗೂ ವಿದೇಶಿಯ ಮಾಹಿತಿಗಳನ್ನು ಗ್ರಹಿಸುವುದು ಬಹಳ ಉಪಯೋಗಕಾರಿ. ಇದು ಅಭ್ಯರ್ಥಿಯ ವಿಚಾರ ಶಕ್ತಿಯನ್ನು ಹೆಚ್ಚಿಸುತ್ತದೆ. ಅಭ್ಯರ್ಥಿಯು ಇವಲ್ಲದೆ ಎಲ್ಲಾ ವಿಷಯಗಳಲ್ಲಿ ಅಂದರೆ, ಆಟ, ವಿಜ್ಞಾನ ತಾಂತ್ರಿಕತೆ, ಜನರಲ್ ಸ್ಟಡೀಸ್ ಇವುಗಳ ಬಗ್ಗೆ ಪೂರ್ಣ ಮಾಹಿತಿ ಹೊಂದಿರಬೇಕು. ಅಭ್ಯರ್ಥಿಯು ತನ್ನ ಸ್ವಂತ ವಿಷಯದ ಬಗ್ಗೆ ಹಾಗೂ ತಾನು ಇರುವ ಸ್ಥಳದ ಬಗ್ಗೆ, ಓದಿದ ವಿಷಯದ ಬಗ್ಗೆ ಆಳವಾದ ವಿಷಯ ಗ್ರಹಣ ಹೊಂದಿದ್ದು, ಇದನ್ನು ವಿಶ್ಲೇಷಿಸುವ ಸಾಮರ್ಥ್ಯ ಹೊಂದಿದವನಾಗಿರಬೇಕು.

ಸಾಕಷ್ಟು ವಿದ್ಯಾಸಂಸ್ಥೆಗಳು, ಖಾಸಗಿ ಸಂಸ್ಥೆಗಳು ನಗರಗಳಲ್ಲಿ ಈ ಪರೀಕ್ಷೆಗೆ ತರಬೇತಿಯನ್ನು ನಡೆಸುತ್ತಿವೆ. ಇದರ ಸದುಪಯೋಗ ಪಡೆದುಕೊಳ್ಳಬಹುದು.

**೪. ಅಭ್ಯಾಸಿಸಬೇಕಾದ ವಿಷಯಗಳು :**

ಈ ಪರೀಕ್ಷೆಗೆ ಕುಳಿತುಕೊಳ್ಳಬಯಸುವ ವಿದ್ಯಾರ್ಥಿಗಳು ಈ ಕೆಳಗೆ ತಿಳಿಸಿದ ವಿಷಯಗಳ ಬಗ್ಗೆ ಗಮನ ಹರಿಸಬೇಕಾಗುವುದು.

ಪ್ರಿಲಿಮಿನರಿ ಪರೀಕ್ಷೆಯು ಅಬ್ಜಕ್ಟೀವ್ ಪ್ರಶ್ನೆಗಳನ್ನು ಒಳಗೊಂಡಿರುತ್ತದೆ. ಈ ಪರೀಕ್ಷೆಯನ್ನು ಪ್ರತಿ ವರ್ಷ ಜೂನ್ ತಿಂಗಳಲ್ಲಿ ನಡೆಸಲಾಗುವುದು. ಮೊದಲನೆಯದಾಗಿ ಜನರಲ್ ಸ್ಟಡಿಸ್ (General Studies) ಪತ್ರಿಕೆಯು ೧೫೦ ಪ್ರಶ್ನೆಗಳನ್ನು ಹೊಂದಿದ್ದು, ೧೫೦ ಅಂಕಗಳನ್ನು ಒಳಗೊಂಡಿರುತ್ತದೆ. ಇದಕ್ಕೆ

# ಜಿಲ್ಲಾಧಿಕಾರಿ ಐ.ಎಂ. ವಿಠಲಮೂರ್ತಿ



ಪ್ರಸ್ತುತ ತುಮಕೂರು ಜಿಲ್ಲಾಧಿಕಾರಿಯಾಗಿರುವ ಐ.ಎಂ.ವಿಠಲಮೂರ್ತಿಯವರು ಹುಟ್ಟಿದ್ದು (೨.೮.೧೯೫೧) ಹಾಸನ ಜಿಲ್ಲೆಯ ಇರವಳ್ಳಿ ಎಂಬ ಗ್ರಾಮದಲ್ಲಿ. ಇರವಳ್ಳಿಯಲ್ಲಿ ಪ್ರಾಥಮಿಕ ಶಾಲೆ, ಬೇಲೂರಿನಲ್ಲಿ ಹೈಸ್ಕೂಲು ಪೂರೈಸಿ ಕಾಲೇಜು ಶಿಕ್ಷಣ ಪಡೆದದ್ದು ಬೆಂಗಳೂರಿನಲ್ಲಿ. ಅರ್ಥಶಾಸ್ತ್ರ ಪದವಿಯನ್ನು ಮೊದಲ ದರ್ಜೆಯಲ್ಲಿ ಪಾಸಾಗಿ ಸ್ನಾತಕೋತ್ತರ ಪದವಿಯನ್ನು ನಾಲ್ಕನೇ ರ್‍ಯಾಂಕ್ ಸಹಿತ ಪಡೆದಿದ್ದಾರೆ. ಆರಂಭದಲ್ಲಿ ಕೆಲ ಕಾಲ ಬೆಂಗಳೂರಿನ ಕಾಲೇಜೊಂದರಲ್ಲಿ ಉಪನ್ಯಾಸಕರಾಗಿ ಕೆಲಸ ಮಾಡಿದ ಅನುಭವ ಅವರಿಗಿದೆ. ೧೯೭೭ರಲ್ಲಿ ಸಹಾಯಕ ಆಯುಕ್ತ (ಎ.ಸಿ.)ರಾಗಿ ವೃತ್ತಿ ಬದುಕು ಶುರು ಮಾಡಿದ ವಿಠಲಮೂರ್ತಿಯವರು ಬೆಳಗಾವಿ, ಗದಗ, ಕೊಡಗು ಮುಂತಾದೆಡೆ ಕಾರ್ಯ ನಿರ್ವಹಿಸಿ ತಮ್ಮ ದಕ್ಷತೆ ಮೆರೆದಿದ್ದಾರೆ. ತದನಂತರ ಸರ್ಕಾರದ ವಿವಿಧ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತ ಬಂದಿರುವ ಇವರು ಅಪ್ಪಟ ಕನ್ನಡ ಪ್ರೇಮಿ. ೧೯೮೮ರಲ್ಲಿ ಮ್ಯಾಂಚೆಸ್ಟರ್‌ನಲ್ಲಿ ವಿಶ್ವ ಕನ್ನಡ ಸಮ್ಮೇಳನ ಸಂಘಟಿಸಿದ ಗರಿ ಅವರ ಸಾಧನೆಯ ಕಿರೀಟಕ್ಕಿದೆ. ವಿಶ್ವದ ಅನೇಕ ದೇಶಗಳನ್ನು ವಿವಿಧ ರಚನಾತ್ಮಕ ಉದ್ದೇಶಗಳಿಗಾಗಿ ಸಂದರ್ಶಿಸಿ ತಮ್ಮ ಅನುಭವದ ಪರಿಧಿ ವಿಸ್ತರಿಸಿಕೊಂಡಿದ್ದಾರೆ.

ಪತ್ನಿ ಲಲಿತಾ, ಪುತ್ರಿ ಗೌರಿ ಹಾಗೂ ಪುತ್ರ ಶ್ರೀರಾಮ್ ಅವರನ್ನೊಳಗೊಂಡ ವಿಠಲಮೂರ್ತಿಯವರ ಸಂಸಾರ ಚಿಕ್ಕದು; ಆದರ್ಶಪ್ರಾಯವಾದುದು.

ಈ ಹಿನ್ನೆಲೆಯ ಐ.ಎಂ.ವಿಠಲಮೂರ್ತಿಯವರು ಈ ಬಾರಿ ಜಿಲ್ಲಾಧಿಕಾರಿಗುವ ಆಕಾಂಕ್ಷೆ ಹೊತ್ತ ಬಿಸಿಲ ಬದುಕು ಓದುಗರಿಗಾಗಿ ವಿಶೇಷ ಮುತುವರ್ಜಿ ವಹಿಸಿ ಉಪಯುಕ್ತ ಮಾಹಿತಿ ಸಂಗ್ರಹಿಸಿಕೊಟ್ಟಿದ್ದಾರೆ.

ಸಮಯಾವಕಾಶ ಎಂದರೆ ೨ ಗಂಟೆಗಳು. ಇದು ಈ ವಿಷಯಗಳ ಮೇಲೆ ಆಧಾರ ಪಟ್ಟಿರುತ್ತದೆ. ಅವೆಂದರೆ ಇಂಡಿಯನ್ ಹಿಸ್ಟರಿ, ಕನ್‌ಸ್ಟಿಟ್ಯೂಷನ್ ಆಫ್ ಇಂಡಿಯ, ಜಿಯೋಗ್ರಫಿ, ಎಕಾನಾಮಿಕ್ಸ್, ಸೈನ್ಸ್ ಮತ್ತು ಕರೆಂಟ್ ಅಫೇರ್ಸ್.

ಎರಡನೆಯದಾಗಿ ಐಚ್ಛಿಕ ವಿಷಯ ಇದ್ದು, ಇದು ವಿದ್ಯಾರ್ಥಿಯ ಇಚ್ಛೆಗೆ ಸಂಬಂಧ ಪಟ್ಟಿರುತ್ತದೆ. ಈ ಪತ್ರಿಕೆಯು ೩೦೦ ಅಂಕಗಳನ್ನು ಹೊಂದಿದ್ದು ೧೨೦ ಪ್ರಶ್ನೆಗಳಿಗೆ ಉತ್ತರಿಸಬೇಕಾಗುವುದು. ಇದಕ್ಕೆ ಕೂಡಾ ಸಮಯಾವಕಾಶ ೨ ಗಂಟೆಗಳು.

ಈ ಮೇಲಿನ ಎರಡು ಪತ್ರಿಕೆಗಳು ಅಬ್ಜಕ್ಟೀವ್ ಪ್ರಶ್ನೆಗಳನ್ನು ಹೊಂದಿದ್ದು, ಪ್ರತಿ ವರ್ಷ ಸುಮಾರು ೧,೫೦,೦೦೦ ಅಭ್ಯರ್ಥಿಗಳು ಹಾಜರಾಗ್ಗಿ ಅದರಲ್ಲಿ ಸುಮಾರು ೧೦,೦೦೦ ಅಭ್ಯರ್ಥಿಗಳು ಮೇನ್ (ಮುಖ್ಯ) ಪರೀಕ್ಷೆಗೆ ಅರ್ಹರಾಗುತ್ತಾರೆ.

ಮೇನ್ ಪರಿಕ್ಷೆಯು ಕೂಡ ಲಿಖಿತ ಪರೀಕ್ಷೆಯಾಗಿದ್ದು ಇದನ್ನು ನವೆಂಬರ್/ ಡಿಸೆಂಬರ್ ತಿಂಗಳಲ್ಲಿ ನಡೆಸಲಾಗುವುದು. ಈ ಪರೀಕ್ಷೆಗಳನ್ನು ಕೆಳಗಿನ ರೀತಿಯಲ್ಲಿ ನಡೆಸುತ್ತಾರೆ. ಪ್ರಶ್ನೆ ಪತ್ರಿಕೆ ಇಂಗ್ಲಿಷ್ ಹಾಗೂ ಹಿಂದಿ ಭಾಷೆಯಲ್ಲಿರುತ್ತದೆ. ಇಂಗ್ಲಿಷ್ ಭಾಷಾ ಪತ್ರಿಕೆಯೊಂದನ್ನು ಹೊರತು ಪಡಿಸಿ ಉಳಿದ ವಿಷಯಗಳನ್ನು ತಮ್ಮದೇ ಪ್ರಾದೇಶಿಕ (ಕನ್ನಡ) ಭಾಷೆಯಲ್ಲಿ ಬರೆಯಲು ಅವಕಾಶವಿರುತ್ತದೆ.

★ ಎರಡು ಭಾಷೆಯ ಪತ್ರಿಕೆಗಳು : ಒಂದನ್ನು ಆಂಗ್ಲ ಭಾಷೆಯಲ್ಲಿ ಹಾಗೂ ಮತ್ತೊಂದು ಯಾವುದಾದರೂ ಭಾರತೀಯ ಭಾಷೆಯಲ್ಲಿ ಬರೆಯಬೇಕಾಗುವುದು. ಇದರಲ್ಲಿನ ಅಂಕಗಳನ್ನು ಮೊತ್ತ (ರ್‍ಯಾಂಕ್ ನಿರ್ಧರಿಸುವ) ಅಂಕಗಳಲ್ಲಿ ಪರಿಗಣಿಸಲಾಗು

## ಐ.ಎ.ಎಸ್. ಮಾಡಲು ತರಬೇತಿ ಎಲ್ಲಿ?

ರಾಷ್ಟ್ರಮಟ್ಟದಲ್ಲಿ ನಡೆಯುವ ಐ.ಎ.ಎಸ್. ಪರೀಕ್ಷೆ ಪಾಸಾಗಲು ಅಭ್ಯರ್ಥಿಯ ಪ್ರತಿಭೆ, ಸಿದ್ಧತೆಯಷ್ಟೇ ಮುಖ್ಯವಾದ ಇನ್ನೊಂದು ಅಗತ್ಯವೆಂದರೆ ತರಬೇತಿ. ಅನುಭವಿ ವ್ಯಕ್ತಿಗಳ ಮಾರ್ಗದರ್ಶನದಲ್ಲಿ ತರಬೇತಿ ಹೊಂದಿದ ಅಭ್ಯರ್ಥಿಗಳು ಯಶಸ್ಸು ಕಾಣುವ ಸಾಧ್ಯತೆ ಹೆಚ್ಚು. ಹಾಗಾದರೆ ಇಂತಹ ಅನುಭವಿ ಮಾರ್ಗದರ್ಶಿಗಳನ್ನು ಹುಡುಕುವುದು ಎಲ್ಲಿ? ಐ.ಎ.ಎಸ್. ಆಕಾಂಕ್ಷಿಗಳಿಗೆ ತರಬೇತಿ ನೀಡುವ ಸಂಸ್ಥೆಗಳಾವುವು?

ಈ ಬಗ್ಗೆ ವಿವರಗಳನ್ನು, ಮಾರ್ಗದರ್ಶನವನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು.

.......ಮುಂದಿನ ಸಂಚಿಕೆ ನಿರೀಕ್ಷಿಸಿ !

ವುದಿಲ್ಲಾ. ಆದರೆ ಈ ಪತ್ರಿಕೆಗಳಲ್ಲಿ ತೇರ್ಗಡೆಯಾಗುವುದು ಅವಶ್ಯಕವಾಗಿರುತ್ತದೆ.

★ **ಎರಡು ಜನರಲ್ ಸ್ಟಡೀಸ್ ಪತ್ರಿಕೆಗಳು :** ಒಂದೊಂದು ಪತ್ರಿಕೆ ೩೦೦ ಅಂಕಗಳನ್ನು ಹೊಂದಿದ್ದು ಮೊತ್ತ ೬೦೦ ಅಂಕಗಳಿಗೆ ಇರುತ್ತದೆ.

★ **ನಾಲ್ಕು ಪತ್ರಿಕೆಗಳು ಐಚ್ಛಿಕ ವಿಷಯಗಳನ್ನು ಹೊಂದಿರುತ್ತವೆ :** ಪ್ರತಿ ಪತ್ರಿಕೆಯು ೩೦೦ ಅಂಕಗಳನ್ನು ಹೊಂದಿದ್ದು ಒಟ್ಟು ೧೨೦೦ ಅಂಕಗಳನ್ನು ಹೊಂದಿರುತ್ತದೆ. ಇದು ಟಿಪ್ಪಣಿ ರೂಪದಲ್ಲಿ ಇರುತ್ತದೆ. ಈ ಪರೀಕ್ಷೆಯಲ್ಲಿ ಸುಮಾರು ೨೦೦೦ ಅಭ್ಯರ್ಥಿಗಳು ತೇರ್ಗಡೆಯಾಗುತ್ತಾರೆ.

**ಮೂರನೆಯದಾಗಿ ಸಂದರ್ಶನ ಪರೀಕ್ಷೆ :** ಇದು ಕೊನೆಯ ಹಂತವಾಗಿದ್ದು, ಇದರಲ್ಲಿ ಮೌಖಿಕ ಪ್ರಶ್ನೆಗಳನ್ನು ಕೇಳಲಾಗುವುದು. ಈ ಹಂತವು ಒಟ್ಟಾರೆ ೨೫೦ ಅಂಕಗಳನ್ನು ಹೊಂದಿದ್ದು ೨೦೦೦ ಅಭ್ಯರ್ಥಿಗಳಲ್ಲಿ ಸುಮಾರು ೧೦೦೦ ಅಭ್ಯರ್ಥಿಗಳು ತೇರ್ಗಡೆ ಯಾಗುತ್ತಾರೆ. ರ್‍ಯಾಂಕಿಂಗ್ ವಿಧಾನದಲ್ಲಿ ಹುದ್ದೆಗಳನ್ನು ಕೊಡಲಾಗುವುದು. ಮೊದಲ ೧೦೦ ಅಭ್ಯರ್ಥಿಗಳನ್ನು ಐ.ಎ.ಎಸ್. ಹಾಗೂ ನಂತರ ಸುಮಾರು ೧೫೦ ಅಭ್ಯರ್ಥಿಗಳನ್ನು ಐ.ಪಿ.ಎಸ್. ಇನ್ನುಳಿದ ಅಭ್ಯರ್ಥಿಗಳನ್ನು ಸಂಬಂಧಪಟ್ಟ ಇಲಾಖೆಗಳಲ್ಲಿ ಭರ್ತಿ ಮಾಡುತ್ತಾರೆ.

○ ***ನಿರೂಪಣೆ : ಡಾ. ಎಸ್.ಸಿ. ಶರ್ಮಾ***

## ಮುಂದಿನ ಸಂಚಿಕೆಯಲ್ಲಿ

ಯು. ಪಿ. ಎಸ್. ಸಿ. ಪಠ್ಯಕ್ರಮದಲ್ಲಿ ಅಳವಡಿಸಿದ ಕನ್ನಡ ಪುಸ್ತಕಗಳ ವಿವರ ಹಾಗೂ ಐಚ್ಛಿಕ ವಿಷಯಗಳ ಮಾಹಿತಿ ಪ್ರಕಟಿಸಲಾಗುವುದು.

**ಶಾಂತಿ**

ಹೆಂಡತಿಯ ಕಟಿ-ಪಿಟಿಗೆ
ಬೇಸತ್ತು ಮನೆಯಿಂದ
'ಶಾಂತಿ-ಶಾಂತಿ' ಎಂದು
ಮನಃಶಾಂತಿಯನ್ನರಸುತ್ತಾ
ಹೊರ ಹೊರಟವಗೆ -



ಪಕ್ಕದ ಮನೆಯ
ಗಯ್ಯಾಳಿ ಶಾಂತಿ
'ಅಯ್ಯೋ ನಾನಿಲ್ಲೇ
ಇದ್ದೀನಲ್ಲಾ. ಬನ್ನಿ' ಎನ್ನಬೇಕೇ.

- ಜಗದೀಶ ಶ. ದುದ್ದಿ

# ನಮಗೊಬ್ಬಳೇ ಮಗಳು !

ನೀವು ಒಬ್ಬಳೇ ಮಗಳನ್ನು ಹೆತ್ತವರೇ? ಹಾಗಾದರೆ ನಿಮ್ಮ ಬಾವನೆ, ಅನುಭವ, ಚಿಂತನೆಯನ್ನು ಹಂಚಿಕೊಳ್ಳಲು ನಿಮಗಿದೋ ಸುವರ್ಣಾವಕಾಶ!

ಬಹುಪಾಲು ಜನ ಗಂಡು ಮಗುವಿಗಾಗಿ ಹಾತೊರೆಯುವಾಗ ನೀವೇಕೆ ಒಂದೇ ಹೆಣ್ಣು ಮಗುವಿಗೆ ತೃಪ್ತಿಪಟ್ಟಿರಿ? ನೀವು ತೆಗೆದುಕೊಂಡ ನಿರ್ಧಾರದ ಬಗ್ಗೆ ಈಗ ನಿಮಗೆ ಏನೆನ್ನಿಸುತ್ತದೆ? ಹೆಣ್ಣು ಹೆತ್ತಿದ್ದಕ್ಕೆ ಅಭಿಮಾನ ಪಡುತ್ತಿರೋ ಅಥವಾ ಪಶ್ಚಾತ್ತಾಪ ಪಡುತ್ತೀರೋ? ಈ ಬಗ್ಗೆ ನಿಮ್ಮ ಕುಟುಂಬದ, ಸ್ನೇಹಿತರ, ನೆರೆಹೊರೆಯವರ ಅಭಿಪ್ರಾಯ ಏನಿದೆ? ಒಂದೇ ಹೆಣ್ಣು ಸಾಕು ಎಂಬ ನಿರ್ಧಾರವನ್ನು ನೀವು ಮತ್ತು ನಿಮ್ಮ ಸಂಗಾತಿ ಒಟ್ಟಾಗಿ ತೆಗೆದುಕೊಂಡಿರಾ? ಅಥವಾ ನೀವು ನಿಮ್ಮ ಸಂಗಾತಿಯನ್ನು ಒಪ್ಪಿಸಲು ಪ್ರಯಾಸ ಪಡಬೇಕಾಯಿತೇ?

ಈ ವಿಷಯದ ಬಗ್ಗೆ ಒಬ್ಬಳೇ ಮಗಳ ತಂದೆ ಅಥವಾ ತಾಯಿ ಅಥವಾ ಹೆತ್ತವರಿಬ್ಬರೂ ಒಂದು ಪುಟದಲ್ಲಿ ತಮ್ಮ ಅಭಿಪ್ರಾಯ ಬರೆದು ಕಳಿಸಬಹುದು. ಮಗಳೊಂದಿಗಿನ ಹೆತ್ತವರ ಭಾವಚಿತ್ರವನ್ನು ಅಗತ್ಯವಾಗಿ ಕಳಿಸಿಕೊಡಿ. ನಿಮ್ಮ ಬರಹ-ಭಾವಚಿತ್ರ ಮುಂದಿನ ಸಂಚಿಕೆಯಲ್ಲಿ ಪ್ರಕಟಗೊಳ್ಳುತ್ತದೆ. ಬರಹ ತಲುಪಲು ಅಂತಿಮ ದಿನಾಂಕ : ೩.೯.೧೯೯೭

ವಿಳಾಸ :
**ಬಿಸಿಲ ಬದುಕು** ಮಾಸ ಪತ್ರಿಕೆ
ಅಂಚೆ ಪೆಟ್ಟಿಗೆ : 7951, ಬಸವೇಶ್ವರನಗರ, ಬೆಂಗಳೂರು-560 079



ಕೋಚ್ಚೆ ಚಿಂತನ

# ಪ್ರಾಥಮಿಕ ಶಿಕ್ಷಣಕ್ಕೆ ಸಂವಿಧಾನ ತಿದ್ದುಪಡಿ !?

○ ಕೋ. ಚೆನ್ನಬಸಪ್ಪ
ನಿವೃತ್ತ ನ್ಯಾಯಾಧೀಶರು
೧೨೭, ಪಶ್ಚಿಮ ಕಾರ್ಡ್ ರಸ್ತೆ, ಮಹಾಲಕ್ಷ್ಮೀಪುರ,
ಬೆಂಗಳೂರು - ೫೬೦ ೦೮೬

**೫೦ ವರ್ಷಗಳವರೆಗೆ ಕೇವಲ ಶೇ. ೫೦ರಷ್ಟು ಮಕ್ಕಳನ್ನಾದರೂ ಸಾಕ್ಷರಸ್ಥರನ್ನಾಗಿ ಮಾಡಲಾರದ ಹೇಡಿಗಳು ನಿರ್ಲಜ್ಜ ನೀಚರು ಸಂವಿಧಾನ ತಿದ್ದುಪಡಿಯಿಂದ ಅಂಗೈಯಲ್ಲಿ ಸಾಕ್ಷರತೆಯ ಸ್ವರ್ಗ ತೋರಿಸುವ ಯಕ್ಷಿಣಿ ವಿದ್ಯೆಗೆ ತೊಡಗಿದ್ದಾರೆ. ಇದು ಶುದ್ಧ ಮೋಸ ಎಂದು ಅವರ ಮುಖಕ್ಕೆ ಮಂಗಳಾರತಿ ಎತ್ತುವ ಜನ ಯಾರಿದ್ದಾರೆ?**

ಐವತ್ತೊಂದು ವರ್ಷಗಳ ಹಿಂದೆ, ಸ್ವಾತಂತ್ರ್ಯ ಬಂದ ಒಂದು ವರ್ಷಕ್ಕಿಂತ ಮೊದಲು ನಮ್ಮ ಸಂವಿಧಾನ ಕರ್ತೃಗಳು, ಈ ದೇಶದ ಹದಿನಾಲ್ಕು ವರ್ಷದ ಎಲ್ಲ ಮಕ್ಕಳಿಗೂ ಉಚಿತ, ಕಡ್ಡಾಯ ಶಿಕ್ಷಣವನ್ನು ಕೊಡಬೇಕೆಂದು, ಸಂವಿಧಾನದಲ್ಲಿ ರಾಜ್ಯಾಡಳಿತೆಯ ನಿರ್ದೇಶಕ ಸೂತ್ರಗಳಲ್ಲಿ ಲಿಖಿಸಿದರು. ಅಲ್ಲಿಂದ ಇಲ್ಲಿಗೆ (೧೯೪೬ ರಿಂದ ೧೯೯೭ರವರೆಗೆ) ೫೧ ವರ್ಷಗಳು ಸಂದು ಹೋದವು! ಸಂವಿಧಾನದ ಈ ಆರ್ಟಿಕಲ್ ೪೫ ಎಷ್ಟರ ಮಟ್ಟಿಗೆ ಈಡೇರಿದೆ? ಸ್ವಾತಂತ್ರ್ಯದ ಸುವರ್ಣ ಮಹೋತ್ಸವದ ಅದ್ದೂರಿ ಏರ್ಪಾಟು ಮಾಡಿಕೊಳ್ಳುತ್ತಿರುವ ಈ ದಿನ ಇದನ್ನು ಆಲೋಚಿಸಬೇಕು.

೧೯೪೧ರಲ್ಲಿ ಈ ದೇಶದ ಪ್ರಜೆಗಳಲ್ಲಿ ಕೇವಲ ಶೇಕಡಾ ೧೬.೧೦ರಷ್ಟು ಜನ ಮಾತ್ರ ಅಕ್ಷರಸ್ಥರಿದ್ದರು. ೧೯೫೧ರಲ್ಲಿ ಸಂವಿಧಾನ ಜಾರಿಯಲ್ಲಿ ಬಂದ ಮರು ವರ್ಷ ಶೇಕಡಾ ೧೬.೬೭ರಷ್ಟಿತ್ತು. ಹತ್ತು ವರ್ಷಗಳಲ್ಲಿ ಕೇವಲ ಶೇ. ೦.೫೭ರಷ್ಟು ಜನರು ಮಾತ್ರ ಹೆಚ್ಚು ಅಕ್ಷರಸ್ಥರಾದರು. ೧೯೮೧ರಲ್ಲಿ ಎಷ್ಟಿರಬಹುದು? ರಾಷ್ಟ್ರೀಯ ಸಂಪನ್ಮೂಲಾಭಿವೃದ್ಧಿ ಇಲಾಖೆ ಜನವರಿ ೧೯೮೮ರಲ್ಲಿ ಪ್ರಕಟಿಸಿರುವ ಅಧಿಕೃತ ವರದಿಯ ಪ್ರಕಾರ ೧೯೮೧ರಲ್ಲಿ ಶೇಕಡಾ ೩೬.೨೩ರಷ್ಟು ಜನ ಮಾತ್ರ ಅಕ್ಷರಸ್ಥರಾಗಿದ್ದರಂತೆ!

೧೯೯೧ರಲ್ಲಿ ಎಷ್ಟಿರಬಹುದು? ೧೯೯೩ರಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಿಯಾಗಿದ್ದ ಮಾಧವರಾವ್ ಸಿಂಧ್ಯ ಬಹಿರಂಗ ಪಡಿಸಿದಂತೆ ೧೯೯೧ರಲ್ಲಿ ಶೇಕಡಾ ೫೨.೧ರಷ್ಟು ಜನರು ಮಾತ್ರ ಅಕ್ಷರಸ್ಥರಾಗಿದ್ದರು. ಈ ಅಂಕಿಯಲ್ಲಿ ರಾತ್ರಿ ಶಾಲೆ (ವಯಸ್ಕರ ಶಿಕ್ಷಣ ಶಾಲೆಗಳನ್ನು ನಾವು ರಾತ್ರಿ ಶಾಲೆಗಳೆಂದೇ ಕರೆಯುತ್ತಿದ್ದೆವು) ಗಳಲ್ಲಿ ರಾಮ, ಭೀಮ, ಬಸವ, ಕಮಲ ಎಂದು ಗೀಚಲು ಕಲಿತ ೧೫-೩೫ರ ವಯೋಮಿತಿಯ ಜನರೂ ಸೇರಿದ್ದರಂತೆ. ೧೫-೩೫ರ ವಯೋಮಿತಿಯವರೆ ಶೇಕಡಾ ೪೧ರಷ್ಟು ಜನರು ಇದ್ದರಂತೆ! ಅಂದರೆ ೬-೧೪ರ ವಯೋಮಿತಿಯ ಶಾಲಾ ಬಾಲಕರಲ್ಲಿ ಅಕ್ಷರಸ್ಥರಾಗಿದ್ದವರು ಶೇಕಡಾ ೪೦-೪೫ಕ್ಕಿಂತ ಹೆಚ್ಚಿರಲಿಲ್ಲ-೧೯೯೧ರಲ್ಲಿ.

ಆದರೆ ನಮ್ಮ ಈಗಿನ ಮಾನವ ಸಂಪನ್ಮೂಲ ಕೇಂದ್ರ ಮಂತ್ರಿಗಳು ಇತ್ತೀಚೆಗೆ ಜುಲೈ ಮೊದಲ ವಾರದಲ್ಲಿ ೨೦೦೦ ಇಸ್ವಿಯ ಹೊತ್ತಿಗೆ ಸಂಪೂರ್ಣ ಶೇಕಡಾ ೧೦೦ರಷ್ಟು ಶಾಲಾ ಬಾಲಕರನ್ನು ಸಾಕ್ಷರಸ್ಥರನ್ನಾಗಿ ಮಾಡಲು ಪಣತೊಟ್ಟು ಬಹಿರಂಗ ಘೋಷಣೆ ಮಾಡಿದರು! ಈ ಗುರಿ ಸಾಧಿಸಲು ಈ ವರ್ಷ ೪೦ ಕೋಟಿ ರೂಪಾಯಿಗಳನ್ನು ನಿಂತಕಾಲ ಮೇಲೆ ಮಂಜೂರು ಮಾಡಿದರು! ಅದೇ ಸಂದರ್ಭದಲ್ಲಿ ಇನ್ನೊಂದು ಘನವಾದ ದುಂದುಭಿ ಬಾರಿಸಿದರು. ಇದುವರೆಗೆ ರಾಜ್ಯಾಡಳಿತೆಯ ನಿರ್ದೇಶಕ ಸೂತ್ರಗಳಲ್ಲಿದ್ದ-೧೪ ವರ್ಷ ವಯೋಮಿತಿಯಲ್ಲಿರುವ ಎಲ್ಲ ಮಕ್ಕಳಿಗೂ ಉಚಿತ, ಕಡ್ಡಾಯ ಶಿಕ್ಷಣ ಕೊಡಬೇಕೆಂಬ ಆರ್ಟಿಕಲ್ ೪೫ರನ್ನು ಆರ್ಟೀಕಲ್ ೧೯ಕ್ಕೆ ವರ್ಗಾಯಿಸಿ ಪ್ರಾಥಮಿಕ ಶಿಕ್ಷಣ ಪ್ರಜೆಗಳ ಮೂಲಭೂತ ಹಕ್ಕು (Fundamental Right) ಎಂದು ಸಂವಿಧಾನವನ್ನೆ ತಿದ್ದುಪಡಿ ಮಾಡಲಾಗುವುದೆಂದು ಅಪ್ಪಣೆ ಕೊಡಿಸಿದರು. ಇದೇ ಮಾತನ್ನು ನಮ್ಮ ಮಹಾ ಪ್ರಧಾನಿಗಳೂ ಸಾರಿದರು. ಈ ಮಳೆಗಾಲದ

ಅಧಿವೇಶನದಲ್ಲಿ ಸಂವಿಧಾನ ತಿದ್ದುಪಡಿ ಮಸೂದೆಯನ್ನು ಸಂಸತ್ತಿನಲ್ಲಿ ಮಂಡಿಸಿ ಮಂಜೂರು ಮಾಡುವುದಾಗಿ ಕೇಂದ್ರ ಸರ್ಕಾರ ನಿರ್ಧರಿಸಿದೆಯಂತೆ!!

ಕೇಂದ್ರ ಸರ್ಕಾರದ ಈ ನಿರ್ಧಾರ, ಈ ಘೋಷಣೆಯನ್ನು ಕೇಳಿದರೆ ತಿಳಿಯದ ಜನರಿಗೆ ಖುಷಿ ಆಗಬಹುದು. ಸಂಸದರು ತಾವೇನೊ ಘನವಾದದ್ದನ್ನು ಸಾಧಿಸಿದೆನೆಂದು ಭಾವಿಸಿಕೊಳ್ಳಬಹುದು. ಆದರೆ ಇದುವರೆಗೆ ಆಳಿದವರ ನಡತೆಯನ್ನು, ಆಗಿರುವ ಪ್ರಾಥಮಿಕ ಕಡ್ಡಾಯ ಉಚಿತ ಶಿಕ್ಷಣದ ಪ್ರಗತಿಯನ್ನು ಗಮನಿಸಿದರೆ ಸರ್ಕಾರ ಪ್ರಜೆಗಳ ಕಣ್ಣಿಗೆ ಮಣ್ಣೆರಚುವ, ಅವರ ಬುದ್ಧಿಗೆ ಮಂಕು ಹಿಡಿಸುವ, ತಮ್ಮ ಕರ್ತವ್ಯ ಲೋಪವನ್ನು ಮುಚ್ಚಿಕೊಳ್ಳುವ ನಯವಾದ ವಂಚನೆ, ಕಪಟನಾಟಕ, ಮಹಾಮೋಸ ಎಂಬುದು ಎಂಥವರಿಗಾದರೂ ಅರ್ಥವಾದೀತು. ೫೦ ವರ್ಷಗಳವರೆಗೆ ಕೇವಲ ಶೇ. ೫೦ರಷ್ಟು ಮಕ್ಕಳನ್ನಾದರೂ ಸಾಕ್ಷರಸ್ಥರನ್ನಾಗಿ ಮಾಡಲಾರದ ಹೇಡಿಗಳು. ನಿರ್ಲಜ್ಜ ನೀಚರು ಸಂವಿಧಾನ ತಿದ್ದುಪಡಿಯಿಂದ ಅಂಗೈಯಲ್ಲಿ ಸಾಕ್ಷರತೆಯ ಸ್ವರ್ಗ ತೋರಿಸುವ ಯಕ್ಷಿಣಿ ವಿದ್ಯೆಗೆ ತೊಡಗಿದ್ದಾರೆ. ಇದು ಶುದ್ಧ ಮೋಸ ಎಂಥು ಅವರ ಮುಖಕ್ಕೆ ಮಂಗಳಾರತಿ ಎತ್ತುವ.... ಜನ ಯಾರಿದ್ದಾರೆ?

ಉಚಿತ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಕೊಡಲು ಈ ದೇಶದ ಯಾವ ಕಾನೂನು ಅಡ್ಡಿಯಾಗಿದೆ? ಹಾಗೆ ಹೇಳಬೇಕೆಂದರೆ ಕಾನೂನಿನ ಅಡ್ಡಿಯ ಮಾತಿರಲಿ, ೧೯೧೩-೧೪ ರಷ್ಟು ಹಿಂದೆಯೆ ಹಳೆಯ ಮೈಸೂರಿನಲ್ಲಿ ಮಹಾರಾಜರಕಾಲದಲ್ಲೆ ಪ್ರಾಥಮಿಕ ಶಿಕ್ಷಣವನ್ನು ಉಚಿತವಾಗಿ ಕಡ್ಡಾಯವಾಗಿ ಕೊಡುವ ಶಾಸನವನ್ನೇ ಮಾಡಿದ್ದರು. ೧೯೪೧ರಲ್ಲಿ ಅದುವರೆಗೆ ಜಿಲ್ಲಾ ಬೋರ್ಡ್ ವ್ಯಾಪ್ತಿಯಲ್ಲಿದ್ದ ಈ ಕಾಯಿದೆಯನ್ನು ತಿದ್ದಿ ರಾಜ್ಯ ಸರ್ಕಾರವೆ ಉಚಿತ ಶಿಕ್ಷಣ ಕೊಡುವ ಕಾಯಿದೆಯನ್ನು ಮಂಜೂರು ಮಾಡಿದರು. ೧೯೬೧ರಲ್ಲಿ ಕರ್ನಾಟಕ ರಾಜ್ಯ ಸರ್ಕಾರ ಕಡ್ಡಾಯ ಪ್ರಾಥಮಿಕ ಶಿಕ್ಷಣ ಕೊಡಲು ಶಪಥ ಮಾಡಿ ಕಾಯಿದೆಯ ಮೂಲಕ ಅಧಿಕಾರ ಪಡೆದುಕೊಂಡಿತು. ಮಕ್ಕಳನ್ನು ಶಾಲೆಗೆ ಕಳಿಸದಿದ್ದರೆ ಹೆತ್ತವರು ಶಿಕ್ಷೆ ಅನುಭವಿಸಬೇಕಾಗುವ ಶಾಸನವನ್ನು ಮಂಜೂರು ಮಾಡಿದರು.

ಹಾಗಾದರೆ ೧೪ ವರ್ಷದ ಒಳಗಿನ ಮಕ್ಕಳಿಗೆ ಉಚಿತ ಕಡ್ಡಾಯ ಪ್ರಾಥಮಿಕ ಶಿಕ್ಷಣ ಕೊಡಲು ಸರ್ಕಾರಕ್ಕೆ ಯಾವ ಕಾನೂನಿನ ಅಡ್ಡಿ ಬಂದಿತ್ತು? ಯಾವುದಾದರೂ ಕಾನೂನಿನ ಅಡ್ಡಿ ಇದ್ದರೆ ಸಂವಿಧಾನವನ್ನು ತಿದ್ದುಪಡಿ ಮಾಡಿ. ರಾಜ್ಯದ ಶಾಸನವನ್ನು ಯಾವ ನ್ಯಾಯಾಲಯದಲ್ಲೂ ಪ್ರಶ್ನಿಸುವಂತಿಲ್ಲ ಎಂದು ೯ನೆ ಪರಿಶಿಷ್ಟದಲ್ಲಿ ಸೇರಿಸಬಹುದು. ಭೂ ಸುಧಾರಣೆ ಕಾಯಿದೆಯನ್ನು ಜಾರಿಯಲ್ಲಿ ತರಲು ೧೯೫೧ರಲ್ಲಿ ಆರ್ಟಿಕಲ್ ೩೧ ಅಡ್ಡಿಯಾಗಿತ್ತೆಂದು (ಆಸ್ತಿಯ ಮೂಲಭೂತ ಹಕ್ಕನ್ನು) ಸಂವಿಧಾನ ತಿದ್ದುಪಡಿಯ ಮೂಲಕ ಕೈಬಿಡಲಾಯಿತು. ಕಡ್ಡಾಯವಾಗಿ ಉಚಿತ ಪ್ರಾಥಮಿಕ ಶಿಕ್ಷಣ ಕೊಡಲು ರಾಜ್ಯ ಸರ್ಕಾರ ಶಾಲಾ ಕಟ್ಟಡ ಕಟ್ಟಿಸಲು, ಉಪಾಧ್ಯಾಯರ ನೇಮಕ ಮಾಡಲು, ಪಾಠ-ಪೀಠೋಪಕರಣಗಳನ್ನು ಪಠ್ಯ ಪುಸ್ತಕಗಳನ್ನು ಒದಗಿಸಲು, ಬಡ ಮಕ್ಕಳನ್ನು ಶಾಲೆಗೆ ಆಕರ್ಷಿಸಲು ಊಟ ತಿಂಡಿ ಸಮವಸ್ತ್ರ ಒದಗಿಸಲು ಯಾವ ಕಾನೂನು ಅಡ್ಡಿ ಬರುತ್ತದೆ? ಯಾವ ಆರ್ಟಿಕಲ್ ಅನ್ನು ಸೇರಿಸಿ ಅಥವಾ ಕೈಬಿಟ್ಟು ಸಂವಿಧಾನದಿಂದ ಸರ್ಕಾರ ಅಧಿಕಾರ ಪಡೆದುಕೊಳ್ಳಬೇಕಾಗಿದೆ?

ಪಠ್ಯಪುಸ್ತಕಗಳ ಪ್ರಕಟಣೆಯ ಸರ್ವ ಅಧಿಕಾರವನ್ನು ಪಂಜಾಬ್ ರಾಜ್ಯ ಸರ್ಕಾರವೆ ವಹಿಸಿಕೊಂಡಾಗ-ಖಾಸಗಿ ಪ್ರಕಾಶಕರು ಪಠ್ಯಪುಸ್ತಕಗಳನ್ನು ಪ್ರಕಟಿಸಬಾರದೆಂದು ಆಜ್ಞೆ ಮಾಡಿದಾಗ, ಪುಸ್ತಕ ಪ್ರಕಾಶಕರು, ಸರ್ಕಾರದ ಆಜ್ಞೆ ಯಾವ ವೃತ್ತಿಯನ್ನಾದರೂ ಕೈಕೊಳ್ಳುವ ಸಂವಿಧಾನದತ್ತ ಮೂಲಭೂತ ಹಕ್ಕಿಗೆ ಭಂಗ ಬರುತ್ತದೆ ಎಂದು ರಿಟ್ ದಾಖಲು ಮಾಡಿದಾಗ ಸುಪ್ರೀಂ ಕೋರ್ಟ್ ಆ ವಾದವನ್ನು ತಳ್ಳಿಹಾಕಿ ಪಠ್ಯಪುಸ್ತಕ ಪ್ರಕಟನೆಯ ಹಕ್ಕು ಮೂಲಭೂತ ವೃತ್ತಿ ಸ್ವಾತಂತ್ರ್ಯವಲ್ಲ ಎಂದು ತೀರ್ಪು ನೀಡಿತು.

ಶಾಲಾ ಕಟ್ಟಡ ಕಟ್ಟಿಸಲು ಭೂಮಿ ಬೇಕೆಂದರೆ ಭೂ ಸ್ವಾಧೀನ ಕಾಯಿದೆಯ ಕೆಳಗೆ ಭೂಮಿಯನ್ನು ಸರ್ಕಾರ ಸ್ವಾಧೀನ ಪಡಿಸಿಕೊಳ್ಳಬಹುದು. ಜಲಾಶಯ ನಿರ್ಮಾಣದ ಹೆಸರಿನಲ್ಲಿ, ಕಾರ್ಖಾನೆಗಳ ಸ್ಥಾಪನೆಗಾಗಿ ಸಹಸ್ರಾರು ಎಕರೆ ನೀರಾವರಿ ಭೂಮಿಯನ್ನು, ತೋಟ ಗದ್ದೆಗಳನ್ನು ಮನೆ ಮಠ ಶಾಲೆಗಳನ್ನು ಮುಳುಗಿಸಿ ಜನರನ್ನು ನಿರ್ಗತಿಕರನ್ನಾಗಿ ಮಾಡಿ ಭೂ ಸ್ವಾಧೀನ ಪಡಿಸಿಕೊಳ್ಳುತ್ತಿಲ್ಲವೆ? ಜನರನ್ನು ನಿರಾಶ್ರಿತರನ್ನಾಗಿ, ಭಿಕಾರಿಗಳನ್ನಾಗಿ ಮಾಡುವ ನಿರ್ದಯ ಕೃತ್ಯ ಕೈಗೊಳ್ಳುವ ರಾಕ್ಷಸಬಲವುಳ್ಳ ಸರ್ಕಾರಕ್ಕೆ ಶಾಲಾ ಕಟ್ಟಡ ಕಟ್ಟಿಸಲು ಭೂ ಸ್ವಾಧೀನ ಮಾಡಿಕೊಳ್ಳುವುದು ಕಷ್ಟವೆ? ಇದು ಸರ್ಕಾರಕ್ಕೆ, ಆಳುವ ಭ್ರಷ್ಟ ಪುಢಾರಿಗಳಿಗೆ ಗೊತ್ತು. ಆದರೂ ಸಂವಿಧಾನ ತಿದ್ದುಪಡಿಯ ಈ ಮೋಸ ಏಕೆ?

ಸಂವಿಧಾನದ ತಿದ್ದುಪಡಿಯ ಅಗತ್ಯ ಇಲ್ಲ. ಸರ್ವೋಚ್ಚ ನ್ಯಾಯಾಲಯ ಉನ್ನಿ ಕೃಷ್ಣನ್ ಕೇಸಿನಲ್ಲಿ (೧೯೯೩ ಎಸ್.ಸಿ. ೨೩೬೬) ಆರ್ಟಿಕಲ್ ೪೫ರಲ್ಲಿ ಠರಾಯಿಸಿದ ಪ್ರಾಥಮಿಕ ಉಚಿತ ಕಡ್ಡಾಯ ಶಿಕ್ಷಣ ಪ್ರಜೆಗಳ ಮೂಲಭೂತ ಹಕ್ಕು. ಸರ್ಕಾರ ಪ್ರಜೆಗಳ ಈ ಮೂಲಭೂತ ಹಕ್ಕನ್ನು ಮನ್ನಿಸಲೇಬೇಕೆಂದು ಐತಿಹಾಸಿಕ ತೀರ್ಪು ನೀಡಿದೆ. ಅಂದ ಮೇಲೆ ಸಂವಿಧಾನ ತಿದ್ದುಪಡಿಯ ಅಗತ್ಯವೇನಿದೆ?

ಮೇಲಾಗಿ ಇನ್ನೊಂದು ಮುಖ್ಯವಾದ ಅಂಶವಿದೆ. ಆರ್ಟಿಕಲ್ ೧೯ರಲ್ಲಿ ನಿರೂಪಿಸಿದ ಮೂಲಭೂತ ಹಕ್ಕುಗಳು ಪ್ರಜೆಗಳ ಆಜನ್ಮಸಿದ್ಧ ಹಕ್ಕುಗಳು. ವಾಕ್ ಸ್ವಾತಂತ್ರ್ಯ, ಚಲನ ಸ್ವಾತಂತ್ರ್ಯ, ಸಂಘ ಸ್ವಾತಂತ್ರ್ಯ, ಜೀವ ಮತ್ತು ಅನಿರ್ಬಂಧ (Life and liberty) ಸ್ವಾತಂತ್ರ್ಯ, ವೃತ್ತಿ ಸ್ವಾತಂತ್ರ್ಯಗಳನ್ನು....ಅನುಭವಿಸಲು ರಾಜ್ಯಾಧಿಕಾರ ಅಡ್ಡಿಪಡಿಸಲಾಗದು ಎಂದು ಸಂವಿಧಾನ ಪ್ರಜೆಗಳಿಗೆ ಅಭಯ ನೀಡಿದೆ. ಆ ಹಕ್ಕುಗಳನ್ನು ಚಲಾಯಿಸಲು ರಾಜ್ಯ ಸರ್ಕಾರದ ಸಹಾಯವೇನೂ ಬೇಕಾಗಿಲ್ಲ. ನಾನು ಯಾವ ಅಭಿಪ್ರಾಯವನ್ನಾದರೂ ವ್ಯಕ್ತಪಡಿಸುತ್ತೇನೆ, ಯಾವ ದೇವರನ್ನಾದರೂ ನಂಬುತ್ತೇನೆ, ಯಾವ ವೃತ್ತಿಯನ್ನಾದರೂ ಅವಲಂಬಿಸುತ್ತೇನೆ..... ಎಂದರೆ ಅದಕ್ಕೆ ಅಡಿಯನ್ನುಂಟು ಮಾಡುವ ಕಾಯಿದೆ ಮಾಡುವ ಅಧಿಕಾರ ಸರ್ಕಾರಕ್ಕಿಲ್ಲ. ಮೂಲಭೂತ ಹಕ್ಕುಗಳನ್ನು ಅನುಭವಿಸಲು, ಚಲಾಯಿಸಲು ಸರ್ಕಾರ ಅಡ್ಡಿಪಡಿಸಬಾರದೆಂಬ ನಿಷೇಧಕ್ಕಾಗಿ ಮೂಲಭೂತ ಹಕ್ಕುಗಳ ಖಾತರಿ-ಗ್ಯಾರಂಟಿ!

ಹಾಗಾದರೆ ಪ್ರಾಥಮಿಕ ಶಿಕ್ಷಣವನ್ನು ಮೂಲಭೂತ ಹಕ್ಕನ್ನಾಗಿ ಸಂವಿಧಾನ ತಿದ್ದುಪಡಿ ಮಾಡಿ ಏನನ್ನು ಸಾಧಿಸಲಾದೀತು? ಮಕ್ಕಳು ಯಾವ ಶಾಲೆಗಾದರೂ ಹೋಗಲಿ, ಯಾವ ಉಪಾಧ್ಯಾಯರಾಗಲಿ, ಅವರು ಏನೇ ಹೇಳಿಕೊಡಲಿ...ಅದಕ್ಕೆ ಯಾವ ಅಡ್ಡಿಯೂ ಇರಕೂಡದು ಎಂದು ಪ್ರಜೆಗಳಿಗೆ ಮೂಲಭೂತ ಹಕ್ಕನ್ನು ಗ್ಯಾರಂಟಿ ಪಡಿಸುತ್ತಾರೆಯೆ? ಇದೇನಿದು ಹುಚ್ಚು ಹುನ್ನಾರ? ಹಾಗಾದರೆ ಯಾಕೆ? ಯಾವ ರೀತಿಯ ಸಂವಿಧಾನ ತಿದ್ದುಪಡಿ? ಇದು ಆಶ್ಚರ್ಯಕರವಾಗಿ ಕಾಣುತ್ತದೆ.

ಒಂದು ವೇಳೆ ಯಾವುದೇ ರೂಪದಲ್ಲಿ

ಸಂವಿಧಾನವನ್ನು ತಿದ್ದುಪಡಿ ಮಾಡಿ ಪ್ರಾಥಮಿಕ ಶಿಕ್ಷಣ ಮೂಲಭೂತ ಹಕ್ಕೆಂದು ಶಾಸನ ಮಾಡಿದರೆಂದು ಇಟ್ಟುಕೊಳ್ಳಿ, ಆ ಹಕ್ಕನ್ನು ಕಾರ್ಯಗತಗೊಳಿಸುವುದು ಹೇಗೆ? ಯಾವುದೊ ಒಂದು ಗ್ರಾಮದಲ್ಲಿ, ಒಂದು ತಾಲೂಕಿನಲ್ಲಿ ಶಾಲೆಗಳಿಲ್ಲದಿದ್ದರೆ, ಇದ್ದ ಶಾಲೆಗಳಲ್ಲಿ ಉಪಾಧ್ಯಾಯರಿಲ್ಲದಿದ್ದರೆ, ಕಟ್ಟಡಗಳು ಇಲ್ಲದಿದ್ದರೆ, ಇದ್ದ ಕಟ್ಟಡದ ಮಾಳಿಗೆ ಹೆಂಚು ಹಾರಿಹೋಗಿ ಸೋರುತ್ತಿದ್ದರೆ ಪ್ರಜೆಗಳು ಸಂವಿಧಾನದತ್ತ ಮೂಲಭೂತ ಹಕ್ಕನ್ನು ಸ್ಥಾಪಿಸಲು ರಿಟ್ ಅರ್ಜಿ ದಾಖಲು ಮಾಡಬಹುದು. ಚಿಕ್ಕಬಳ್ಳಾಪುರದ ಶಾಸಕರಾದ ವೆಂಕಟಚಲಯ್ಯನವರು, ೧೯೯೪ರಲ್ಲಿ ಅವರು ಶಾಸಕರಾಗುವುದಕ್ಕಿಂತ ಮೊದಲು ಬೆಂಗಳೂರು ಉತ್ತರ ತಾಲೂಕು, ಗ್ರಾಮಾಂತರ ಜಿಲ್ಲೆಗಳಲ್ಲಿ ಶಾಲಾ ಕಟ್ಟಡಗಳನ್ನು ಕಟ್ಟಿಸಬೇಕೆಂದು, ರಿಪೇರಿ ಮಾಡಿಸಬೇಕೆಂದು ರಿಟ್ ಅರ್ಜಿ ದಾಖಲು ಮಾಡಿದ್ದಾರೆ. ಆ ಅರ್ಜಿ ಇನ್ನೂ ಇತ್ಯರ್ಥ ಆಗಬೇಕಾಗಿದೆ. ಸಂವಿಧಾನ ತಿದ್ದುಪಡಿ ಆದ ಮೇಲೂ ಪ್ರಜೆಗಳ ಹಣೆಬರಹ ಇದೇ!

ಸಂವಿಧಾನ ತಿದ್ದುಪಡಿ ಆಗದೆಯೆ ಕೇರಳದಲ್ಲಿ ಶೇಕಡಾ ೯೦ರಷ್ಟು, ಪಶ್ಚಿಮ ಬಂಗಾಳದಲ್ಲಿ ಶೇ.೭೦ರಷ್ಟು, ಹಿಮಾಚಲ ಪ್ರದೇಶದಲ್ಲಿ ಶೇಕಡಾ ೬೦ರಷ್ಟು ಸಾಕ್ಷರತೆಯನ್ನು ಸಾಧಿಸಲಾಗಿದೆ. ಆ ರಾಜ್ಯಗಳಲ್ಲಿ ಸಾಧಿಸಿದ ಗುರಿಯನ್ನು ಇತರ ರಾಜ್ಯಗಳಲ್ಲಿ ಸಾಧಿಸಲು ಆಳುವವರಿಗೆ ಏನು ಅಡ್ಡಿ ಬಂದಿದೆ? ಆಳುವವರಿಗೆ ಸಾಕ್ಷರತೆಯ ಬಗ್ಗೆ ದೃಢವಾದ ನಿರ್ಧಾರವಿಲ್ಲ. ಅಂಥ ನಿರ್ಧಾರ ಮಾಡಿದರೆ ಪ್ರಾಥಮಿಕ ಶಿಕ್ಷಣವನ್ನು ಉಚಿತವಾಗಿ ಕಡ್ಡಾಯವಾಗಿ ಕೊಡಬಹುದು. ಪ್ರತಿ ಗ್ರಾಮಕ್ಕೂ ಕುಡಿಯುವ ನೀರು ಕೊಡಬೇಕೆಂದು ದಿ.ನಜೀರ್‌ಸಾಬ್ ನಿರ್ಧರಿಸಿ ಎರಡೇ ವರ್ಷಗಳಲ್ಲಿ ಆ ಗುರಿ ಸಾಧಿಸಿದರು. ಹಾಗೆಯೆ ಪ್ರತಿ ಊರಿಗೂ ಒಂದೊಂದು ಶಾಲೆಯನ್ನು, ಕನಿಷ್ಠ ಇಬ್ಬರು ಉಪಾಧ್ಯಾಯರನ್ನು ನೇಮಿಸಿಯೇತೀರುತ್ತೇವೆಂದು ದೃಢ ಸಂಕಲ್ಪ ಮಾಡಿದರೆ ಯಾವ ಕಾನೂನು ಅಡ್ಡಿಬಾರದು.

ಆದರೆ ಅದಕ್ಕೆ ಸಂಪನ್ಮೂಲವೆಲ್ಲಿ? ಇದು ಮುಖ್ಯವಾದ ಸಮಸ್ಯೆ. ಆಳುವವರಿಗೆ ಶಿಕ್ಷಣದ ಬಗ್ಗೆ ಆಸಕ್ತಿ ಇಲ್ಲ ಎಂಬುದಕ್ಕೆ ಏಳನೇ ಪಂಚವಾರ್ಷಿಕ ಯೋಜನೆಯ ಒಟ್ಟು ೧ ಲಕ್ಷ ೮೦ ಸಾವಿರ ಕೋಟಿ ರೂ.ಗಳಲ್ಲಿ ಶಿಕ್ಷಣಕ್ಕಾಗಿ ಕೇವಲ ರೂ. ೬,೩೮೩ ಕೋಟಿ ರೂ.ಗಳನ್ನು ನಿಗದಿಪಡಿಸಲಾಗಿತ್ತು. ಅದರಲ್ಲಿ ರೂ. ೧,೮೩೦ ಕೋಟಿ ರೂ.ಗಳನ್ನು ಪ್ರಾಥಮಿಕ ಶಿಕ್ಷಣಕ್ಕಾಗಿ ನಿಗದಿಪಡಿಸಿದ್ದರು. ಒಂದು ಲಕ್ಷ ೮೦ ಸಾವಿರ ಕೋಟಿಯಲ್ಲಿ ರೂ. ೧೮೩೦ ಕೋಟಿ ಮಾತ್ರ ಪ್ರಾಥಮಿಕ ಶಿಕ್ಷಣಕ್ಕೆ ಎಂದರೆ ಉಚಿತ ಕಡ್ಡಾಯ ಶಿಕ್ಷಣ ಯಾವ ಯುಗದಲ್ಲಿ? ನಮ್ಮ ದೇಶದಲ್ಲಿರುವ ೬-೧೪ ವಯೋಮಿತಿಯ ಶಾಲೆ ಕಾಣದ ಮಕ್ಕಳು ೨೨೦ ಲಕ್ಷ ಎಂದು ಅಂದಾಜು ಮಾಡಿದ್ದಾರೆ. ಅವರ ಶಿಕ್ಷಣಕ್ಕಾಗಿ ೪೦ ಕೋಟಿ ರೂಪಾಯಿಗಳನ್ನು ಮಂಜೂರು ಮಾಡಿದ್ದಾರಂತೆ!! ಶ್ರೀಲಂಕಾದಲ್ಲಿ ಶೇ.೮೯.೧, ಚೈನಾದಲ್ಲಿ ಶೇ. ೯೦.೦ ಮಾಲ್ದೀವಿಯಲ್ಲಿ ಶೇ. ೯೩, ಬರ್ಮಾ (ಮೈನಮಾರ್)ದಲ್ಲಿ ಶೇ. ೮೧.೫ ಸಾಕ್ಷರತೆ ಸಾಧಿಸಿದ್ದಾರೆ. ಭಾರತಕ್ಕೆ ಬಂದಿರುವ ಕುತ್ತು ಯಾವುದು? ಭ್ರಷ್ಟ ರಾಜಕಾರಣಿಗಳ ಅದೂರ ದೃಷ್ಟಿ, ನಿಷ್ಠೆಯ ಅಭಾವವೇ ಈ ದೇಶಕ್ಕೆ ಬಡಿದ ಶಾಪ!

# ಗದಗಿನ ಕಂಜರ ಭಾಟ ಜನಾಂಗ

ಹೇಮಲತಾ ದೇಸಾಯಿ

ಇಂದಿನ ವೈಜ್ಞಾನಿಕ ಯುಗದಲ್ಲಿಯೂ ತಮ್ಮದೇ ಆದ ವಿಶಿಷ್ಟ ಆಚಾರ-ವಿಚಾರ, ಉಡುಗೆ ತೊಡುಗೆ ಭಾಷೆ ಹಾಗೂ ಸಂಸ್ಕೃತಿಯನ್ನು ಹೊಂದಿರುವ ಕಂಜರ ಭಾಟ ಜನಾಂಗವು ಶತಶತಮಾನಗಳಿಂದಲೂ ಊರೂರು ಅಲೆಯುತ್ತ ಅಲೆಮಾರಿ ಜನಾಂಗಗಳೆನಿಸಿಕೊಂಡಿದೆ.

ಸೆಟ್ಲಮೆಂಟ್ ಬಗ್ಗೆ ಒಳ್ಳೆಯ ಅಭಿಪ್ರಾಯವಿರದ ಇಂದಿನ ಪರಿಸ್ಥಿತಿಯಲ್ಲಿ, ಸೆಟ್ಲಮೆಂಟಿನಲ್ಲಿಯೂ ಒಳ್ಳೆಯವರು, ಮುಗ್ಧರು, ಮುಂದುವರಿದವರು ಇದ್ದಾರೆ ಎಂಬುದನ್ನು ನಾವೀಗ ಮರೆಯುವಂತಿಲ್ಲ. ರಾಜಸ್ಥಾನದ ಪ್ರಸಿದ್ಧ ಅರಸ ರಾಣಾಪ್ರತಾಪ ಸಿಂಹನ ವಂಶಜರೆಂದು ಹೇಳಲಾಗುವ ಇವರು ಯುದ್ಧದಲ್ಲಿ ಪ್ರತಾಪಸಿಂಹನು ಪರಾಜಯಹೊಂದಿದಾಗ ಅಲ್ಲಿಂದ ಓಡಿಹೋಗಿ ತಲೆಮರೆಸಿಕೊಂಡರು. ಹೀಗೆ ಓಡಿಹೋದ ಇವರು ಕರ್ನಾಟಕ, ಹರಿಯಾಣ, ಪಂಜಾಬ, ತಮಿಳುನಾಡು, ಆಂಧ್ರಪ್ರದೇಶ ಮುಂತಾದ, ರಾಜ್ಯಗಳಿಗೆ ವಲಸೆ ಬಂದರು. ಮುಖ್ಯವಾಗಿ ಕರ್ನಾಟಕದ ಹುಬ್ಬಳ್ಳಿ-ಧಾರವಾಡ, ಬಿಜಾಪುರ, ಕಾರವಾರ ಮುಂತಾದ ಜಿಲ್ಲೆಗಳಲ್ಲಿ ಈ ಜನಾಂಗ ವಾಸ ಮಾಡುತ್ತಿದೆ.

ಕಂಜರ ಭಾಟರು ಕತ್ತೆ ಕುದುರೆಗಳ ಸಹಾಯದಿಂದ ಊರೂರು ಸುತ್ತಿ ಭಿಕ್ಷೆ ಬೇಡಿ ತಮ್ಮ ಹೊಟ್ಟೆ ತುಂಬಿಸಿಕೊಳ್ಳುತ್ತಾರೆ. ಬ್ರಿಟಿಷ್ ಸರಕಾರವು ೧೯೨೪ರಲ್ಲಿ ಕ್ರಿಮಿನಲ್ ಟ್ರೈ ಆಕ್ಟ್ ಜಾರಿಗೊಳಿಸಿ ಅಪರಾಧಿಗಳ, ದರೋಡೆಕೋರರ ಗುಂಪುಗಳನ್ನು ಕುಟುಂಬ ಸಹಿತ ಬಂಧಿಸಿಟ್ಟು ಸುತ್ತಲೂ ತಂತಿ ಬೇಲಿ ಕಟ್ಟಿದರು. ಇದರಲ್ಲಿ ಚಪ್ಪರಬಂದ, ಕೈಗಾಡಿ, ಕೊರವರ ಜಾತಿ, ಹರಣಶಿಕಾರಿ, ಗಂಟಿಚೋರ ಅಲ್ಲದೆ ಕಂಜರ ಭಾಟ ಜನರನ್ನು ಸಹ ಬಂಧಿಸಿಡಲಾಯಿತು. ಇವರನ್ನು ಕಾಯಲು ಓರ್ವ ಅಧಿಕಾರಿಯನ್ನು ಸಹ ನೇಮಿಸಲಾಯಿತು. ನಂತರ ಆ ಸ್ಥಳಕ್ಕೆ ಸೆಟ್ಲಮೆಂಟ್



ಎಂದು ಹೆಸರಿಡಲಾಯಿತು. ಈ ಕಾರಣಕ್ಕಾಗಿ ಸೆಟ್ಲಮೆಂಟ್ ಬಗ್ಗೆ ಜನರಲ್ಲಿ ಕೊಂಚ ದುರಭಿಪ್ರಾಯವಿದೆ.

ಅಲೆಮಾರಿಗಳಾದ್ದರಿಂದ ಶಿಕ್ಷಣದ ಗಂಧವೇ ಇಲ್ಲದ ಇವರು ಹಾಡು ಕುಣಿತಗಳ ವಿಶೇಷತೆಯನ್ನು ಹೊಂದಿದ್ದಾರೆ. ಮಾತ್ರವಲ್ಲ ಆಭರಣ ಪ್ರಿಯರು ಹೌದು. ಭಾಟ ಜನಾಂಗದ ಯಾವುದೇ ಮಹಿಳೆಯನ್ನು ನೋಡಿದರೂ ಸಾಕು ಅವರ ಮೈಮೇಲೆ ವಿವಿಧ ಲೋಹಗಳಿಂದ ಮಾಡಿದ ಕೊರಳ ಸರಗಳು, ಬಳೆಗಳು, ಕಿವಿಯೋಲೆಗಳು, ಕಾಲಿನ ಕಡಗ ಕಾಣಸದೆ ಇರದು. ಲಂಬಾಣಿಗಳಂತೆ ಲಂಗ ದಾವಣಿ ಧರಿಸುವ ಇವರಿಗೆ ತಮ್ಮದೇ ಆದ ಹಿಂದಿ, ಉರ್ದು, ಕೊಂಕಣಿಗಳಿಗೆ ಹತ್ತಿರವೆನಿಸುವ ಭಾಷೆ ಇದೆ. ಆದರೆ ಲಿಪಿ ಮಾತ್ರ ಇಲ್ಲ.

ತೀರಾ ಹಿಂದುಳಿದವರು ಎಂಬ ಹಣೆಪಟ್ಟಿ ಹಚ್ಚಿಸಿಕೊಂಡಿರುವ ಈ ಜನಾಂಗದಲ್ಲೂ ಈಗೀಗ ಶಿಕ್ಷಣದ ಗಾಳಿ ಬೀಸುತ್ತಿದೆ. ಓದಿನತ್ತ ಒಲವು ಮೂಡುತ್ತಿದೆ. ಕಂಜರಭಾಟ ಜನಾಂಗವನ್ನು ಹೊರತು ಪಡಿಸಿ ಕೊರವರ, ಹರಣ ಶಿಕಾರಿ, ಬಂಜಾರಾ ಗಂಟಿಚೋರ ಮುಂತಾದ ವರ್ಗಗಳನ್ನು ಪ.ಜಾ. ಹಾಗೂ ಪ. ಪಂಗಡಗಳಿಗೆ ಸೇರಿಸಿದ ಸರಕಾರ ಅವರ ಶೈಕ್ಷಣಿಕ ಹಾಗೂ ಆರ್ಥಿಕ ಅಭಿವೃದ್ಧಿಗಾಗಿ ಅನೇಕ ಕ್ರಮ ಕೈಗೊಂಡಿದೆ. ಆದರೆ ಅಲೆಮಾರಿ ಜೀವನ ನಡೆಸುತ್ತಿರುವ ತಮ್ಮನ್ನು ಸರಕಾರ ಯಾವುದೇ ಹಿಂದುಳಿದ ಪಟ್ಟಿಗೆ ಸೇರಿಸದೆ ಅನ್ಯಾಯವೆಸಗಿದೆ ಎಂಬುದು ಅವರ ಅಸಮಾಧಾನ.

ವಿಶೇಷ ನ್ಯಾಯಾಂಗ ವ್ಯವಸ್ಥೆಯನ್ನು ಹೊಂದಿರುವ ಇವರು 'ದಿಲಾರಖಾ' ಎಂಬ ವ್ಯಕ್ತಿ ಬರೆದ ಪುಸ್ತಕದೊಳಗಿರುವ ನಿಯಮುಗಳಂತೆ, ಕಟ್ಟು-ನಿಬಂಧನೆಗಳನ್ವಯ ತಮ್ಮಲ್ಲಿ ಉಂಟಾದ ಸಮಸ್ಯೆಗಳನ್ನು ಪಂಚರ ಸಮ್ಮುಖದಲ್ಲಿ ಪರಿಹರಿಸಿಕೊಳ್ಳುತ್ತಾರೆ. ಇಲ್ಲಿಯ ತೀರ್ಪಿನಿಂದ ಅವರಿಗೆ ಸಮಾಧಾನವಾಗದಿದ್ದ



ಪಕ್ಷದಲ್ಲಿ ಅವರು ತಮ್ಮ ಪ್ರಕರಣಗಳನ್ನು ಅಹಮದಾಬಾದ, ಕೊಲ್ಹಾಪುರ ಮುಂತಾದೆಡೆ ಒಯ್ಯುತ್ತಾರೆ. ಅಲ್ಲಿನ ತೀರ್ಪನ್ನು ಫಿರ್ಯಾದಿಗಳು ಒಪ್ಪಲೇಬೇಕಾಗುತ್ತದೆ. ಇಲ್ಲಿಯವರೆಗೆ ಈ ಜನಾಂಗದವರು ನ್ಯಾಯಾಲಯ ಮೆಟ್ಟಲು ಹತ್ತಿದ ಉದಾಹರಣೆಗಳಿಲ್ಲ.

ಇಂದಿನ ವೈಜ್ಞಾನಿಕ ಯುಗದಲ್ಲಿಯೂ ಹಳೆಯ ಪದ್ಧತಿಗಳನ್ನು ಅನುಸರಿಸುತ್ತಿರುವ ಇವರಲ್ಲಿ ಅಪರಾಧಿಗಳನ್ನು ಪರೀಕ್ಷಿಸುವ ಪದ್ಧತಿ ಭಯಂಕರವಾಗಿದೆ. ತನ್ನ ತಪ್ಪನ್ನು ಒಪ್ಪಿಕೊಳ್ಳದ ಯಾವುದೇ ವ್ಯಕ್ತಿಯನ್ನು ಇವರು ಭಯಂಕರ ಶಿಕ್ಷೆಗೆ ಒಳಪಡಿಸುತ್ತಾರೆ. ಅಂಥ ವ್ಯಕ್ತಿಯ ಎರಡೂ ಕೈಗಳಿಗೆ ಆಲದ ಎಲೆಗಳನ್ನು ಇಟ್ಟು ದಾರ ಕಟ್ಟುತ್ತಾರೆ. ನಂತರ ಅವನ ಕೈಗಳ ಮೇಲೆ ಕಾದ ಕಬ್ಬಿಣವನ್ನು ಇರಿಸಿ ಒಂಭತ್ತು ಹೆಜ್ಜೆ ಮುಂದೆ ಇಡಲು ಹೇಳುತ್ತಾರೆ. ಒಂದು ವೇಳೆ ಅವನು ಅಪರಾಧಿಯೇ ಆಗಿದ್ದರೆ ಕೈಗಳು ಸುಡುತ್ತದೆ. ಅಪರಾಧಿ ಆಗಿರದಿದ್ದರೆ ಕೈಗಳು ಸುಡುವುದಿಲ್ಲ ಎಂಬುದು ಅವರ ನಂಬಿಕೆ.

ವಿಶಿಷ್ಟ ಶೈಲಿಯಲ್ಲಿ ಹಾಡು ಹೇಳುವ ಇವರು ಕಾಳಿಕಾ ದೇವಿಯ ಭಕ್ತರು. ಫಾಲ್ಗುಣ ಮಾಸದಲ್ಲಿ ದೇವಿಗೆ ರಕ್ತದ ಅಭಿಷೇಕ ಮಾಡುವರು. ಪ್ರಾಣಿಗಳ ಬಲಿಕೊಡುವರು. ರಕ್ತದಲ್ಲಿ ಸಾರಾಯಿ ಬೆರೆಸಿ ನೈವೇದ್ಯ ಮಾಡಿ ಮನೆ ಯಜಮಾನ ಕುಡಿಯುತ್ತಾನೆ. ವಧು ದಕ್ಷಿಣೆ ಪದ್ಧತಿ ಇರುವ ಈ ಜನಾಂಗದಲ್ಲಿ ವಧುವಿಗೆ ೫೨೫ ರೂ ಕೊಟ್ಟು ಮದುವೆ ಮಾಡಿಕೊಳ್ಳಲಾಗುತ್ತದೆ. ಮದುವೆ ಸಮಯದಲ್ಲಿ ಸಹ ಸಾರಾಯಿ ಬೇಕೇಬೇಕು. ದೇವರಿಗೆ ಹಾಗೂ ಭೂಮಿಗೆ ಹಿರಿಯರ ಹೆಸರಿನಲ್ಲಿ ೭ ರೂ. ಗಳ ಸಾರಾಯಿ ನೈವೇದ್ಯ ಮಾಡುವ ವಿಶಿಷ್ಟ ಪದ್ಧತಿ ಸಹ ಇವರಲ್ಲಿದೆ.

ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಹೆಸರುಗಳನ್ನು ಹೊಂದಿರುವ ಈ ಜನಾಂಗಕ್ಕೆ ಭಾಟ, ಸಾಂಸಿಯಾ, ಭಾರು, ನಟ್, ಭಾಂತು, ಧವಳೆ, ಬೇಡಿಯೆ ಕಪಾಡಿಯಾ, ಹಬುರಾ, ಬೇಡಕುಟ, ಕಂಜರ, ಅಡೋಡಿಯಾ, ಲೋಲ್ಕಾರ, ಮುಖೇರು ಎಂಬ ಅನೇಕ ಹೆಸರುಗಳಿವೆ.

ಸ್ವಯಂ ಪರಿಶ್ರಮ ಹಾಗೂ ಪ್ರತಿಭೆಯಿಂದ ಬೇನುಭಾಟ, ರಾಜಕುಮಾರ ಬಾಗಡೆ, ಅಂತರಾಷ್ಟ್ರೀಯ ಮಟ್ಟದಲ್ಲಿ ಹಾಕಿ ಆಟವಾಡಿದ್ದಾರೆ. ಕಿರಿಯರ ಮಟ್ಟದಲ್ಲಿ ಮಹೇಶ ಬಾಗಡೆ, ಲೋಕೇಶ್ ಗಾಗಡೆ, ರವಿ ಕಟ್ಟೀಮನಿ ಸುರೇಶ ಕಟ್ಟೀಮನಿ, ಮಲ್ಲೇಶ ಗಾಗಡೆ, ಸಲೇಶ ಕಟ್ಟೀಮನಿ, ಗಣೇಶ ಬಾಗಡೆ, ನರೇಶ ಭಾಗಡೆ, ಜಿತೇಂದ್ರ ಬಾಗಡೆ ಮುಂತಾದವರು ತಮ್ಮ ಪ್ರತಿಭೆಯಿಂದ ರಾಜ್ಯಮಟ್ಟವನ್ನು ಪ್ರತಿನಿಧಿಸಿದ್ದಾರೆ. ಆದರೂ ಸಧ್ಯದ ಪರಿಸ್ಥಿತಿಯಲ್ಲಿ ಸ್ವಯಂ ಪ್ರತಿಭಾವಂತ ರಾಗಿರುವ ಇವರಿಗೆ ಅವಕಾಶಗಳು ಸಿಗುವುದು ಕೊಂಚ ಕಷ್ಟವೇ ಆಗಿದೆ. ಆದರೂ ಹಠಮಾರಿತನ, ಸಾಧಿಸಬೇಕೆಂಬ ಹೆಬ್ಬಯಕೆಯಿಂದ ಇವರೆಲ್ಲ ಪರಿಶ್ರಮಿಗಳಾಗುತ್ತಿದ್ದಾರೆ.

ಹತ್ತಾರು ವರ್ಷಗಳಿಂದಲೂ ಭಾಟ್ ಜನಾಂಗವು ಇತರರಂತೆ ತಮಗೆ ಸಿಗಬೇಕಾದ ನ್ಯಾಯಯುತ ಸವಲತ್ತುಗಳಿಗಾಗಿ ಹೋರಾಟ ನಡೆಸುತ್ತಲೇ ಇದೆ. ಆದರೆ ಫಲಿತಾಂಶ ಮಾತ್ರ ಶೂನ್ಯ.

ದೂರದ ಯಾವುದೇ ಭಾಗದಿಂದ ಹಾಗೂ ಭಾಷೆಯಿಂದ ಬಂದ ಅಲೆಮಾರಿ ಜನಾಂಗ ಒಂದು ಕಡೆ ನೆಲೆಸಿ ಅಲ್ಲಿಯ ರೀತಿ ನೀತಿ ರಿವಾಜುಗಳಿಗೆ ಹೊಂದಿಕೊಳ್ಳುವುದು ಸುಲಭ ವಲ್ಲ. ಇಂತಹ ಸಂದರ್ಭದಲ್ಲಿ ಇವರಿಗೆ ಕನಿಷ್ಠ ಪಕ್ಷ ಉದ್ಯೋಗ, ಶಿಕ್ಷಣದಲ್ಲಿ ಸರಕಾರ ಗ್ರಾಮೀಣ ಪ್ರದೇಶಕರಿಗೆ ನೀಡುವ ಕೃಪಾಂಕ ವಾಗಲಿ, ಮೀಸಲಾತಿಯಾಗಲಿ ನೀಡದಿರು ವುದು ಈ ಜನರ ದೌರ್ಭಾಗ್ಯವೇ ಸರಿ.

ತಮ್ಮನ್ನು ಎಸ್.ಸಿ.ಎಸ್.ಟಿಗೆ ಸೇರಿಸುವಂತೆ ಆಗ್ರಹಿಸಿ ರಾಜ್ಯ ಹಾಗೂ ಕೇಂದ್ರ





ಸರಕಾರಗಳನ್ನು ಎಷ್ಟೇ ವಿನಂತಿಸಿಕೊಂಡರೂ, ಮನವಿ ಅರ್ಪಿಸಿದರೂ ಅವರ ಈ ಆಸೆ ಇದುವರೆಗೂ ಈಡೇರಿಲ್ಲ.

ದೇವೇಗೌಡರು ರಾಜ್ಯದ ಮುಖ್ಯಮಂತ್ರಿಯಾಗಿದ್ದಾಗ ಹಾಗೂ ಪ್ರಧಾನ ಮಂತ್ರಿಯಾಗಿದ್ದಾಗ ಈ ಜನಾಂಗದ ನಿಯೋಗವು ಬೆಂಗಳೂರು ಹಾಗೂ ದೆಹಲಿಗೆ ತೆರಳಿ ಭೇಟಿಯಾಗಿ ಮನವಿ ಅರ್ಪಿಸಿದ್ದಾರೆ. ಆಶ್ವಾಸನೆ ಬಂತೇ ವಿನಾಃ ಕೆಲಸವಾಗಲಿಲ್ಲ. ತಿನ್ನಲಿಕ್ಕಿಲ್ಲದೆ, ಇದ್ದ ಹಣವನ್ನೆಲ್ಲ ಬೆಂಗಳೂರಿಗೆ ಅಡ್ಡಾಡಿ ಖರ್ಚು ಮಾಡಿದ್ದಾಯಿತೇ ವಿನಾಃ ಕವಡೆಯಷ್ಟು ಕೆಲಸ ಆಗಲಿಲ್ಲ.

ಎಷ್ಟೋ ದಿನಗಳ ತಮ್ಮ ಈ ಬೇಡಿಕೆಯನ್ನು ಈಡೇರಿಸದಿದ್ದರೆ ಬರುವ ಸಾರ್ವತ್ರಿಕ ಚುನಾವಣೆಯನ್ನು ಬಹಿಷ್ಕರಿಸುವುದಷ್ಟೇ ಅಲ್ಲ ನ್ಯಾಯಾಲಯದ ಮೊರೆ ಹೋಗಲು ಇವರು ನಿರ್ಧರಿಸಿದ್ದಾರೆ.

ಊರಿನೊಳಗಿದ್ದು, ಕಾಡಿನೊಳಗಿದ್ದಂತಾಗಿರುವ ಇವರ ಪರಿಸ್ಥಿತಿ ನಿಜಕ್ಕೂ ಶೋಚನೀಯ. ಇವರು ವಾಸಿಸುತ್ತಿರುವ ತಂತಿ ಬೇಲಿಯಾಚೆಗೆ ಬೀದಿ ದೀಪಗಳು, ಗಟಾರಗಳು, ಡಾಂಬರ ರಸ್ತೆಗಳು ಇವೆ. ಆದರೆ ತಂತಿ ಬೇಲಿಯೊಳಗಿನ ಪರಿಸ್ಥಿತಿ ಇದಕ್ಕೆ ತದ್ವಿರುದ್ಧವಾಗಿದೆ. ಯಾರೇ ಆಗಲಿ ಬೇಲಿ ದಾಟಿ ಒಳಗೆ ಕಾಲಿಟ್ಟರೆ ಸಾಕು ಮೂಗು ಮುಚ್ಚಿಕೊಳ್ಳಲೇ ಬೇಕು. ಗಟಾರುಗಳಿಲ್ಲದೆ ಎಲ್ಲೆಡೆ ಹರಿದು ಹೋಗುತ್ತಿರುವ ಕೊಳಕು ನೀರು! ಗುಂಯ್‌ಗುಡುತ್ತಿರುವ ಗುಂಗಾಡುಗಳು! ಹರಕು-ಮುರುಕು ಗುಡಿಸಲುಗಳು! ಅಷ್ಟೇ ಏಕೆ ಶೌಚಾಲಯಗಳಿಲ್ಲದೆ ಬಯಲಿಗೆ ಹೋಗಬೇಕಾದ ಇವರ ಪರಿಸ್ಥಿತಿ ನಾಗರೀಕ ಜಗತ್ತಿನೊಳಗಿದ್ದು ಅನಾಗರೀಕರಂತಾಗಿದೆ!!

ಎಲ್ಲೆಲ್ಲಿಯೂ ರಾಜಕೀಯ ಹಾಗೂ ಲಂಚಗುಳಿತನ ತಾಂಡವಾಡುತ್ತಿರುವ ಈಗಿನ ಪರಿಸ್ಥಿತಿಯಲ್ಲಿ ನಿಜವಾದ ಪ್ರತಿಭೆಗಳಿಗೆ ಯಾವ ರೀತಿ ಮೋಸವಾಗುತ್ತಿದೆ ಎಂಬುದಕ್ಕೆ ಇಲ್ಲೊಂದು ತಾಜಾ ಉದಾಹರಣೆ ಇದೆ. ಯಾವುದೇ ಅನುಕೂಲವಿಲ್ಲದೆ, ಸಹಾಯ ಸೌಲಭ್ಯಗಳಿಲ್ಲದೆ ಸ್ವಯಂ ಪರಿಶ್ರಮ ಹಾಗೂ ಪ್ರತಿಭೆಯಿಂದ ಮಿಂಚುತ್ತಿರುವ ಭಾಟರ ಹಾಕಿ ಕ್ರೀಡಾಪಟಗಳೇ ಸಾಕು ಭಾರತದ ಪೂರ್ತಿ ತಂಡವನ್ನು ಪ್ರತಿನಿಧಿಸಲು!! ಭಾಟರು ಸಂಪ್ರದಾಯಬದ್ಧರಾಗಿದ್ದು, ದೀಪಾವಳಿ, ಮಹಾನವಮಿ, ಹೋಳಿಹುಣ್ಣಿಮೆ ಮುಂತಾದ ಹಬ್ಬಗಳನ್ನೂ ಆಚರಿಸುತ್ತಾರೆ, ಹೋಳಿ ಹುಣ್ಣಿಮೆ ಇವರಲ್ಲಿ ಅತ್ಯಂತ ದೊಡ್ಡ ಹಬ್ಬವಾಗಿದ್ದು, ಹುಣ್ಣಿಮೆಗೆ ೨-೩ ದಿನ ಮೊದಲೆ ಬಾಲಾಜಿ (ರಾಮಧನಿ) ಹಾಗೂ ಕಾಳಿಕಾದೇವಿ ಪೂಜೆ ಮಾಡುತ್ತಾರೆ. ಹಬ್ಬದಂದು ಸಿಹಿಯೂಟದೊಂದಿಗೆ ಬಣ್ಣದಾಟವು ಸಹ ಅದ್ದೂರಿಯಾಗಿಯೇ ನಡೆಯುತ್ತದೆ.

ಬದುಕಿನುದ್ದಕ್ಕೂ ಹೋರಾಟದಲ್ಲಿಯೇ ಕಳೆಯುವ ಇವರ ಬದುಕಿನ ಅಂತ್ಯ ಸಹ ಕುತೂಹಲಕಾರಿಯಾಗಿದೆ. ಭಾಟರಲ್ಲಿ ಮಹಿಳೆಯರು ಮರಣಿಸಿದರೆ ಅವರ ದೇಹಕ್ಕೆ ಸಂಪ್ರದಾಯಬದ್ಧ ಉಡುಗೆ-ತೊಡಿಸಿ ಮೇಲೆ ಕೆಂಪು ಕಾಟನ್ ಬಟ್ಟೆ ಹೊದಿಸುತ್ತಾರೆ. ಅದರಲ್ಲೂ ಅವಿವಾಹಿತರಿದ್ದರೆ ಬಾರಿ ಗೀಡಕ್ಕೆ ತಾಳಿ ಕಟ್ಟಿಸಿ ವಿವಾಹಶಾಸ್ತ್ರ ಮಾಡಿ ಶವ ಸುಡುತ್ತಾರೆ. ಪುರುಷ ಮರಣಿಸಿದರೆ ಸಂಪ್ರದಾಯದಂತೆ ಬಟ್ಟೆತೊಡಿಸಿ ನಂತರ ಬಿಳಿ ಕಾಟನ್ ಬಟ್ಟೆ ಹೊದಿಸುತ್ತಾರೆ. ಒಂದು ವೇಳೆ ಅವಿವಾಹಿತ ಪುರುಷನಿದ್ದರೆ ಬಾರಿ ಗಿಡಕ್ಕೆ ತಾಳಿ ಕಟ್ಟಿಸಿ ಮದುವೆ ಶಾಸ್ತ್ರ ಮಾಡುತ್ತಾರೆ..

[ಈ ಲೇಖನಕ್ಕೆ ಸಹಕರಿಸಿ ಮಾಹಿತಿ ಒದಗಿಸಿಕೊಟ್ಟ ಅಖಿಲ ಕರ್ನಾಟಕ ಕಂಜರ ಭಾಟ ಜನಾಂಗದ ಅಧ್ಯಕ್ಷ ಮಾಣಿಕ ಭಾಟ್, ಕಾರ್ಯದರ್ಶಿ ಜೆ.ವಿ. ಬಾಗಡೆ ಹಾಗೂ ಎನ್.ಆರ್.ಭಾಟ, ರಮೇಶ ಗಾಗಡೆ ಮತ್ತು ಜನಾಂಗದ ಮಹಿಳೆಯರಿಗೆ ಲೇಖಕಿಯ ಕೃತಜ್ಞತೆಗಳು.]



# ಶಿವದಾರ ಜನಿವಾರ ಮತ್ತು ಕ್ರಾಂತಿಕಾರಿ!

○ ಎಸ್.ಎಸ್.ಹಿರೇಮಠ

**ಲಿಂಗವನ್ನು ಧರಿಸದಿದ್ದರೂ ಡಾ. ಚಿದಾನಂದಮೂರ್ತಿ ಲಿಂಗಾಯತ ಜಂಗಮರು. ಡಾ.ಎಂ.ಎಂ. ಕಲಬುರ್ಗಿಯವರು ಲಿಂಗಕಟ್ಟಿಕೊಂಡಿದ್ದರೂ ವಸ್ತುನಿಷ್ಠ ದೃಷ್ಟಿಗೆ ಬದ್ಧರು. ಹರಿಕಿಶನ್‌ಸಿಂಗ್ ಸುರ್ಜಿತ್ ಅವರು ಸಿಖ್ಖರ ಸಾಂಪ್ರದಾಯಕ ವೇಷದಲ್ಲು ನಿಷ್ಠಾವಂತ ಕಮ್ಯುನಿಷ್ಟರು. ಗೊರೂರು ರಾಮಸ್ವಾಮಿ ಅಯ್ಯಂಗಾರರು ತಮ್ಮ ಜುಟ್ಟಿನ ಪ್ರಶ್ನೆಯನ್ನು ಮಾತಿನಲ್ಲಿ ತೇಲಿಸಬಲ್ಲರು. ಇನ್ನು ಹೊಸಪೇಟೆಯ "ಜಗದ್ಗುರು"ವಿನ ಬಗ್ಗೆ ಹೇಳಬೇಕಿಲ್ಲ! ಹಾಗಾದರೆ ಇಂಥ ವೈರುಧ್ಯಗಳ ಬೇರು ಇರುವುದೆಲ್ಲಿ?**

ಕ್ರಾಂತಿಕಾರಿ ಸಂಘಟನೆಗಳಲ್ಲಿ ಕೆಲಸ ಮಾಡುತ್ತಿದ್ದ ಸಂದರ್ಭ. ಧಾರವಾಡದಲ್ಲಿ ಎಂ.ಎ. ಮಾಡುತ್ತಿದ್ದಾಗ ಪ್ರಭಾವ ಬೀರಿದವರಲ್ಲಿ ಡಾ. ಎಂ.ಎಂ. ಕಲಬುರ್ಗಿಯವರೂ ಒಬ್ಬರು. ಈಚೆ ಒಂದು ಸಲ ಅವರ ಮನೆಯಲ್ಲಿ ವಿರಾಮದಲ್ಲಿ ಮಾತಾಡುತ್ತಿದ್ದೆ. ನಾವು ಕಮ್ಯುನಿಸ್ಟರೆಂದರೆ ಕಲಬುರ್ಗಿಯವರ ದೃಷ್ಟಿಯಲ್ಲಿ 'ಕಿಲಾಡಿಗಳು', 'ಬೆರಕಿ' ಜನ ಎಂದು ಖುಷಿಯೂ ಇತ್ತು.

"ಸರ್ ನೀವು ಲಿಂಗಾ ಕಟ್ಟಿಕೊಂಡಿದ್ದೀರಾ?" ನನ್ನ ನೇರ ಪ್ರಶ್ನೆಗೆ, "ಹೌದು, ಯಾಕೆ?" ಎಂದರು.

"ಡಾ. ಚಿದಾನಂದಮೂರ್ತಿಯವರಿಗೆ ಇದೇ ಮಾತು ಕೇಳಿದ್ದೆ, ಬೆಂಗಳೂರಿನ ಒಂದು ಸಭೆಯ ಸಂದರ್ಭದಲ್ಲಿ. ಅವರು ಇಲ್ಲ ಎಂದಿದ್ದರು. ಲಿಂಗಾಯತ ತತ್ವದಂತೆ ನಡೆಯಲು ಈಗ ಯಾರಿಗಾದರೂ ಸಾಧ್ಯವೇ?"

"ಇಲ್ಲ ಖರೇ. ಆದರೆ ಸಾಧನೆ ಮಾಡಲಿಕ್ಕಾದ್ರೂ ಲಿಂಗದ ಅಗತ್ಯವಿದೆ."

"ಷಟ್‌ಸ್ಥಲ, ಪಂಚಾಚಾರ, ಅಷ್ಟಾವರಣಗಳನ್ನು ನಿಜ ಬದುಕಿನಲ್ಲಿ ಅಳವಡಿಸಿಕೊಳ್ಳಲು ಸಾಧ್ಯವೆ ಇಲ್ಲ ಎಂದಾಗ ಕಟ್ಟಿಕೊಂಡ ಲಿಂಗಕ್ಕೆ ಅಪಚಾರವಾಗುವುದಿಲ್ಲವೆ?"

"ನೂರಕ್ಕೆ ನೂರರಷ್ಟು ಸಾಧ್ಯವಿರಲಿಕ್ಕಿಲ್ಲ. ಆದರೆ ಪ್ರಯತ್ನ ಮಾಡಬಹುದಲ್ಲ."

ಈ ಧಾಟಿಯಲ್ಲಿ ನಮ್ಮ ಸಂವಾದ ನಡೆದಿತ್ತು. ಹೊಸಪೇಟೆಯಲ್ಲಿ, ಒಬ್ಬ ಜಗದ್ಗುರುಗಳಿಗೆ ಇದೇ ಪ್ರಶ್ನೆ ಕೇಳಿದ್ದೆ. ಜಗದ್ಗುರುಗಳೂ ಸಾಮಾಜಕ ಕಾರ್ಯಚಟುವಟಿಕೆಯಲ್ಲಿ ಪ್ರಾಮಾಣಿಕವಾಗಿ ತಮ್ಮನ್ನು ತೊಡಗಿಸಿಕೊಂಡವರು. ಡಾ. ಚಿದಾನಂದಮೂರ್ತಿ ಪ್ರಖ್ಯಾತ ಸಂಶೋಧಕರು. ಒಂದು ತಮಾಷೆಯ ಪ್ರಸಂಗ ಬೆಂಗಳೂರಿನ ಸಭೆಯಲ್ಲಿ ನಡೆಯಿತು. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಕನ್ನಡದ ಪ್ರಸಿದ್ಧ ಲೇಖಕರಲ್ಲವೆ? ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ತಾವು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಿದ್ದ ಘಟನೆಯನ್ನು ಮೆಲುಕು ಹಾಕುತ್ತಿದ್ದರು. ಸಭೆಯಲ್ಲಿ ಯಾರೋ ಕೇಳಿದ್ದರು:

"ಇಷ್ಟೆಲ್ಲ ಪ್ರಗತಿಪರ ವಿಚಾರಗಳನ್ನು ಹೇಳುತ್ತಿದ್ದೀರಿ; ಸಂತೋಷ. ಆದರೆ ತಮ್ಮ ತಲೆಯಲ್ಲಿ ಎದ್ದು ಕಾಣುವಂತೆ ಜುಟ್ಟು ಬಿಟ್ಟಿದೀರಲ್ಲ ಏಕೆ?"

ವಿಚಲಿತರಾಗದೆ ಆ ಸಾಹಿತಿ ತಟ್ಟನೆ ಉತ್ತರಿಸಿದ್ದರು. "ನೋಡಿ ಕ್ಷೌರಿಕನಿಗೆ ಕ್ರಾಪು ಮಾಡಪ್ಪಾ ಅಂದೆ. ಆತ ಕೈತಪ್ಪಿ ಬಿಟ್ಟು ಬಿಟ್ಟಿದ್ದಾನೆ." ಸಭೆ ಗೊಳ್ಳೆಂದಿತು. ಪ್ರಶ್ನೆ ಜಾರಿ ಹೋಯಿತು.

ಈ ಕ್ಷಣದಲ್ಲಿ ಇನ್ನೊಂದು ಮುಖ ನನ್ನ ಕಣ್ಣೆದುರು ನಿಲ್ಲುತ್ತಿದೆ. ಈ ದೇಶದ ಕ್ರಾಂತಿಕಾರಿ ಪಕ್ಷಗಳಲ್ಲಿ ಸಿ.ಪಿ.ಎಂ. ಎಂಬುದೂ ಒಂದು. 'ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ ಮಾರ್ಕ್ಸಿಸ್ಟ' ಎಂದು ಇದರ ಲಾಂಗ್‌ಫಾರ್ಮ. ಇದರ ಅತ್ಯಂತ ಉನ್ನತ ಸ್ಥಾನ ಪ್ರಧಾನ ಕಾರ್ಯದರ್ಶಿಯದು. ಈಗ ಹರಿಕಿಶನ್‌ಸಿಂಗ್ ಸುರ್ಜೀತ್ ಈ ಸ್ಥಾನದಲ್ಲಿದ್ದಾರೆ. ಪಂಜಾಬಿನ ಶಿಖ್ ಮತ ಬೋಧಿಸುವ ವೇಷಭೂಷಣದಲ್ಲೆ ಈ ವ್ಯಕ್ತಿ 'ನಾಸ್ತಿಕ'ನಾಗಿ 'ಕ್ರಾಂತಿಕಾರಿ' ಯಾಗಿದ್ದಾರೆ.

ಇಂಥ ಚಿತ್ರಗಳನ್ನು ಪಟ್ಟಿ ಮಾಡುತ್ತ ಹೋಗಬಹುದು. ಲಿಂಗವನ್ನು ಧರಿಸದಿದ್ದರೂ ಡಾ. ಚಿದಾನಂದಮೂರ್ತಿ ಲಿಂಗಾಯತ ಜಂಗಮರು. ಲಿಂಗಾಯತ ಪಂಥ ಪರಂಪರೆಯಲ್ಲಿ ನಂಬಿಕೆ, ಪ್ರೀತಿ ಇದ್ದವರು. ನಂಬಿಕೆ ಕುರುಡಾಗಿಲ್ಲ; ಪ್ರೀತಿ ಮುಗ್ಧವಾದುದಲ್ಲ. ಆದರೆ ಕ್ರಾಂತಿಕಾರಿ ವಿಚಾರವಾದಿಯಲ್ಲ. ಕುಲಬುರ್ಗಿಯವರೂ ಹೀಗೆಯೆ. ಇವರಿಗೆ ವಚನಕಾರರ ಬಗ್ಗೆ ಸ್ವಲ್ಪ ಅತಿ ಎನ್ನಬಹುದಾದ ಅಭಿಮಾನ. ಆದರೆ ವಸ್ತುನಿಷ್ಠ ದೃಷ್ಟಿಗೆ ಬದ್ಧರು. ಸತ್ಯವನ್ನು ನಿಷ್ಠುರವಾಗಿ ಸ್ವೀಕರಿಸಬೇಕೆನ್ನುವವರು. ಇದಕ್ಕಾಗಿ ಸಾಕಷ್ಟು ಹಿಂಸೆಯನ್ನು ಎದುರಿಸಿದವರು. ಜಗದ್ಗುರುಗಳ ಬಗ್ಗೆ ಹೇಳಬೇಕಿಲ್ಲ. ಹೇಳಿಕೇಳಿ "ಜಗದ್ಗುರು"ಗಳು. ಇನ್ನು ಹರಿಕಿಶನ್‌ಸಿಂಗ್ ಸುರ್ಜಿತ್‌ಜಿ ಮತವೊಂದರ ಸಾಂಪ್ರದಾಯಿಕ ವೇಷದಲ್ಲೂ ನಿಷ್ಠಾವಂತ 'ಕಮ್ಯುನಿಸ್ಟ್'. ವೇಷದಲ್ಲಾದರೂ ಮತವನ್ನು ಕಾಪಾಡಿಕೊಳ್ಳಲು ಸಿಂಗ್‌ಗೆ ಏಕೆ ಒಲವು?

ಈ ಎಲ್ಲ ನಿದರ್ಶನಗಳಲ್ಲೂ ಒಂದು ಅಂಶ ಸ್ಪಷ್ಟ. ವಿಚಾರ ಒಂದು, ಆಚಾರ ಇನ್ನೊಂದು. ಇದು ನನ್ನ ಆಪಾದನೆ ಅಲ್ಲ.

ನಡೆ-ನುಡಿಯಲ್ಲಿ ಸಾಮರಸ್ಯವಿರಬೇಕೆಂದು ಪ್ರತಿಯೊಂದು ಧರ್ಮವೂ ಒತ್ತಿ ಹೇಳುತ್ತದೆ. ಕಾಲ ಸಂದಂತೆ ಪರಿಸ್ಥಿತಿ ಬದಲುತ್ತವೆ. ಬದಲಿದ ಸನ್ನಿವೇಶಕ್ಕೆ ಧರ್ಮದ ಸಂಪ್ರದಾಯಗಳು ಹೊಂದಲಾರವು. ಧರ್ಮವನ್ನು ಉಳಿಸಿಕೊಂಡು ಹೋಗಬೇಕೆನ್ನುವ ಹಟಮಾರಿ ಅನುಯಾಯಿಗಳು ಆಚರಣೆಗೆ ವಿಚಾರದ ಬೆಂಬಲ ತಪ್ಪಿದ್ದರೂ ಅದನ್ನು ಕಚ್ಚಿಕೊಂಡಿರುತ್ತಾರೆ. ಸತ್ತ ಮರಿಯನ್ನು ಅಪ್ಪಿಕೊಂಡೇ ಇರುವ ತಾಯಿ ಮಂಗನಂತೆ. ಇಂಥಲ್ಲಿ ತಮ್ಮ ಅನುಕೂಲಕ್ಕೆ ತಕ್ಕಂತೆ ಬೇರೆ ವಿಚಾರಗಳ ಬೆಂಬಲ ಪಡೆಯಬಹುದು. ಇವರು ಇದರಿಂದ ತಮ್ಮ ಮತೀಯ ಆಚರಣೆಗಳನ್ನು ಸಮರ್ಥಿಸಿಕೊಳ್ಳಬಹುದು. ಜನಿವಾರ ಕಿವಿಗೆ ಸುತ್ತಿಕೊಂಡರೆ 'ಮೋಶನ್ ಕ್ಲಿಯರ್' ಆಗುತ್ತೆ ಎಂಬಂತೆ, ಆದರೆ ಇದು ಧರ್ಮಕ್ಕೆ ಮಾಡುವ ಅಪಚಾರವೇ ಇಂಥ ಗಂಭೀರವಾದ ಒಂದು ಅಪರಾಧ ಈಚೆಗೆ ಜರುಗಿತು. ಮಾತೆ ಮಹದೇವಿ ತನ್ನ ಗುರು ಲಿಂಗಾನಂದರ ಹೆಸರನ್ನು ಬಸವಣ್ಣನ ಅಂಕಿತದ ಸ್ಥಾನದಲ್ಲಿಟ್ಟರು. ಇದನ್ನು ಸಮರ್ಥಿಸಿಕೊಳ್ಳಲು ಹತಾಶ ಯತ್ನ ಮಾಡಿದರು. ಲಿಂಗಾನಂದ ಮತ್ತು ಮಹದೇವಿಯವರನ್ನು ಧಾರವಾಡದಲ್ಲಿ ಸಮೀಪದಿಂದ ನೋಡಿದ್ದೆ. ೨೦ನೇ ಶತಮಾನದ ವೀರಶೈವ ಇಂಥವರನ್ನು ಹುಟ್ಟುಹಾಕುತ್ತಿರುವ ವ್ಯಂಗ್ಯಕ್ಕೆ ದಿಗಿಲಾಗುತ್ತದೆ.

'ವೇದವೇ' ಶ್ರೇಷ್ಠ ಮಾದರಿ ಎಂದು ಹೇಳುವ ಬ್ರಾಹ್ಮಣರು ಕಾಲಾಂತರದಲ್ಲಿ ವೇದದ ಆಚೆ ಎಷ್ಟೋ ದೂರ ಸರಿದು ಬಂದಿದ್ದಾರೆ. ವೇದ ಹೇಳುವ ಆಚಾರ-ವಿಚಾರಗಳಿಗೆ ಸಂಬಂಧವೇ ಇಲ್ಲದ ಹೊಸ ಆಚಾರ-ವಿಚಾರಗಳನ್ನು ಅಳವಡಿಸಿಕೊಳ್ಳುತ್ತ ಬಂದಿದ್ದಾರೆ. 'ಪೂ-ಚೆಯ್' ಎಂಬ ದ್ರಾವಿಡ ಪರಿಕಲ್ಪನೆ 'ಪೂಜೆ'. ದೇಗುಲವೂ ದ್ರಾವಿಡ ಸಂಸ್ಕೃತಿಯ ವೈಶಿಷ್ಟ್ಯ. ಯಜ್ಞ-ಯಾಗಾದಿ ಪರಂಪರೆಯ ಬ್ರಾಹ್ಮಣರು ದೇಗುಲದ ಪೂಜೆಯನ್ನು ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡಾಗಲೂ ವೇದದ ನಂಟನ್ನು ಬಿಟ್ಟುಕೊಡಲಿಲ್ಲ.

ಇಂಥ ನೂರಾರು ಸಾಕ್ಷ್ಯಾಧಾರಗಳು ಧ್ವನಿಸುವ ಆಶಯವೇನು?

ಯಾವುದೇ ಧರ್ಮದ ಅನುಯಾಯಿ ತನ್ನ ಅನುಭವವನ್ನು ಒರೆಗೆ ಹಚ್ಚಿಕೊಳ್ಳಬೇಕಿದೆ. ತನ್ನ ಧರ್ಮದ ವಿಚಾರಗಳಿಗೆ ತಾನೆಷ್ಟು ಬದ್ಧ? ಅಥವಾ ಬದ್ಧನಾಗಿ ಬಾಳಲು ಎಷ್ಟರಮಟ್ಟಿಗೆ ಸಾಧ್ಯ? ತನ್ನನ್ನೇ ಕೇಳಿಕೊಳ್ಳಬೇಕಾದ ಪ್ರಶ್ನೆಗಳಿವು.

ಒಟ್ಟು ಮಾತೆಂದರೆ ಧಾರ್ಮಿಕ ವಿಚಾರಗಳು ಚಿರವಾಗಿರುತ್ತವೆ, ಸಂಪ್ರದಾಯಗಳು ಬದಲದಿರುತ್ತವೆಂಬ ತಪ್ಪುಗ್ರಹಿಕೆ. ಆದರೆ 'ಕಾಲ' ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಸಂದರ್ಭಗಳನ್ನು ನಿರಂತರವಾಗಿ ಪರಿವರ್ತಿಸುತ್ತದೆ. ಪರಿಸ್ಥಿತಿ, ಸಂದರ್ಭ ಎಷ್ಟೇ ಬದಲಿಸಿದರೂ ಧರ್ಮದ ಆಚಾರ ವಿಚಾರ ಬದಲವು ಎಂಬುದು ಸಾಮಾಜಿಕ ವೈರುಧ್ಯದ ಹುಟ್ಟಿಗೆ ಕಾರಣವಾಗುತ್ತದೆ. ವೈರುಧ್ಯವಿರುವಲ್ಲಿ (Contradictions) ಘರ್ಷಣೆ ಅನಿವಾರ್ಯ. ವೈರುಧ್ಯದ ಸ್ವರೂಪಕ್ಕೆ ಅನುಗುಣವಾಗಿರುತ್ತದೆ ಸಂಘರ್ಷದ ಸ್ವರೂಪ. ಇದು ಸಾಂಸ್ಕೃತಿಕ ಮತ್ತು ಸಾಮಾಜಿಕ ಚಲನಶೀಲತೆಗೆ ಪ್ರೇರಕವಾಗಬಹುದು, ಪ್ರತಿಬಂಧಕವೂ ಆಗಬಹುದು.

ಬದಲುವ ಸಂದರ್ಭಗಳು ಧಾರ್ಮಿಕ ಆಚಾರ ವಿಚಾರಗಳನ್ನು ಪ್ರಭಾವಿಸುತ್ತವೆ. ಸಂವೇದನಾಶೀಲರು ಧರ್ಮದಲ್ಲಿ ಹೊಸ ಕವಲು ಹುಟ್ಟಿಸುತ್ತಾರೆ. ಬೌದ್ಧ ಧರ್ಮದಲ್ಲಿ ಹೀನಯಾನ, ಮಹಾಯಾನ, ವಜ್ರಯಾನ; ಜೈನಧರ್ಮದಲ್ಲಿ ದಿಗಂಬರ, ಶ್ವೇತಾಂಬರ, ಯಾಪನೀಯ; ಕ್ರಿಶ್ಚಿಯನ್ ಧರ್ಮದಲ್ಲಿ ಕೆಥೊಲಿಕ್, ಪ್ರೊಟೆಸ್ಟಂಟ್; ಮುಸ್ಲಿಂ ಧರ್ಮದಲ್ಲಿ ಶಿಯಾ, ಸುನ್ನಿ ಮೊದಲಾದವು ನಿದರ್ಶನಗಳು.

ಇದು ವೈಜ್ಞಾನಿಕ ಯುಗ, ಅಣುಯುಗ. ಯಾವ ಧರ್ಮದಲ್ಲೂ ಟಿಸಿಲು ಒಡೆಯದ ಕಾಲ. ಧರ್ಮಗಳ ಹೊಸ ಆವಿಷ್ಕಾರಗಳ ಮೂಲಕ 'ಕಾಲ' ತನ್ನನ್ನು ಅರ್ಥಮಾಡಿಕೊಳ್ಳುವ ಯತ್ನವನ್ನಿನ್ನೆಂದೂ ಮಾಡಲಾರದು. ಅರವಿಂದ, ವಿವೇಕಾನಂದ, ಜಿಡ್ಡು ಕೃಷ್ಣಮೂರ್ತಿ, ರಜನೀಶ್ ಮೊದಲಾದವರ ಹೊಸ ಪಂಥಗಳು ಹೊಸ ಧರ್ಮದ ಉತ್ಪನ್ನಗಳಲ್ಲ. ಇಲ್ಲಿ ದ್ವಂದ್ವಮಾನ ಮತ್ತು ಚಾರಿತ್ರಿಕ ಭೌತವಾದ ಎಂಬ ಕ್ರಾಂತಿಕಾರಿ ತತ್ತ್ವಜ್ಞಾನವನ್ನು ಪ್ರತಿಪಾದಿಸುವ ಮಾರ್ಕ್ಸ್,



'ಸ್ವರ್ಣ ಉತ್ಸವ' ಆಚರಿಸುತ್ತಿರುವ ಈ ನಾಡಿಗೆ ಮತ್ತೊಂದು ಹೊಸ-ಹಗರಣದ ಕಾಣಿಕೆ!



ಏಂಗೆಲ್ಸ್‌ರೂ ಇದ್ದಾರೆ. ಪ್ರಾಕೃತಿಕ ಶಕ್ತಿ ಸ್ವಭಾವಗಳ ಸತ್ಯವನ್ನು ಬಗೆಯುತ್ತಿರುವ ಅಸಂಖ್ಯ ವಿಜ್ಞಾನಿಗಳಿದ್ದಾರೆ.

ಜ್ಞಾನ-ವಿಜ್ಞಾನ ಸಹಸ್ರಮುಖಿಯಾಗಿ, ಶೋಧನೆಯ ದೀರ್ಘ ಹಸ್ತಗಳು ದಶದಿಕ್ಕುಗಳಿಗೆ ಚಾಚಿವೆ. ಅವು ಮುಟ್ಟದ ವಸ್ತುವಿಲ್ಲ, ಅರಿಯದ ತಿಳಿವಿಲ್ಲ ಎಂಬಂಥ ವಾತಾವರಣವಿದೆ. ಮಾನವ ತನ್ನೆದುರು ತಾನೆ ದಿಗ್‌ಭ್ರಮಿತನಾಗಿದ್ದಾನೆ. ತನ್ನ ಜ್ಞಾನದ 'ಅರ್ಣವ' ಅಪಾರತೆಗೆ ತಾನೆ ದಂಗಾಗಿದ್ದಾನೆ. ಈ ಚೋದ್ಯ ಇತಿಹಾಸದಲ್ಲಿ ಎಂದೂ ಕಂಡು ಬಂದಿರದ ವಾಸ್ತವ. ನೂರು ದಿಕ್ಕುಗಳಲ್ಲಿ ಪ್ರವಹಿಸುತ್ತಿರುವ ವಿವಿಧ ಬಗೆಯ ಜ್ಞಾನವನ್ನು ವ್ಯಕ್ತಿ ತನ್ನೊಬ್ಬನಲ್ಲಿ ಆವಾಹಿಸಿಕೊಳ್ಳುವುದು ಅಸಾಧ್ಯ. ಸಮುದಾಯ ಮತ್ತು ಕಾಲ ಸೃಜಿಸಿರುವ ಸಂಪತ್ತು ಒಬ್ಬನಿಗೇ ದಕ್ಕಲು ಶಕ್ಯವಿಲ್ಲ. ಕ್ರೋಢೀಕರಣವೂ ಸಾಧ್ಯವಿಲ್ಲ. "ಕ್ಷಯಮಣವಿಲ್ಲ, ಕೇಳ್ದು ಕಡೆಗಂಡವ ನಾವನುಮಿಲ್ಲ, ತದ್ ಅಕ್ಷಯ ನಿಧಿ" ಎಂದು ಪಂಪ ಹತ್ತನೆ ಶತಮಾನದಲ್ಲೇ ವಾಙ್ಮಯದ ಗುಣವನ್ನು ನಿರ್ವಹಿಸಿದ. 'ಶಬ್ದಪಾರ ಮಾರ್ಗಮಶಕ್ಯಂ' ಎಂದು ಕೇಶಿರಾಜ ಉದ್ಗರಿಸಿದ.

ಕೊನೆಗೆ ಎಲ್ಲಿ ಬಂದು ನಿಲ್ಲುವುದು? ಇಂದು ಒಂದಲ್ಲ ಸಹಸ್ರ, ಸಹಸ್ರ ದಾರಿಗಳು, ಸಾವಿರ, ಸಾವಿರ ಚಿಂತನೆಗಳು. ಸರ್ವಾಧಿಕಾರ, ಕೇಂದ್ರೀಕೃತವಾದ, ಮಾತಾಂಧತೆ, ಹೆಜಮನಿ ಯಾವ ಬಗೆಯವಾದರೂ, ಯಾವ ಕ್ಷೇತ್ರದಲ್ಲಾದರೂ, ತಾಳವು ಬಾಳವು. ಪ್ರಕೃತಿಯಲ್ಲಿರುವ ವೈವಿಧ್ಯತೆಯಂತೆ ಮಾನವ ಬದುಕಿನ ವೈವಿಧ್ಯತೆಯೂ ಮಿತಿಮೀರಿದೆ. ನಮಗುಳಿದಿರುವುದೊಂದೇ ದಾರಿ - ಸಹೃದಯತೆ, ಸೌಜನ್ಯ, ಸಹನಶೀಲತೆ, ತೆರೆದ ಮನಸ್ಸು, ಪ್ರಯತ್ನಶೀಲತೆ, ನಿರಂತರ ಅನ್ವೇಷಣ ಪ್ರವೃತ್ತಿ.

ಪ್ರಜಾಪ್ರಭುತ್ವ, ಸ್ವಾತಂತ್ರ್ಯ, ಸಮಾನತೆ ಎಂಬ ರಾಜಕೀಯ ಮೌಲ್ಯಗಳು ಈ ಬಗೆಯ ಯತ್ನಗಳಿಗೆ ಪೂರಕವಾಗಿರುತ್ತದೆ. ಯಾರೂ ಶ್ರೇಷ್ಠರಲ್ಲ, ಯಾರೂ ಕನಿಷ್ಠರಲ್ಲ. ಯಾರೂ ಮೇಲಲ್ಲ. ಯಾರೂ ಕೀಳಲ್ಲ. ಪೂರ್ಣಯೋಗ್ಯ, ಪೂರ್ಣ ಅಯೋಗ್ಯ ಎಂಬ ಅತಿರೇಕಗಳು ಸಲ್ಲವು. ಗೆರೆ ಕೊರೆದು ಹೇಳುವ, ಮುಖಾಮುಖಿಯಾಗುವ ಸ್ಥಾನದಲ್ಲಿ ಈಗ ಜತೆ ಜತೆಯಾಗಿ ಹೋಗುವ, ಸರ್ವ ಸಂಕೀರ್ಣತೆಯ ಮಧ್ಯೆ ಅರ್ಥಕಾಣುವ ರೀತಿ ಕಾಲಿಡಬೇಕು.

ಹೀಗೆ ಹೇಳಿದಾಗ ಪ್ರಗತಿ ವಿಗತಿ; ಪ್ರತಿಗಾಮಿ ಪ್ರಗೋಗಾಮಿ ಎಂಬ ನೆಲೆಯ ವಿಂಗಡಣೆಗೆ ಅರ್ಥವೇ ಇಲ್ಲ ಎಂಬ ಗುಮಾನಿ ಹುಟ್ಟುತ್ತದೆ. ಇದು ತಪ್ಪು. ಪ್ರಗತಿ ವಿಗತಿಗಳೆಂಬ ವೈರುಧ್ಯಗಳಲ್ಲಿ ಸಂಘರ್ಷವಿದ್ದೇ ಇದೆ. ಆದರೆ ಸಾಮಾಜಿಕ ಸಂದರ್ಭಗಳು ಇಷ್ಟು ಸರಳವಿಲ್ಲ. ರಾಜಕೀಯ ಕ್ಷೇತ್ರದ ನಿದರ್ಶನದ ಮೂಲಕ ಇದನ್ನ ವಿವರಿಸುವುದಾದರೆ ಅತಿಬಲಪಂಥೀಯ ಬಿ.ಜೆ.ಪಿ.ಯ ಜತೆ ಅತಿ ಎಡಪಂಥೀಯ ನಕ್ಸಲೈಟ್‌ರನ್ನು ಹೋಲಿಸಿ. ಆಶ್ಚರ್ಯವೆಂದರೆ ಧರ್ಮಗಳ ನಡುವೇನೆ ಮುಖಾಮುಖಿತ್ವ ಸೃಷ್ಟಿಯಾಗುತ್ತಿರುವುದು. ಆರ್.ಎಸ್.ಎಸ್.ಗೆ ಪ್ರತಿಯಾಗಿ ಜಮಾತೆ ಇಸ್ಲಾಂ, ಬಿ.ಜೆ.ಪಿಗೆ ಪ್ರತಿಯಾಗಿ ಮುಸ್ಲಿಂಲೀಗ್. ಈ ಸಂಘರ್ಷದಲ್ಲಿ ಎಡಬಲಗಳ ಮುಖಾಮುಖಿ ಅಂತ್ಯಗೊಂಡಿದೆ. ಬಲದಲ್ಲೇ ಹುಟ್ಟಿರುವ ವೈರುಧ್ಯಗಳಲ್ಲಿ ಸಂಘರ್ಷ ತೀವ್ರವಾಗಿದೆ. ಭಾರತೀಯ 'ನಾಗರಿಕ' ಸಮಾಜದ ಈ ಲಕ್ಷಣ ಚಲನೆಯ ಸ್ವರೂಪಕ್ಕೆ ಕನ್ನಡಿ ಹಿಡಿಯುತ್ತದೆ.

ಸಾರಾಂಶವೆಂದರೆ - ಪ್ರಗತಿಪರ ಚಿಂತನೆಯಲ್ಲಿ ಹುಟ್ಟಿರುವ ಸೈದ್ಧಾಂತಿಕ ಬಿಕ್ಕಟ್ಟು ಚರ್ಚೆಗೆ ಬರಬೇಕಿದೆ. ವೈರುಧ್ಯಗಳ ಅರಿವು ಹೆಚ್ಚಬೇಕಿದೆ. ಅದಕ್ಕೆ ಮೊನಚು ಮೂಡಬೇಕಿದೆ.

ಯಾವ ಕ್ಷೇತ್ರದ ಮೂಲಕ ಪ್ರಗತಿಯ ಸಾಧ್ಯತೆಯನ್ನು ಕಲ್ಪಿಸಿಕೊಳ್ಳಬೇಕೆಂಬ ಗೊಂದಲ ವಿದೆ. ನಮಗೆಲ್ಲ ತಿಳಿದಿರುವಂತೆ ರಾಜಕೀಯ ಕ್ಷೇತ್ರವೇ ನಿರ್ಣಾಯಕ ಶಕ್ತಿಯಾಗುತ್ತಿದೆ. ಅದು ಅತಿರೇಕಗಳಿಗೆ ಎಡೆಮಾಡಿದೆ. ರಾಜಕೀಯವಿಲ್ಲದೆ ಪ್ರಗತಿಯಿಲ್ಲವೆಂದು ಬಿಂಬಿಸಲಾಗುತ್ತಿವೆ. ಇದು ತುಂಬಾ ಅಪಾಯಕಾರಿ. ಭ್ರಷ್ಟತೆಗೆ ಹೊಸ ಹೊಸತಂತ್ರ ಸಿಕ್ಕಿವೆ. ರಾಜಕೀಯ ಭ್ರಷ್ಟತೆಯ ಆಕರವಾಗಿದೆ.

ಹದಗೆಟ್ಟು ಸಾಮಾಜಿಕ ಆರೋಗ್ಯಕ್ಕೆ ಔಷಧಿ ಎಲ್ಲಿದೆ? ರಾಜಕೀಯದಲ್ಲಿಯೆ? ಕಮ್ಯುನಿಷ್ಟ ರಷ್ಯ ಹಾಳಾಗಿ ರಾಜಕೀಯದ ಭ್ರಮನಿರಸನವಾಗಿದೆ. ಸಾಮ್ರಾಜ್ಯಶಾಹಿ ಅಮೇರಿಕ ಇದ್ದುದರಲ್ಲೇ ಮೇಲು ಎಂಬುದಾದರೆ ಅದರಂಥ ದುರಂತ ಇನ್ನೊಂದಿಲ್ಲ. ಇನ್ನೆಲಿದೆ ದಾರಿ?

ನಮ್ಮನ್ನು ನಾವೇ ತಿರುಗಿ ನೋಡಿಕೊಳ್ಳುವಲ್ಲಿ. ನಮ್ಮ ಮಧ್ಯೆ ಕಳೆದು ಹೋದ ನಮ್ಮನ್ನೇ ಹುಡುಕಿಕೊಳ್ಳುವಲ್ಲಿ. ಸಾಮಾಜಿಕ ಪರಿಶೋಧನೆಯಲ್ಲಲ್ಲದೆ ಮತ್ತೆಲ್ಲಿ?

●

# ರೋಮಾಂಚಕಾರಿ ರೋಲರ್ ಸ್ಕೇಟಿಂಗ್ ಕ್ರೀಡೆ

○ ಆರೂರು ಲಕ್ಷ್ಮಣ ಶೇಟ್

*ಚಿತ್ರ : ಈರಣ್ಣ ಕಾಡಪ್ಪನವರ್*

ಯುವ ಜನತೆಯನ್ನು ಸೂಜಿಗಲ್ಲಿನಂತೆ ಸೆಳೆಯುತ್ತಿರುವ ರೋಲರ್ ಸ್ಕೇಟಿಂಗ್ ಒಂದು ಅದ್ಭುತ ಕ್ರೀಡೆ. ಆರೋಗ್ಯ ವರ್ಧನೆಗೆ, ವ್ಯಕ್ತಿತ್ವ ವಿಕಸನಕ್ಕೆ ಇದು ಬಲು ಸಹಕಾರಿ. ಜಗತ್ತಿನಾದ್ಯಂತ ಮನ್ನಣೆ ಪಡೆದಿರುವ ಈ ಕ್ರೀಡೆಯ 'ಕ್ರೇಜ್' ಭಾರತದಲ್ಲೂ ಹೆಚ್ಚುತ್ತಿರುವುದು ಗಮನಾರ್ಹ.

ಗಾಲಿಬೂಟು (ಸ್ಕೇಟ್)ಗಳನ್ನು ಕಾಲುಗಳಿಗೆ ಧರಿಸಿ ಗಾಳಿ ಸೀಳುವ ಗಾಲಿ ವೀರರನ್ನು ಎಲ್ಲೆಡೆಗಳಲ್ಲಿ ನೋಡಬಹುದಾಗಿದೆ. ಮೊದಲ 'ರೋಲರ್ ಸ್ಕೇಟಿಂಗ್'ನ್ನು ಬೆಳಕಿಗೆ ತಂದಾತ ಬೆಲ್ಜಿಯಂನ ಜೋಸೆಫ್ ಮರ್ಲಿನ್ (೧೭೬೦). ನಂತರ ಫ್ರಾನ್ಸ್‌ನ ಪೆಟಿಟ್ ಬ್ಲಿಡ್ ವಿನ್ಯಾಸಗೈದ ಪ್ರಥಮ ಅಧಿಕೃತ ಕಂಪನಿಯ 'ರೋಲರ್ ಸ್ಕೇಟಿಂಗ್' ಮಾರುಕಟ್ಟೆಗೆ ಬಂತು. 'ಬಾಲ್ ಬೇರಿಂಗ್' ಅಳವಡಿಸಿದ



ಸ್ಕೇಟ್‌ಗಳನ್ನು ತಯಾರಿಸಿದಾತ ಅಮೆರಿಕೆಯ ರಿಚರ್ಡ್‌ಸನ್ (೧೮೮೪). ಇಟಲಿಯ ಮೊಂಜಾದಲ್ಲಿ 'ರೋಲರ್ ಸ್ಕೇಟಿಂಗ್' ವಿಶ್ವಮಟ್ಟದ ಕ್ರೀಡೆಯಾಗಿ ಅಧಿಕೃತ ಮನ್ನಣೆ ಪಡೆದು-ಇದೀಗ ವಿಶ್ವಮಟ್ಟದಲ್ಲಿ ಸ್ಪರ್ಧೆಗಳು ನಡೆಯುತ್ತಿರುವುದು ಸರ್ವ ವಿದಿತ.

ನಮ್ಮ ದೇಶದಲ್ಲಿ 'ರೋಲರ್ ಸ್ಕೇಟಿಂಗ್ ಫೆಡರೇಶನ್ ಆಫ್ ಇಂಡಿಯಾ' ಇದರ ಆಶ್ರಯದಲ್ಲಿ ಪ್ರತಿ ವರ್ಷ ರಾಷ್ಟ್ರಮಟ್ಟದ ಸ್ಪರ್ಧೆಗಳು ಜರುಗುತ್ತವೆ. ಕರ್ನಾಟಕ ಇಡಿಯ ದೇಶದಲ್ಲೇ ಅಗ್ರಸ್ಥಾನದಲ್ಲಿರುವುದು ಅಭಿಮಾನದ ಸಂಗತಿ. ಪ್ರತಿ ಊರಿನಲ್ಲೂ ಪರಿಣತ ಕ್ರೀಡಾ ಪಟುಗಳಿದ್ದು-ಇತ್ತೀಚಿನ ವರ್ಷಗಳಲ್ಲಿ ಸ್ಕೇಟಿಂಗ್ ಕಲಿಸುವ ಶಿಬಿರಗಳು ನಡೆಯುತ್ತಿರುವುದು ಗಮನಾರ್ಹ.

**ಹುಬ್ಬಳ್ಳಿಯ ಹೆಮ್ಮೆ :** ಕರ್ನಾಟಕದ ದ್ವಿತೀಯ ಬೃಹತ್ ನಗರ ಹುಬ್ಬಳ್ಳಿಯಲ್ಲಿ ಉರುಳುಗಾಲಿಗಳ ಆಟದ ಬಗ್ಗೆ ಆಸಕ್ತರಾಗಿರುವವರ ಸಂಖ್ಯೆ ದೊಡ್ಡದು. ವಯಸ್ಸಿನ ಪರಿಗಣನೆ ಇಲ್ಲದೆ ರಸ್ತೆಗಳಲ್ಲಿ ಗಾಲಿಬೂಟುಗಳನ್ನು ಧರಿಸಿ ಜಾರುವವರನ್ನು ಮುಂಜಾನೆಯ ವೇಳೆ ಕಾಣಬಹುದಾಗಿದೆ. ಈ ಕ್ರೀಡೆಯನ್ನು ಕಲಿಸುವ ಸಂಸ್ಥೆಗಳು ಅನೇಕ ಇದ್ದು-ಬೇಸಿಗೆಯ ರಜಾದಿನಗಳಲ್ಲಿ ಸ್ಕೇಟಿಂಗ್ ತರಬೇತಿ ಶಿಬಿರಗಳು ನಡೆಯುತ್ತವೆ.

ಹುಬ್ಬಳ್ಳಿಯ 'ಕರ್ನಾಟಕ ರೋಲರ್ ಸ್ಕೇಟಿಂಗ್ ಕ್ಲಬ್'ನ ಸಾಧನೆ ಗಣನೀಯವಾದುದು. ಒಂದೂವರೆ ದಶಕದ ಹಿಂದೆ ಜನ್ಮತಳೆದ ಈ ಸಂಸ್ಥೆ (೧೯೭೨) ಪ್ರತಿ ವರ್ಷ ಬೇಸಿಗೆಯ ರಜಾದಿನಗಳಲ್ಲಿ ಶಿಬಿರಗಳನ್ನು ನಡೆಸುತ್ತಿದೆ. ಹದಿನೈದು ದಿನಗಳ ಕಾಲಾವಧಿಯಲ್ಲಿ ಯೋಗದ ಕಲಿಕೆ, ಶಿಸ್ತಿನ ಕಲಿಕೆ ಹಾಗೂ ಕಲಾತ್ಮಕ ಸ್ಕೇಟಿಂಗ್ ಕ್ರೀಡೆಯ ಕಲಿಕೆ ಸಾಧ್ಯವಾಗುತ್ತದೆ. ಎರಡು ತಿಂಗಳ ಕಾಲ ಮುಂಜಾನೆ ಆರರಿಂದ ಎಂಟರ ತನಕ ಗಾಲಿವೀರರ ಗೌಜಿ, ಗಮ್ಮತ್ತು, ಜಾರುವ ಗತ್ತು ನೋಡುವಂಥದು.

'ಕರ್ನಾಟಕ ರೋಲರ್ ಸ್ಕೇಟಿಂಗ್ ಕ್ಲಬ್'ನ ಅಧ್ಯಕ್ಷರು ಬಸವರಾಜ ಹೊರಟ್ಟಿ, ಜೆ.ವೈ.ಜಕ್ಕರೆಡ್ಡಿ, ನಾರಾಯಣ ಭಾದ್ರಿ, ವಸಂತ ಭಸ್ಮೆ, ವೆಂಕಟೇಶ ನಂದಗಾವಿ, ಎಸ್.ಎಂ.ಹೊಸಮನಿ, ಈರಣ್ಣ ಯಾವಗಲ್, ರಮೇಶ ಭಸ್ಮೆ... ಮುಂತಾದ ಉತ್ಸಾಹಿಗಳು ಈ ಸಂಸ್ಥೆಯನ್ನು ಮುನ್ನಡೆಸುತ್ತಿದ್ದು-ಶಿಬಿರ ನಿರ್ದೇಶಕರಾಗಿರುವವರು ಖ್ಯಾತ ಸ್ಕೇಟಿಂಗ್ ಪಟು ಈರಣ್ಣ ಕಾಡಪ್ಪನವರ್.

**ಪ್ರತಿಭಾವಂತ ಈರಣ್ಣ :** ''ಜಾಗತಿಕ ಯುವ ವರ್ಷ''ದಲ್ಲಿ (೧೯೮೫) ಹುಬ್ಬಳ್ಳಿಯ ಈರ್ವರು ತರುಣರು ಸ್ಕೇಟಿಂಗ್‌ನಲ್ಲಿ ರಾಷ್ಟ್ರೀಯ ದಾಖಲೆ ನಿರ್ಮಿಸಿದ್ದು ಈಗ ಇತಿಹಾಸ. ಈರಣ್ಣ ಕಾಡಪ್ಪನವರ್ ಹಾಗೂ ಪಿ.ವೈ.ಜಕ್ಕರೆಡ್ಡಿ ಹದಿಮೂರು ದಿನಗಳಲ್ಲಿ ೧೩೦೦ ಕಿ.ಮೀ. ಸ್ಕೇಟಿಂಗ್ ಮಾಡಿ ಯುವಶಕ್ತಿಯನ್ನು ಮೆರೆದಿದ್ದಾರೆ. ಹುಬ್ಬಳ್ಳಿಯ ಕಪ್ಪು ಡಾಮಾರು ರಸ್ತೆಗಳಲ್ಲಿ ಗಾಲಿಬೂಟುಗಳನ್ನು ಧರಿಸಿ ಜಾರತೊಡಗಿದ ಹುಡುಗರು ಬೆಂಗಳೂರು, ಕೋಲಾರ, ಚಿತ್ತೂರು, ಪೆರಂಬೂರು ಮಾರ್ಗವಾಗಿ ಮದ್ರಾಸಿಗೆ ತೆರಳಿದರು. ವಿಮಾನದಲ್ಲಿ ಕೌಲಾಲಂಪುರ ತಲುಪಿದರು. ಮಲೇಶ್ಯಾ, ಸಿಂಗಾಪುರದ ರಸ್ತೆಗಳಲ್ಲಿ ಗಾಲಿವೀರರು ಸಹಸ್ರಾರು ಜನರ ಗಮನ ಸೆಳೆದರು.

ಛಾಯಾ ಚಿತ್ರಗ್ರಹಣ, ನಾಟಕಾಭಿನಯ, ವೀರಭದ್ರನ ಒಡಪುಗಳು, ಅಕ್ಕಿಕಾಳಿನಲ್ಲಿ ಅಕ್ಷರಗಳ ಕೆತ್ತನೆ, ಸ್ಕೇಟಿಂಗ್ ಶಿಬಿರ ನಿರ್ವಹಣೆ... ಹೀಗೆ ಬಹುಮುಖ ಪ್ರತಿಭಾವಂತ ಈರಣ್ಣ ಕಾಡಪ್ಪನವರ್. ಕಲಾತ್ಮಕ ಸ್ಕೇಟಿಂಗ್ ಒಂದು ಬಗೆಯಾದರೆ, ವೇಗದ ಓಟ ಇನ್ನೊಂದು ಬಗೆ. ವಿವಿಧ ಬಗೆಯ ಕಸರತ್ತುಗಳು ಇಲ್ಲಿವೆ. ಹುಬ್ಬಳ್ಳಿಯ ಹುಡುಗರಿಗೆ ಗಾಲಿಯ ಗಾಳಿಯೋಟವನ್ನು ಶ್ರದ್ಧೆಯಿಂದ ಕಲಿಸುವ ಇವರು ಮಕ್ಕಳ ರಜಾ ದಿನಗಳನ್ನು ಉಪಯುಕ್ತವಾಗಿಸುತ್ತಿದ್ದಾರೆ.

ಪ್ರತಿ ವರ್ಷ ನೂರಕ್ಕೂ ಅಧಿಕ ಸಂಖ್ಯೆಯ ಹಿರಿ-ಕಿರಿಯ ಕ್ರೀಡಾಸಕ್ತರಿಗೆ ಸ್ಕೇಟಿಂಗ್ ಕಲಿಸುವ ಕಾಡಪ್ಪನವರ್-ವ್ಯಾಯಾಮ, ಸಮಯ ನಿಷ್ಠೆಗೂ ಮಹತ್ವ ಕೊಡುತ್ತಾರೆ. ನಗರದ ಕೇಂದ್ರ ಸ್ಥಳದಲ್ಲಿರುವ ನೆಹರೂ ಕ್ರೀಡಾಂಗಣದ ಒಂದು ಪಾರ್ಶ್ವದಲ್ಲಿ ಸುಂದರ 'ಸ್ಕೇಟಿಂಗ್ ರಿಂಗ್' ಇದ್ದು-ಚಕ್ರಧಾರಿಗಳ ದಂಡು ಅಪಾಯ ಲೆಕ್ಕಿಸದೆ ಆಟದಲ್ಲಿ ಮೈಮರೆತಿರುತ್ತದೆ. ●

# ಜಯಸೂರ್ಯನ ಬೆಳಕಿನಲ್ಲಿ ಪ್ರಜ್ವಲಿಸುತ್ತಿರುವ ಶ್ರೀಲಂಕಾ

ಶ್ರೀಲಂಕಾ ಕ್ರಿಕೆಟ್ ತಂಡದ ಇತ್ತೀಚಿನ ಸಾಧನೆಯನ್ನು ನೋಡಿದಾಗ ಏನೆನಿಸುತ್ತದೆ? ಶ್ರೀಲಂಕ ಒಂದು ದಿನದ ಕ್ರಿಕೆಟ್ ವಿಭಾಗದಲ್ಲಿ ದೈತ್ಯನಂತೆ ಆರ್ಭಟಿಸುತ್ತಿದೆ. ೧೯೯೬ರಲ್ಲಿ ವಿಲ್ಸ್ ವಿಶ್ವಕಪ್ ಕೈಗೆತ್ತಿಕೊಂಡ ಬಳಿಕ ಆ ತಂಡದ ಸಾಧನೆ ನೋಡಿ...! ಸಿಂಗರ್ ಕಪ್, ಸಿಂಗರ್ ಅಕಾಯಿ ಕಪ್, ಇಂಡಿಪೆಂಡೆನ್ಸ್ ಕಪ್, ಏಷ್ಯಾಕಪ್‌ಗಳನ್ನು ಹೆಚ್ಚಿನ ಪ್ರಯಾಸವಿಲ್ಲದೇ ಗೆದ್ದುಬಿಟ್ಟಿದೆ. ಟೀಕಾಕಾರರೆಲ್ಲ "ಶ್ರೀಲಂಕಾ ಕೇವಲ ಒಂದು ಪಂದ್ಯಕ್ಕಷ್ಟೇ ಲಾಯಕ್ಕು ಅದರ ಪೌರುಷವೆಲ್ಲ ಪರಿಪೂರ್ಣವೆನಿಸದ ನಿಗದಿತ ಓವರ್‌ಗಳ ಪಂದ್ಯಗಳಲ್ಲಿ ಅಷ್ಟೆ" ಎಂದಿದ್ದು ಉಂಟು. ಇದಕ್ಕೆ ಆ ತಂಡದ ಟೆಸ್ಟ್ ಸಾಧನೆ ಎದ್ದು ಕಾಣುವ ಸಾಕ್ಷಿಯಾಗಿತ್ತು. ಟೆಸ್ಟ್ ಕ್ರಿಕೆಟ್‌ಗೆ ಪಾದಾರ್ಪಣೆಗೈದು ೧೭ ವರ್ಷಗಳಾದರೂ ಶ್ರೀಲಂಕ ಎಂಟು ಟೆಸ್ಟ್‌ಗಳನ್ನು ಮಾತ್ರ ಜಯಿಸುವಲ್ಲಿ ಸಫಲವಾಗಿತ್ತು. ಆದರೆ ಇಂದಿನ ದಿನಗಳಲ್ಲಿ ಚಿತ್ರಣವೇ ಬದಲಾಗಿದೆ. ಟೆಸ್ಟ್ ವಿಭಾಗದಲ್ಲೂ ಬೃಹತ್ ಮೊತ್ತಗಳನ್ನು ಸೇರಿಸುತ್ತಾ ಅತ್ಯುತ್ತಮ ಪ್ರದರ್ಶನ ನೀಡುತ್ತಿದೆ. ಮೊನ್ನೆಯಷ್ಟೇ ಕೊಲಂಬೊ ಟೆಸ್ಟ್‌ನಲ್ಲಂತೂ ಶ್ರೀಲಂಕ ಭಾರತದ ದಾಳಿಯನ್ನು ಬೇಕಾಬಿಟ್ಟಿಯಾಗಿ ಚಚ್ಚಿ ಹೊಸ ದಾಖಲೆಗಳನ್ನು ಸೃಷ್ಟಿಸಿದೆ. ಎಂತಹ ಅದ್ಭುತ ದಾಖಲೆಗಳವು! ಸದ್ಯದ ದಿನಗಳಲ್ಲಿ ಬಹುಶಃ ಬೇರೆ ತಂಡದವರಿಂದ ನಿರ್ಮಿಸಲಾರದಂತಹ ದಾಖಲೆಗಳು.

ಟೆಸ್ಟ್ ಸರದಿಯೊಂದರಲ್ಲಿ ಅತ್ಯಧಿಕ ೯೫೨ ಓಟಗಳು; ಎರಡನೇ ವಿಕೆಟ್‌ಗೆ ವಿಶ್ವದಾಖಲೆಯ ೫೭೬ ಓಟಗಳು; ಇಬ್ಬರು ಬ್ಯಾಟ್ಸ್‌ಮನ್‌ಗಳು ಎರಡು ದಿನ ಔಟಾಗದೇ ತಂಡದ ಇಬ್ಬರೂ ಬೌಲರ್‌ಗಳು ಇನ್ನೂರಕ್ಕೂ ಹೆಚ್ಚು ಓಟ ಹೊಡೆಸಿಕೊಂಡ ಪ್ರಮೇಯ ಒಬ್ಬ ಭಾರತೀಯ ದಾಳಿ ತನಗೆ ಯಾವ ಲೆಕ್ಕಕ್ಕೂ ಇಲ್ಲವೆಂಬಂತೆ ೩೪೦ ಓಟ ಚಚ್ಚಿದರೆ ಇನ್ನೊಬ್ಬ ೨೨೫ ಓಟ ಬಾರಿಸಿದ.

ಶ್ರೀಲಂಕ ಹೋದ ವರ್ಷ ವಿಲ್ಸ್‌ವಿಶ್ವಕಪ್, ಆ ಬಳಿಕ ಮಹತ್ವದ ಏಕ ದಿನ ಪಂದ್ಯಾವಳಿಗಳನ್ನು ಗೆಲ್ಲುವಲ್ಲಿ, ಈಗ ಆ ತಂಡ ಅಸಾಧಾರಣ ಪ್ರದರ್ಶನ ಹೊರ ಹೊಮ್ಮುವಲ್ಲಿ ಒಬ್ಬ "ಛಲದಂಕಮಲ್ಲ ಆಟಗಾರ"ನ ಅವಿಸ್ಮರಣೀಯ ಕೊಡುಗೆ ಇದೆ. ಆತನ ಹೆಸರು ಸನತ್ ಜಯಸೂರ್ಯ.

ಹೆಸರಿಗೆ ತಕ್ಕಂತೆ ಜಯಸೂರ್ಯ ಶ್ರೀಲಂಕ ತಂಡಕ್ಕೆ ಇದೀಗ ಪ್ರಜ್ವಲಶಾಲಿ. ಮೂರು ವರ್ಷಗಳ ಹಿಂದೆಯಷ್ಟೇ ಭಾರತದ ವಿರುದ್ಧ ಮೂರು ದಿನಗಳ ಪಂದ್ಯದಲ್ಲಿ ರುವಾನ್ ಕಲ್ಪನೆ ಎಂಬ ಸಂಗಡಿಗನೊಂದಿಗೆ ಕೆಳ ಕ್ರಮಾಂಕದಲ್ಲಿ ಜಯಸೂರ್ಯ ಶತಕದ ಜೊತೆಯಾಟವಾಡಿ ತಂಡವನ್ನು ಸೋಲಿನ ಅಂಚಿನಿಂದ ಪಾರು ಮಾಡಿದ್ದ. ಆ ಬಳಿಕ ನಾಯಕ ರಣತುಂಗ, ಮ್ಯಾನೇಜರ್ ದುಲೀಪ್ ಮೆಂಡಿಸ್

○ ಎಸ್. ಅಮೋಘವರ್ಷ

ಜಯಸೂರ್ಯರಿಗೆ ಒಂದು ದಿನದ ಪಂದ್ಯಗಳಲ್ಲಿ ಆಡಲು ಉತ್ತೇಜನವಿತ್ತರು. ಮಧ್ಯಮ ಕ್ರಮಾಂಕದಲ್ಲಿ ಆಡಿದ ಜಯಸೂರ್ಯ ಆಗ ೩೫-೪೦ ಓಟಗಳನ್ನು ಬಿರುಸಿನ ಹೊಡೆತಗಳಿಂದ ಬಾರಿಸಿ ತಂಡದ ಮೊತ್ತ ಹೆಚ್ಚುವಲ್ಲಿ ಪಾತ್ರ ವಹಿಸುತ್ತಿದ್ದರು. ಮುಂದೆ ಆಸ್ಟ್ರೇಲಿಯಾದ ಮಾಜಿ ಆಟಗಾರ ಡೇವ್ ವಾಟಮೋರ್‌ರ ಮಾರ್ಗದರ್ಶನದಲ್ಲಿ ಶ್ರೀಲಂಕ ಕ್ರಿಕೆಟ್ ಅಪೂರ್ವ ಸಾಧನೆ ತೋರಿತು. ವಿಶೇಷವಾಗಿಯೆ ಜಯಸೂರ್ಯ ವಿಜೃಂಭಿಸಿದರು. ಒಂದ ದಿನದ ಪಂದ್ಯಗಳಲ್ಲಿ ಆರಂಭಿಕನಾಗಿ ಬರಲಾರಂಭಿಸಿದ ಜಯಸೂರ್ಯ ಮೊದಲಿನ ೧೫ ಓವರ್‌ಗಳಲ್ಲಿ ತಂಡದ ಸ್ಕೋರ್ ೭೫-೧೦೦ ಆಗುವಂತೆ ಯಶಸ್ವಿಯಾಗಿ ಆಡುತ್ತಿದ್ದರು. ವೇಗದ ಬೌಲರ್‌ಗಳು ದಿಕ್ಕು ದಿಸೆಯಲ್ಲಿ ತಪ್ಪಿದಾಗ ಮುಲಾಜಿಲ್ಲದೆ ಬೌಂಡರಿ-ಸಿಕ್ಸರ್‌ಗಳನ್ನು



ಚಚ್ಚುವಲ್ಲಿ ಸಫಲರಾದ ಜಯಸೂರ್ಯ ಹೋದ ವರ್ಷ ಸಿಂಗಪೂರಿನಲ್ಲಿ ಕೇವಲ ೪೮ ಎಸೆತಗಳಲ್ಲಿ ಪಾಕಿಸ್ತಾನ ವಿರುದ್ಧ ಶತಕ ಬಾರಿಸಿದ್ದರು. ನಂತರ ಪಾಕ್‌ನ ಶಾಹೀದ್ ಆಫ್ರಿದಿ ೩೭ ಎಸೆತಗಳಲ್ಲಿ ಶತಕ ಬಾರಿಸಿ ವಿಶ್ವದಾಖಲೆ ಬರೆದರು. ಆದರೆ ಜಯಸೂರ್ಯ ಮುಂದೆ ಕೆಲ ದಿನಗಳಲ್ಲಿ ಕೇವಲ ೧೭ ಎಸೆತಗಳಲ್ಲಿ ಅರ್ಧಶತಕ ಬಾರಿಸಿ ನೂತನ ವಿಶ್ವದಾಖಲೆಯೊಂದನ್ನು ನಿರ್ಮಿಸಿದರು.

ಇಂಡಿಪೆಂಡೆನ್ಸ್ ಕಪ್‌ನಲ್ಲಿ ಜಯಸೂರ್ಯ ಭಾರತದ ವಿರುದ್ಧ ಲೀಗ್ ಪಂದ್ಯದಲ್ಲಿ ೧೫೧ ಅಜೇಯ ಓಟ ಚಚ್ಚಿದ್ದಲ್ಲದೇ ಫೈನಲ್ ಪಂದ್ಯಗಳಲ್ಲಿ ಅರ್ಧ ಶತಕಗಳನ್ನು ಸಿಡಿಸಿ ಕಪ್ ಶ್ರೀಲಂಕಾ ಮಡಿಲಿಗೆ ವಾಲಿಸಿ "ಸರಣಿ ಪುರುಷೋತ್ತಮ"ನಾದರು. ಏಷ್ಯಾಕಪ್ ಗೆಲ್ಲುವಲ್ಲಿ ಸಹ ಆತನ ಶರವೇಗದ ಆಟ ಪ್ರಮುಖ ಪಾತ್ರ ವಹಿಸಿತು. ಜಯಸೂರ್ಯ ಮನಸ್ವೇಚ್ಛೆ ಎತ್ತುತ್ತಾ ತನ್ನ ವಿಶ್ವಕಪ್ ವಿಜಯ "ಫ್ಲೂಕ್" ಅಲ್ಲ ಎಂಬುದನ್ನು ಸಾಬೀತುಪಡಿಸಿತು. ಈಗಂತೂ ಆ ತಂಡ ಮೊದಲು ಬ್ಯಾಟ್ ಮಾಡಿದರೆ ೩೦೦ಕ್ಕೂ ಅಧಿಕ ಓಟ ಗಳಿಸಿ ಎದುರಾಳಿಗಳನ್ನು ನಡುಗಿಸುತ್ತಿದೆ. ಎದುರಾಳಿ ಬೌಲರ್‌ಗಳಿಗೆ ಜಯಸೂರ್ಯ ತಲೆ ನೋವಾಗಿದ್ದಾರೆ.

●

# ಕಿಲ ಕಿಲ

○ ಗೋಪಾಲಕೃಷ್ಣ ವಂಡ್ಸೆ



ಚಿಣ್ಣರೆ,

ಈ ತಿಂಗಳ ಪುಟಾಣಿ ಪದ್ಯಗಳಲ್ಲಿ ಆರು ಜಲಚರಗಳು ತಮ್ಮ ಹೆಸರು ಕೇಳಬೇಕೆಂದು ನಿಮ್ಮ ಮುಂದೆ ಬಂದಿವೆ. ನೀವು ಜಾಣರಾದರೆ ಉತ್ತರ ನೋಡದೆ ಹೇಳಬೇಕು. ಹೇಳುವಿರಿ ತಾನೇ!?

೧
ನೀರೊಳಗೆ ನಾನು
ಬಹು ದೊಡ್ಡ ಹಡಗು
ಆಡುವ ರಭಸವು
ಮೊಳಗುವ ಗುಡುಗು
ಮೀನುಗಳ ಗುಂಪನು
ಮಾಡುವೆ ತುಡುಗು
ನಾನ್ಯಾರೆಂದು ಚಿನ್ನಾ
ಉತ್ತರ ಮಡಗು !

೨
ಮನುಷ್ಯರೊಂದಿಗೂ
ಸ್ನೇಹ ಬೆಳೆಸುವೆ
ಅವರ ಗಲ್ಲಕೂ
ಮುತ್ತು ನೀಡುವೆ
ಅವರು ಹೇಳಿದ
ಕೆಲಸ ಮಾಡುವೆ
ಹೆಸರು ಹೇಳಿರೆ
ನಿಮ್ಮೊಂದಿಗೆ ಆಡುವೆ !

೩
ಕಡಲಿನಾಳದಲಿ
ನನ್ನ ಜಗಿತ
ಬಹಳ ಬಿಗಿ
ನನ್ನ ಹಿಡಿತ
ಹಿಡಿದರೆ ನಿಲ್ಲಿಸುವೆ
ಎದೆಯ ಮಿಡಿತ
ಉತ್ತರ ನನಗೆ
ಬೇಕೀಗ ತ್ವರಿತ !

೪
ಬೆನ್ನ ಮೇಲಿದೆ
ದಂತದ ಮಾಡು
ವಿರಾಮ ಪಡೆಯಲು
ನನಗದು ಗೂಡು
ಸಾಗರದಲಿ ನನ್ನ
ಬದುಕಿನ ಬೀಡು
ದಡದಲ್ಲೂ ನಡೆವೆ
ಹಿಡಿಯಿರಿ ಜಾಡು !

೫
ನನಗೆ ಇವೆ
ಹತ್ತು ಕಾಲು
ಕೊಂಡಿಗಳೆರಡಿವೆ
ನನಗವು ತೋಳು
ಕಡಿಯಲು ನಾನು
ಚೇಳಿಗೂ ಮೇಲು
ನಾನ್ಯಾರು ಹೇಳಿರಿ
ಕುಡಿದ್ಹಾಗೆ ಹಾಲು !

೬
ನನ್ನ ಮೈ ಬಣ್ಣ
ಕಂದು ಬಿಳಿ ಕಪ್ಪು
ಬಾಯಿ ತೆರೆದರೆ
ನಾನೆರಡು ಚಿಪ್ಪು
ದಡಕೆ ಬಿದ್ದರೆ
ಆಗುವೆ ಬೆಪ್ಪು
ಯಾರೆಂದು ಹೇಳಿರೆ
ಕೊಡುವೆನು ಪಪ್ಪು !

**ಉತ್ತರ :**

೧. ತಿಮಿಂಗಿಲ
೨. ಡಾಲ್ಫಿನ್
೩. ಆಕ್ಟೋಪಸ್
೪. ಕಡಲಾಮೆ
೫. ಏಡಿ
೬. ಮಳಿ (ಕಪ್ಪೆ ಚಿಪ್ಪು)

## ನಾನು ಏನಾಗುವೆ?

ಮಕ್ಕಳೇ,

ಬೇರೆ ಬೇರೆ ಕ್ಷೇತ್ರ, ವೃತ್ತಿಗಳಲ್ಲಿ ಯಶಸ್ವಿಯಾದವರ ಬಗ್ಗೆ ಕೇಳಿದಾಗ, ಓದಿದಾಗ ನಿಮಗೆ ಏನನ್ನಿಸುತ್ತೆ? ನಾನೂ ಹಾಗೆ ಆಗಬೇಕು ಎಂಬ ಆಸೆ ಮೂಡುತ್ತದಲ್ಲವೇ? ಹಾಗಾದರೆ ಈ ತಿಂಗಳು ನಿಮ್ಮ ಇಂತಹ ಆಸೆಗಳ ಬಗ್ಗೆ ಬರೆದು ಕಳಿಸಿ. ನೀವು ದೊಡ್ಡವರಾದ ಮೇಲೆ ಏನು ಆಗಬೇಕೆಂದಿರುವಿರಿ? ಯಾವ ವೃತ್ತಿ, ನೌಕರಿ ಹಿಡಿಯಬೇಕೆಂದಿರುವಿರಿ? ಯಾವ ಸಾಧನೆ ಮಾಡಬೇಕೆಂದು ಛಲ ತೊಟ್ಟಿರುವಿರಿ? ಈ ಬಗ್ಗೆ ಆರು ವಾಕ್ಯಗಳಲ್ಲಿ ಬರೆದು ಕಳಿಸಿ.

- ನಿಮ್ಮ ವಯಸ್ಸು ೧೫ ವರ್ಷ ಮೀರಿರಬಾರದು.
- ನಿಮ್ಮ ಅನಿಸಿಕೆಯನ್ನು ಬಿಳಿ ಹಾಳೆಯಲ್ಲಿ ಬರೆದು ಪಕ್ಕದಲ್ಲಿರುವ ಕೂಪನ್-೨ನ್ನು ಲಗತ್ತಿಸಿ ಈ ಕೆಳಗಿನ ವಿಳಾಸಕ್ಕೆ ಅಂಚೆಯಲ್ಲಿ ಕಳಿಸಿ.
- ನಿಮ್ಮ ಬರಹ ನಮಗೆ ತಲುಪಲು ಕೊನೆಯ ದಿನಾಂಕ : ೦೧-೦೯-೧೯೯೭.

ಸಂಪಾದಕರು, ಬಿಸಿಲ ಬದುಕು ಅಂಚೆ ಪೆಟ್ಟಿಗೆ ೭೯೫೧,
ಬಸವೇಶ್ವರನಗರ, ಬೆಂಗಳೂರು-೭೯.

### ಕಿಲ ಕಿಲ ಕೂಪನ್ - ೩

ಹೆಸರು..................................................

ತರಗತಿ.............................. ವಯಸ್ಸು....................

ತಂದೆ..................................................

ತಾಯಿ..................................................

ವಿಳಾಸ..................................................

..................................................

..................................................

..................................................

# ನನ್ನ ಊರು

**ಕಳೆದ ಸಂಚಿಕೆಯಲ್ಲಿ ''ನನ್ನ ಊರು'' ಎಂಬ ವಿಷಯದ ಬಗ್ಗೆ ಅಭಿಪ್ರಾಯ ಕಳುಹಿಸಲು ೧೫ ವರ್ಷದೊಳಗಿನ ಮಕ್ಕಳಿಗೆ ಸೂಚಿಸಿದ್ದೆವು. ನಾಡಿನ ಮೂಲೆ ಮೂಲೆಗಳಿಂದ ನಮ್ಮ ಕಚೇರಿಗೆ ಹರಿದಬಂದ ಕಾಗದಗಳ ರಾಶಿ ಬಹಳ ದೊಡ್ಡದು. ಅವುಗಳಲ್ಲಿ ಆಯ್ದ ಕೆಲವನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ.**

### ಹಾಳಾದ ಭೀಮರಾಮನ ಗುಡಿ

ನಮ್ಮ ಊರು ಭೀಮರಾಯನಗುಡಿ. ಹಿಂದೆ ಅಮಲಾಪುರವೆಂಬ ಅಭಿಮಾನದ ಈ ಹಳ್ಳಿ ಯಾವ ಕಾರಣಕ್ಕೆ ಹಾಳಾಯಿತೊ? ಜನವಸತಿ ರಹಿತವಾಗಿದ್ದ ಇಲ್ಲಿ ಗುಡಿ ಮಾತ್ರ ಉಳಿದುಕೊಂಡು ಬಂದಿದೆ. ಸದ್ಯದ ಮೂಲ ವಿಗ್ರಹ ಆಂಜನೇಯ ದೇವರದು. ಶೈವ ದೇವಾಲಯದ ಕಲ್ಲು ಬೋದುಗೆ ಕಂಬಗಳಿಂದ ಈಗಿನ ಗುಡಿ ನಿರ್ಮಿಸಿರುವ ಸಾಧ್ಯತೆಯುಂಟು. ಈ ದೇವಾಲಯದ ಮೂಲೆಯಲ್ಲಿ ಶಿವಲಿಂಗವಿದೆ.

- **ಚಂದ್ರಮಣಿ. ಎ.ಡಿ.** (೧೦ ನೇ ತರಗತಿ)

### ಧನವಾಡಹಟ್ಟಿಗೆ ನನ್ನ ಸೇವೆ

ನಮ್ಮ ಊರಿನ ದನಕರುಗಳಿಗೆ ನೀರು ಕುಡಿಯಲು ಹೊಂಡ ನಿರ್ಮಿಸುತ್ತೇನೆ. ಕತ್ತಲಲ್ಲಿ ನರಳುತ್ತಿರುವ ನಮ್ಮ ಊರಿಗೆ ಬಸ್ ಸೌಕರ್ಯವೂ ಇಲ್ಲ. ನಾನು ಇವೆರಡನ್ನೂ ಕಲ್ಪಿಸುವೆ. ಶಾಲೆ, ರೇಶ್ಮೆ ಕೃಷಿ, ಹಳ್ಳಕ್ಕೆ ಸೇತುವೆ ಇವೆಲ್ಲ ನಮ್ಮೂರಿಗೆ ಬೇಕು. ಬೇರೆಯವರು ಸೇತುವೆಗೆ ಒಂದು ಲಕ್ಷ ರೂಪಾಯಿ ಬಿಡುಗಡೆಯಾದರೆ ೫೦,೦೦೦ ರೂ. ಜೇಬಿಗೆ ಹಾಕುತ್ತಾರೆ. ನಾನು ಮಾತ್ರ ಒಂದು ನಯಾ ಪೈಸೆ ತಿನ್ನುವುದಿಲ್ಲ!

- **ವೈ.ಎಂ.ಧನವಾಡೆ,** (೯ನೇ ತರಗತಿ)

### ಆಗ ಸೊಂಡೊಪುರ ಈಗ ಸೂಡಿ

ನಮ್ಮ ಊರು ಸೂಡಿ, ಧಾರವಾಡ ಜಿಲ್ಲೆಯ ರೋಣ ತಾಲೂಕಿನಲ್ಲಿದೆ. ೯೪೫ರಲ್ಲಿ ಕಲ್ಯಾಣ ಚಾಲುಕ್ಯರ ೧ನೇ ಸೋಮೇಶ್ವರನ ಸಹೋದರಿಯಾದ ರಾಣಿ ಅಬ್ಬಕ್ಕ ದೇವಿಗೆ ಉಂಬಳಿಯಾಗಿ ಈ ಊರನ್ನು ಕೊಟ್ಟಿದ್ದರಂತೆ. ಇಲ್ಲಿ ನಾಣ್ಯಗಳನ್ನು ಮುದ್ರಿಸುವ ಟಂಕಸಾಲೆಯೂ ಇತ್ತೆಂಬುದಕ್ಕೆ ಸಾಕ್ಷಿ ಈ ಊರಿನಲ್ಲಿರುವ ಅಕ್ಕಸಾಲಿಗರ ಸಂಖ್ಯೆ ಹಾಗೂ ಇಲ್ಲಿ ಅಕ್ಕ ಸಾಲಿಗರ ಒಂದು ಓಣಿ (Street) ಇದೆ.

ಸೂಡಿಗ್ರಾಮವನ್ನು ಹಿಂದೆ 'ಸೊಂಡಿಲಾಪುರ' ಎಂದು ಕರೆಯುತ್ತಿದ್ದರು. ಇಲ್ಲಿರುವ ದೇವಸ್ಥಾನಗಳನ್ನು ಜಕಣಾಚಾರ್ಯರ ಶಿಲ್ಪಕಲಾ ಮಾದರಿಯಲ್ಲಿ ಕೆತ್ತಲಾಗಿದೆ.

- **ಸುನಿತಾ ಅರಕೇರಿ,** (೯ನೇ ತರಗತಿ)

### ಐತಿಹಾಸಿಕ ಐಹೊಳೆ

ನನ್ನ ಊರು ಐಹೊಳೆ. ಇದು ಜಗತ್ಪ್ರಸಿದ್ಧ ಚಾಲುಕ್ಯರ ೫ನೇ ಶತಮಾನದ ರಾಜಧಾನಿ. ಇಲ್ಲಿ ಸುಮಾರು ೧೨೦ ಕ್ಕೂ ಮಿಕ್ಕಿ ಶಿಲ್ಪಕಲೆಗಳಿವೆ. ನಮ್ಮೂರ ಊಟ ಸಾಧಾರಣವಾಗಿ ಬಿಳಿಜೋಳರೊಟ್ಟಿ, ಮುಳಗಾಯಿ ಪಲ್ಲೆ, ಕಾರೆಳ್ಳು ಚಟ್ನಿ ಬಾಯಿಯಲ್ಲಿ ನೀರೂರವಂತೆ ಆಹಾ! ಒಮ್ಮೆ ಬಂದುತಿಂದು ನೋಡಿ. ತಕ್ಷ ಶಿಲೆ ನಾಲಂದಾ, ವಿಶ್ವವಿದ್ಯಾಲಯಗಳ ಸಮಯಕ್ಕೆ ನಮ್ಮ ಐಹೊಳೆಯು ಸಂಸ್ಕೃತ ವಿಶ್ವವಿದ್ಯಾನಿಲಯವಾಗಿತ್ತೆಂಬುದಕ್ಕೆ ಇಲ್ಲಿ ಹಲವಾರು ಇತಿಹಾಸಕಾರರ ಅಂಬೋಣವಿದೆ.

- **ಸಂತೋಷ ಪಾಟೀಲ,** (೩ನೇ ತರಗತಿ)

### ಗೊಳಸಂಗಿಯ ಜೋಳದ ರೊಟ್ಟಿ

ಬಿಜಾಪೂರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನ ಗೊಳಸಂಗಿ ಗ್ರಾಮನನ್ನ ಹುಟ್ಟೂರು. ನನ್ನ ಊರಿನ ಬಗೆಗೆ ನನಗೆ ಹೆಚ್ಚು ಅಭಿಮಾನ ಇರುವುದು ಏಕೆಂದರೆ ನನ್ನ ಅಜ್ಜ ಮಾಡಿಕೊಡುತ್ತಿದ್ದ ಬಿಳಿ ಜೋಳ ರೊಟ್ಟಿ, ಕಾರೆಳ್ಳು ಹಿಂಡಿ, ಪುಂಡಿಪಲ್ಲೆ, ಕೆನೆ ಮಸರು ಕಡಲಿಪಲ್ಲೆ, ಗೋಳಿಪಲ್ಲೆ, ರಾಜಗೇರಿಪಲ್ಲೆ, ಕುಲಭಿಪಲ್ಲೆ, ಹಾಲಿಪಲ್ಲೆ.

ಇವೆಲ್ಲವುಗಳ ರುಚಿ ಹೇಳತೀರದು. ಆದರೆ ನನ್ನ ಊರಿನಲ್ಲಿ ಸಿಗುವಂತಹ ತರಕಾರಿ ಈಗ ನಾನಿರುವ ಗದಗ ಪಟ್ಟಣದಲ್ಲಿ ಸಿಗುವುದಿಲ್ಲ. ಇಂದು ಪಟ್ಟಣದಲ್ಲಿರುವ ಮೈದಾಹಿಟ್ಟಿನ ಚಪಾತಿ, ಇಡ್ಲಿ, ದೋಸೆ ಇವುಗಳು ನನಗೆ ಹಿಡಿಸುವುದಿಲ್ಲ.

- **ಸಂತೋಷ ಗೊಳಸಂಗಿ,** (೬ನೇ ತರಗತಿ)

### ಮಧುರಚೆನ್ನರ ಹಲಸಂಗಿ

ನನ್ನೂರು ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಹಲಸಂಗಿ ಗ್ರಾಮ. ನಾನು ಈ ಊರಿನಲ್ಲಿ ಜನಸಿದುದೇ ನನಗೆ ಹೆಮ್ಮೆಯ ವಿಷಯ ಏಕೆಂದರೆ ಇಲ್ಲಿ ಖ್ಯಾತ ಕನ್ನಡದ ಕವಿ ''ಮಧುರ ಚೆನ್ನ'' ಜನಿಸಿದ್ದಾರೆ. ಮಹಮ್ಮದ್ ಆದಿಲ್‌ಷಾ ಆಡಳಿತದ ಈ ನಾಡು ಆ ಕಾಲದ ತೋಟಗಳನ್ನೊಳಗೊಂಡು ಹಿಂದು ಮುಸಲ್ಮಾನರ ಒಕ್ಕೂಟದ ಪ್ರತೀಕದಂತಿದೆ. ಪದವಿ ಪೂರ್ವ ಕಾಲೇಜಿನವರೆಗೆ ಶಿಕ್ಷಣವಿದೆ. ಪಾಂಡಿಚೇರಿ ಮಾದರಿಯ ಶ್ರೀ ಅರವಿಂದರ ಆಶ್ರಯ ನಮ್ಮೂರ ಪ್ರಶಾಂತೆಯ ಕುರುಹು ಆಗಿದೆ. ಇಲ್ಲಿ ಗ್ರಾಮ ಪಂಚಾಯತಿಯನ್ನೊಳಗೊಂಡು ಸುತ್ತಮುತ್ತಲಿನವರಿಗೆ ಹಿರಿಯ ಗ್ರಾಮವಾಗಿದ್ದುನ್ನೂ, ಎಲ್ಲದಕ್ಕೂ ಮಾದರಿ ಎಂದು ಹೇಳಲು ನನಗೆ ಹೆಮ್ಮೆ.

- **ಗಣೇಶ ರಾ. ಪೋದ್ದಾರ,** (೮ನೇ ತರಗತಿ)

### ಧುಳಖೇಡಕ್ಕೆ ಬರ್ತೀರಾ?

ಅಂಕಲ್ ನನ್ನೂರು ಧುಳಖೇಡ. ರಾಷ್ಟ್ರೀಯ ಹೆದ್ದಾರಿ ಮೇಲಿರುವ ರಾಜ್ಯದ ಕಡೆ ಊರು. ಪೌರಾಣಿಕ ಕಾಲದಲ್ಲಿ ನಮ್ಮೂರಿನಲ್ಲಿ ದಕ್ಷ ಬ್ರಹ್ಮನಯಜ್ಞ ನಡೆದಿತ್ತಂತೆ. ಈಗಲೂ ಆ ಸ್ಥಳದಲ್ಲಿ ಪವಿತ್ರ ಭಸ್ಮ ಸಿಗುವುದು. ಸುಂದರ ಭೀಮಾನದಿಯ ದಂಡೆಯ ಮೇಲೆ ಶಂಕರಾಚಾರ್ಯರು ಕಟ್ಟಿಸಿದ ಶಂಕರಲಿಂಗನ ಗುಡಿ ಇದೆ. ಸಧ್ಯಕ್ಕೆ ನಮ್ಮಲ್ಲಿ ಭೀಮಾಶಂಕರ ಸಕ್ಕರೆ ಕಾರ್ಖಾನೆಯ ಕಟ್ಟಡ ಕೆಲಸ ನಡೆದಿದೆ.

ನಮ್ಮೂರಿಗೆ ಬರ್ತೀರಾ ಅಂಕಲ್?

- **ಸವಿತಾರಾಣಿ. ಹ. ಬಗಲಿ,** (೭ನೇ ತರಗತಿ)

## ನಾಗರಹಾಳು

ಆರು ಜಾತಿಯ ಜನರಿಂದ ಕೂಡಿದ ನನ್ನೂರು ಆಂತರಿಕವಾಗಿ ಜೀವಿಸುತ್ತಿರುವುದು ಒಂದೇ ಕುಟುಂಬದಂತೆ. ಹುಚ್ಚ ನಾಗರಿಕತೆಯ ಸೋಂಕಿಲ್ಲದ ನನ್ನೂರಿಗೆ, ಮಂದಿರ-ಮಸೀದಿ ಭೀತಿ ಇಲ್ಲ.

ಕಾರ್ಖಾನೆಗಳು ಉಗುಳುವ ಕೆಟ್ಟ ವಾಸನೆ ಇಲ್ಲ. ನೀವು ಯಾರ ಮನೆಗೆ ಹೋದರೂ ಆತ್ಮೀಯ ಸ್ವಾಗತ ದೊರೆಯುತ್ತದೆ.

**– ಎನ್.ಎಂ.ಚನ್ನಮ್ಮ,** (೭ನೇ ತರಗತಿ)

## ವಿದ್ಯಾಕೇಂದ್ರ, ಹರಪನಹಳ್ಳಿ

ನನ್ನ ಊರು ಹರಪನಹಳ್ಳಿ, ನನ್ನ ಊರಿನ ಬಗ್ಗೆ ನನಗೆ ಬಹಳ ಅಭಿಮಾನವಿದೆ. ಅದು ಏಕೆಂದರೆ ನನ್ನ ಊರು ವಿದ್ಯೆಗೆ ಹೆಸರುವಾಸಿ. ಇಲ್ಲಿಗೆ ಓದಲೆಂದು ವಿಧ್ಯಾರ್ಥಿಗಳು ಬೇರೆ ಬೇರೆ ರಾಜ್ಯಗಳಿಂದ ವಲಸೆ ಬರುತ್ತಾರೆ ಹಾಗೂ ಇಲ್ಲಿ ಪುರಾತನ ದೇವಾಯಲಯಗಳು ಸಹ ಇವೆ.

**– ಕೆ. ಉಷಾರಾಣಿ,** (೯ನೇ ತರಗತಿ)

## ಅಲ್ಲಮ ಪ್ರಭುವಿನ ಬಳ್ಳಿಗಾವಿ

ನನ್ನ ಪ್ರೀತಿಯ ಊರು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಬಳ್ಳಿಗಾವಿ. ನನ್ನ ಊರಿನಲ್ಲಿ ಪುರಾತನ ಇತಿಹಾಸದ ದೇವಸ್ಥಾನಗಳಿವೆ. ಹೊಯ್ಸಳರಾಳಿದ ಊರದು. ಅಲ್ಲಮಪ್ರಭು ಜನಸಿದ ಊರು ನಮ್ಮದು. ನನ್ನ ಊರಿನ ತುಂಬಾ ಬರೀ ದೇವಸ್ಥಾನಗಳಿವೆ. ಆದ್ದರಿಂದ ನನಗೆ ನನ್ನ ಊರಿನ ಮೇಲೆ ತುಂಬಾ ಹೆಮ್ಮೆ. ಬೇರೆ ಬೇರೆ ಕಡೆಯಿಂದ ಜನರು ನನ್ನ ಊರನ್ನು ನೋಡಲು ಬರುತ್ತಾರೆ.

**– ಎಂ. ಮಂಜುನಾಥ,** (೧೦ನೇ ತರಗತಿ)

## ಕೆರವನ ಊರು

ನಮ್ಮ ಊರು ಕೆರವನ ಊರು. ಈಗ ಇದು ಕೆರೂರು ಆಗಿದೆ. ಈ ಊರಿಗೆ ಮೊದಲು ಕೆರವನ ಊರು ಎಂದು ಹೆಸರು ಇದ್ದುದರಿಂದ ಇದು ಕೆರವೆಗಳಿಗೆ (ಪಾದರಕ್ಷೆ) ಪ್ರಸಿದ್ಧವಾಗಿದೆ.

ನಮ್ಮ ಊರು ಬಾದಾಮಿ ತಾಲೂಕಿನಲ್ಲಿದೆ. ಬಾದಾಮಿ ಎಂದ ತಕ್ಷಣ ನಮಗೆ ನೆನಪಿಗೆ ಬರುವುದು ಚಾಲುಕ್ಯರ ಆಡಳಿತ. ನಮ್ಮ ಊರಿನಲ್ಲಿ ಮೊದಲು ಚಾಲುಕ್ಯರ ಆಡಳಿತವಿತ್ತು. ಜಾನುವಾರುಗಳ ಸಂತೆಗೆ ನಮ್ಮ ಊರು ಬಾದಾಮಿ ತಾಲೂಕಿನಲ್ಲಿಯೇ ಪ್ರಸಿದ್ಧವಾಗಿದೆ. ನಮ್ಮ ಊರು ನಾಟಕಗಳು ಮತ್ತು ಹಾಡುಗಳಿಗೆ ಬಹಳ ಹೆಸರು ಮಾಡಿದೆ. ನಮ್ಮ ಊರಿನಲ್ಲಿ ಅತ್ಯಂತ ಸುಂದರವಾದ ಶಾಲೆಯಿದೆ. ಇದು ಚಿಕ್ಕ ಊರಾದರೂ ಚೊಕ್ಕವಾದ ಊರು. ಈ ಊರಿನಲ್ಲಿ ಹುಟ್ಟಿದನಾನು ಧನ್ಯಳು.

**– ಮೇಘನಾ ದೇಸಾಯಿ,** (೭ನೇ ತರಗತಿ)

## ಸೀರೆಗಳ ತವರು ರಬಕವಿ

ಬಿಜಾಪುರ ಜಿಲ್ಲೆಯ ಜಮಖಂಡಿ ತಾಲೂಕಿನ ರಬಕವಿ ನನ್ನ ಊರು. ನನ್ನ ಊರು ವ್ಯಾಪಾರಕ್ಕೆ ಪ್ರಸಿದ್ಧವಾಗಿದೆ. ಯಾವ ವ್ಯಾಪಾರ ವೆಂದರೆ ಸೀರೆಯ ವ್ಯಾಪಾರಕ್ಕೆ ಪ್ರಸಿದ್ಧವಾಗಿದೆ. ನನ್ನ ಊರಲ್ಲಿ ವಿದ್ಯುತ್ ಚಾಲಿತ ಮಗ್ಗಗಳಿವೆ. ನನ್ನ ಊರಲ್ಲಿಯ ಜನರಿಗೆ ಉದ್ಯೋಗದ ಕೊರತೆ ಇಲ್ಲ. ಬೇರೆ ಬೇರೆ ಬಣ್ಣ ಸೀರೆಯನ್ನು ತಯಾರು ಮಾಡುತ್ತಾರೆ. ಸೀರೆಯನ್ನು ಖರೀದಿಸಲು ಅಕ್ಕ ಪಕ್ಕದ ಊರಿನವರು ನನ್ನ ಊರಿಗೆ ಬರುತ್ತಾರೆ. ನನ್ನ ಊರು ಸೀರೆಯ ವ್ಯಾಪಾರಕ್ಕೆ ಪ್ರಸಿದ್ಧವಾಗಿದೆ ಎಂದು ಹೇಳಲು ನನಗೆ ಬಹಳ ಹೆಮ್ಮೆಯಾಗುತ್ತದೆ.

**– ವಿನಾಯಕ ಸೋನಾರ,** (೨ ನೇ ತರಗತಿ

## ಕೊಂಡಜ್ಜಿ ಗುಡ್ಡ

ಗುಡ್ಡದಲ್ಲಿ ಸ್ಕೌಟು ಮತ್ತು ಗೈಡ್ಸ್ ತರಬೇತಿ ಕೇಂದ್ರ, ಕೊಂಡಜ್ಜಿ ಬಸಪ್ಪನವರ ಸಮಾಧಿ ಹಾಗೂ ಪ್ರತಿಮೆ ಗೋಪುರ ಕಿರೀಟದಂತಿರುವ ಪ್ರಾರ್ಥನ ಮಂದಿರ, ಮಸ್ತಿಗಲ್ಲು, ಜಿಂಕೆವನ, ಕೆರೆ ದಂಡೆಯ ಕೆಳಗೆ ರಾಮಲಿಂಗೇಶ್ವರ ದೇವಾಲಯ, ಹಸಿರು ಮಡಿಲಂತಿರುವ ಭೂತಾಯಿ ಮತ್ತು ಮಲ್ಲಿಕಾರ್ಜುನ ದೇವಾಲಯ, ಮೀನು ಸಾಗಣಿಕೆಯ ಕೇಂದ್ರ, ಆಂಜನೇಯ ಸ್ವಾಮಿ ಮಂದಿರ, ಮಸ್ಲಿಂಗ ದೇವತೆ ಎನಿಸಿರುವ ಗುಡ್ಡದಮ್ಮ, ತಂಪಾದ ವಾತಾವರಣ ಕಲ್ಪಿಸಿರುವ ಕೊಂಡಜ್ಜಿ ಗುಡ್ಡ.

**– ಎ.ಎಸ್.ಆಶಾ,** (೮ನೇ ತರಗತಿ)

## ಗೋಗಿಗೆ ಬಂದು ಹೋಗಿ

ಗೋಗಿಯು ದೇವಾಲಯ ಮಸೀದಿ ದರ್ಗಾಗಳಿರುವ ಊರು. ಹಿಂದೆ ನನ್ನೂರ ಸೀರೆ ಕುಪ್ಪಸಗಳು ತುಂಬಾ ಪ್ರಸಿದ್ಧವಾಗಿದ್ದವು. ಇಲ್ಲಿ ಗಾಯಕರು ಕವಿಗಳು ಚಿತ್ರಕಾರರು ಇದ್ದಾರೆ. ಜಾನಪದ ಹಾಡುಗಳಿಗೆ ಗೋಗಿ ಪ್ರಸಿದ್ಧ. ಸಜ್ಜೆ ಜೋಳದ ರೊಟ್ಟಿ, ಕಾರಬ್ಯಾಳಿ, ಪುಂಡಿಪಲ್ಯ, ಕಾರೆಳ್ಳು ಚಟ್ನಿ ಬದನೆಕಾಯಿ ಇಲ್ಲಿಯ ಊಟ. ಇಲ್ಲಿ ದೊಡ್ಡಕೆರೆ ಇದೆ. ಅಲ್ಲಿ ತರತರದ ಚಂದದ ನೀರಹಕ್ಕಿಗಳು ಇವೆ. ಅಂದದ ಊರು ಗೋಗಿ ನೀವು ಒಮ್ಮೆ ನನ್ನೂರಿಗೆ ಬಂದು ಹೋಗಿ.

**– ಅರುಣಾ. ಎಸ್.ಅಕ್ಕಿ** (೭ನೇ ತರಗತಿ)

## ತೌಡೂರು : ಎಲ್ಲಾ ಒಂದೊಂದೇ !

ನಮ್ಮ ಊರಿನ ವೈಶಿಷ್ಟವೇನೆಂದರೆ

೧. ನಮ್ಮ ಊರಿನಲ್ಲಿ ಒಂದೇ ಟೀವಿ

೨. ನಮ್ಮ ಊರಿಗೆ ಒಂದೇ ಫೋನ್

೩. ನಮ್ಮ ಊರಿಗೆ ಒಂದೇ ಕೋಳವೆ ಬಾವಿ

೪. ನಮ್ಮ ಊರಿಗೆ ಒಂದು ದೇವಾಲಯ

**– ಟಿ.ಸಿ.ಎಂ. ಕಿರಣ್‌ಕುಮಾರ್ ,** (೧೦ ನೇ ತರಗತಿ)

## ಅಂದದೂರು ಆನಗೋಡು

ನಮ್ಮೂರು ಅಂದದೂರು ಚಂದದೂರು ಆನಂದದೂರು  
ಕಸ್ತೂರಿ ಕನ್ನಡದ ಸುಗಂಧ ಬೀರುತಿರುವ ಊರು  
ವರುಷದಾಚೆ ಇದ್ದ ನಮ್ಮೂರ ಅನಕ್ಷರರು  
ಈಗೆಲ್ಲಾ ಇವರು ನಮ್ಮೂರ ನವಸಾಕ್ಷರರು  
ವೃಕ್ಷನಾಶದ ಕಹಿ ಅನುಭವವ ಅರಿತವರು  
ಮರವೆಂದರೆ ಮಗುವೆನುತ ಆರೈಕೆ ಮಾಡುತಿಹರು  
ಅದಕೆ ನಮ್ಮೂರಿಗೆ ನಿಸರ್ಗದ ನಡುವಿನ ಹನಿರೂರು  
ಊರ ಮಧ್ಯದಿ ಅತ್ತ ಕಡೆ ಭೋರ್ಗರೆವ ಕಡಲು  
ಇತ್ತ ಕಡೆ ಶಾಂತವಾಗಿ ಹರಿವ ಕೊಲ್ಲೂರ ನದಿಯು  
ನಡುವೆ ನಿರಂತರ ಓಡಾಡಿರುವ ಬಸ್ಸು, ಲಾರಿ, ಕಾರು.  
ನಿಸರ್ಗದ ಮಡಿಲಲ್ಲಿ ಕಂಗೊಳಿಸುತಿರುವ  
ನಮ್ಮೂರ ಒಮ್ಮೆಯಾದರೂ ನೋಡು  
ಬಾ ಓ ಕನ್ನಡಿಗ.

**– ಎ.ಜಿ. ಪಲ್ಲವಿ ಬಾಳಿಮಕ್ಕಿ,** (೯ನೇ ತರಗತಿ)

# ಹಾಲಿ''ವುಡ್'' ನಟ ಸುರೇಶ್ ಹೆಬ್ಳಿಕರ್ !



**ಒಂ**ದು ಕಾಲದಲ್ಲಿ ಸಮಾನಾಂತರ ಚಿತ್ರಗಳ ವಕ್ತಾರನೆಂಬಂತೆ ಗುರುತಿಸಲ್ಪಡುತ್ತಿದ್ದ ಸುರೇಶ್ ಹೆಬ್ಳಿಕರ್ ಈಗ ಹೆಚ್ಚು ಕಡಿಮೆ ಮಾಜಿ ಪಟ್ಟವನ್ನು ಒಪ್ಪಿಕೊಂಡಿದ್ದಾರೆ. ಚಿತ್ರ ನಿರ್ಮಾಣ, ನಿರ್ದೇಶನ, ಅಭಿನಯ ಈ ಎಲ್ಲಾ ವಿಭಾಗಗಳಿಂದಲೂ ಸುರೇಶ್ ತಮ್ಮ ನಾಮಪತ್ರವನ್ನು ವಾಪಸ್ ತೆಗೆದುಕೊಂಡಂತೆ ಕಾಣಿಸುತ್ತಿದೆ. ಆದರೆ ಇನ್ನೊಂದೆಡೆ ಸದ್ದಿಲ್ಲದೆ ವಾರ್ತಾ ಇಲಾಖೆಗಾಗಿ, ದೂರದರ್ಶನಕ್ಕಾಗಿ ಸಾಕ್ಷ್ಯಚಿತ್ರಗಳನ್ನು ನಿರ್ಮಿಸುತ್ತಿರುವ ವಿಷಯ ಬಹಳ ಜನಕ್ಕೆ ಗೊತ್ತಿಲ್ಲ. ಆದರಲ್ಲಿ ಸುರೇಶ್ ಕ್ರಿಯೇಟಿವಿಟಿಗೇನೂ ಸ್ಕೋಪ್ ಇದ್ದಂಗೆ ಕಾಣಿಸೋಲ್ಲ. ಆದರೆ ಅವರ ಮೆಚ್ಚಿನ ಸಾಮಾಜಿಕ ಕಳಕಳಿಯ ಅಭಿವ್ಯಕ್ತಿಗೆ ಇದು ರಹದ್ದಾರಿಯಾಗಿರಬಹುದು ಅಥವಾ ಅಂತೂ ಫೀಲ್ಡ್‌ನಲ್ಲಿ ಇನ್ನೂ ಇದ್ದೇನೆ ಎಂಬ ಸಮಾಧಾನ, ಜೊತೆಗೆ ಆರ್ಥಿಕ ಲಾಭ- ಇವೆರಡು ಅಂಶಗಳು ಅವರನ್ನು ಅಲ್ಲಿಗೆ ಬಂಧಿಸಿರಬಹುದು.

ಹೆಬ್ಳಿಕರ್ ಹೆಸರು ಮಾಡಿದ್ದು ೮೦ರ ದಶಕದ ಆರಂಭದಲ್ಲಿ. ಕಲಾತ್ಮಕ-ಕಮರ್ಷಿಯಲ್ ಇವೆರಡರ ನಡುವಣ ದಾರಿಯನ್ನು ಆಯ್ಕೆ ಮಾಡಿಕೊಂಡ ಇವರು ಕೆಲವು ಸದಭಿರುಚಿಯ ಚಿತ್ರಗಳನ್ನು ನೀಡಿದ್ದರು. ಆದರೆ ಆಘಾತ ಚಿತ್ರದ ಬಳಿಕ ಇವರು ಹೊಸ ಸಾಹಸಕ್ಕೆ ಕೈಹಾಕಿದ ಸುದ್ದಿ ಬಂದಿಲ್ಲ.

೪೫ರ ಆಚೆಗಿನ ವ್ಯಕ್ತಿಯ ಕ್ರಿಯೆಗಳೆಲ್ಲವನ್ನೂ ಜನ ಅನುಮಾನದಿಂದಲೇ ನೋಡುತ್ತಾರೆ. ಸುರೇಶ್ ದುರಂತವೆಂದರೆ ಅವರು ಆ ಅನುಮಾನಕ್ಕೂ ಗುರಿಯಾಗಿಲ್ಲ, ಯಾಕೆಂದರೆ ಸಿನಿಮಾ ಪ್ರೇಕ್ಷಕರು ಮರೆತೇಬಿಟ್ಟಿದ್ದಾರೆ. ಇದಕ್ಕೆ ಮುಖ್ಯ ಕಾರಣವೆಂದರೆ ಚಿತ್ರರಂಗದಲ್ಲಿ ಇವರು ಆಯ್ಕೆ ಮಾಡಿಕೊಂಡ ಹಾದಿ. ಸುರೇಶ್ ಒಂದೆಡೆ ನಟ, ಇನ್ನೊಂದೆಡೆ ನಿರ್ದೇಶಕ, ನಿರ್ಮಾಪಕ. ಮೈಕ್ ಕೈಗಿತ್ತರೆ ಗಾಯಕ ಕೂಡಾ. ಸೆಟ್‌ನಿಂದೀಚೆ ಮೈಕ್ ಸಿಕ್ಕರೆ ಸುರೇಶ್ ಪರಿಸರವಾದಿ. ಎಲ್ಲವೂ ಆಗಬೇಕು ಎಂಬ ಹಪಾಹಪಿಯ ಮನುಷ್ಯ ಏನೂ ಆಗದೆ ಇರುವ ಅಪಾಯವಿದೆ. ಆದರೆ ಸುರೇಶ್ ವಿಷಯದಲ್ಲಿ ಇದು ಕೂಡಾ ಅರ್ಧ ಸತ್ಯ.

ಧಾರವಾಡದ ಶ್ರೀಮಂತ ಜಮೀನ್ದಾರರ ಕುಟುಂಬದಲ್ಲಿ ಕೊನೆಯ ಮಗನಾಗಿ ಜನಿಸಿದ ಸುರೇಶ್ ಬಾಲಕನಾಗಿದ್ದಾಗ ಪ್ರಕೃತಿಯ ಆರಾಧಕನಾಗಿದ್ದರಂತೆ. ಸಾಧನಕೇರಿಯಲ್ಲಿ ತನ್ನಷ್ಟಕ್ಕೇ ಹಾಡುತ್ತಾ ಅಲೆದಾಡುತ್ತಿದ್ದರಂತೆ. ಇವರಿಗೆ ಆಗ ಇದ್ದ ಆಸೆಯೆಂದರೆ ಅರ್ಥಶಾಸ್ತ್ರದ ಪ್ರೊಫೆಸರ್ ಆಗುವುದು. ಅನಂತರ ಅರ್ಥಶಾಸ್ತ್ರದಲ್ಲಿ ಎಂ.ಎ. ಪಾಸು ಮಾಡಿ



ಲಂಕೇಶರ 'ಈಡಿಪಸ್' ನಾಟಕವನ್ನು ರಂಗದ ಮೇಲೆ ಕಂಡ ಬಳಿಕ ಸುರೇಶ್ ಮನಸ್ಸು ಬದಲಾಯಿಸಿತು. ಕಾರಂತರ ನಿರ್ದೇಶನ, ಕಾರ್ನಾಡರ ಅಭಿನಯ ಎಷ್ಟೊಂದು ಪರಿಣಾಮಕಾರಿಯಾಗಿತ್ತೆಂದರೆ ಇವರಿಗೆ ಇಂಗ್ಲಿಷ್ ಪರಕೀಯ ಭಾಷೆ, ತನ್ನಂಥವರಿಗೆ ಕನ್ನಡವೇ ಸರಿ ಎಂದು ಜ್ಞಾನೋದಯವಾಯಿತು.

ತಮ್ಮಾಸೆಯನ್ನು ಅರ್ಧ ಪೂರೈಸಿದ್ದುಂಟು. ಐ.ಎ.ಎಸ್.ಪರೀಕ್ಷೆಗೆ ಕುಳಿತು ಹತ್ತು ಅಂಕಗಳ ಅಂತರದಲ್ಲಿ ಫೇಲಾಗಿದ್ದೂ ಉಂಟು. ಇದೇ ಟಚ್ ಅಂಡ್ ಗೋ ಪಾಲಿಸಿ ಅನಂತರವೂ ಅವರ ಬದುಕಲ್ಲಿ ಮುಂದುವರಿಯಿತು.

ಬಾಲ್ಯದಲ್ಲಿ ಸಿನಿಮಾ ಬಗ್ಗೆ ಸುರೇಶ್ ಎಂದೂ ಕನಸು ಕಂಡವರಲ್ಲ. ೧೬ ವರ್ಷದವನಾಗಿದ್ದಾಗ ಸಂತ ಗುರೂಜಿಯ ಆಯೆ ಚಿತ್ರವನ್ನು ನೋಡಿ ಬಹಳ ದಿನ ಅಳುತ್ತಾ ಕುಳಿತಿದ್ದರಂತೆ. ಅನಂತರವೂ ಅವರ ಮೇಲೆ ಗಾಢವಾದ ಪ್ರಭಾವ ಬೀರಿದ ಚಿತ್ರವೆಂದರೆ ಅದೊಂದೇ.

ಸ್ನೇಹಿತರ ವಲಯದಲ್ಲಿ ಸುರೇಶ್ ಇಂಗ್ಲೀಷ್‌ಮ್ಯಾನ್ ಎಂದೇ ಹೆಸರಾಗಿದ್ದರು. ಪಾಶ್ಚಾತ್ಯ ಶೈಲಿಯಲ್ಲಿ ಇವರು ಮಾತಾಡುತ್ತಿದ್ದರೆ ಸ್ನೇಹಿತರಿಗೆ ಅದು ತಮಾಷೆಯಾಗಿ ಕಾಣಿಸುತ್ತಿತ್ತು. ಸುರೇಶ್ ತಮ್ಮ ಬಗ್ಗೆ ಕನಸು ಕಾಣುತ್ತಿದ್ದ ರೀತಿಯೂ ತಮಾಶಿಯಾಗಿಯೇ ಇತ್ತು. ದೊಡ್ಡವನಾದ ಬಳಿಕ ಇಂಗ್ಲಿಷ್ ಸಿನಿಮಾ ಹೀರೋನಂತ ಸೂಟು ಹ್ಯಾಟು ಧರಿಸಿ ಕುದುರೆ ಬೆನ್ನೇರಿ ಸಾಗಬೇಕು. ಮತ್ತದೇ ಹಾಲಿವುಡ್ ಕಲ್ಪನೆ. ಇದೇ ಸುರೇಶ್ ನಟನಾದಾಗ ಟೀಕಾಕಾರರೊಬ್ಬರು ಇವರನ್ನು ಹಾಲಿ 'ವುಡ್'ನಟ ಎಂದು ಗೇಲಿ ಮಾಡಿದ್ದುಂಟು.

೬೦ರ ದಶಕದಲ್ಲಿ ಧಾರವಾಡ ತೊರೆದು ಬೆಂಗಳೂರಿಗೆ ಬಂದಾಗ ಸುರೇಶ್ ಬ್ಯಾಂಕ್ ನೌಕರರಾಗಿದ್ದರು. ಇಂಗ್ಲಿಷ್ ಮೋಹ ಇನ್ನೂ ಜೀವಂತವಾಗಿತ್ತು. ಬೆಂಗಳೂರಲ್ಲಿ ಆಗ ಪ್ರಸಿದ್ಧವಾಗಿದ್ದ ಲಿಟಲ್ ಥಿಯೇಟರ್ ಸೇರಿಕೊಂಡು ಒಂದಿಷ್ಟು ಇಂಗ್ಲಿಷ್ ನಾಟಕಗಳಲ್ಲಿ ನಟಿಸಿದರು. ಆದರೆ ಲಂಕೇಶ್‌ರ ಈಡಿಪಸ್ ನಾಟಕವನ್ನು ರಂಗದ ಮೇಲೆ ಕಂಡಬಳಿಕ ಸುರೇಶ್ ಮನಸ್ಸು ಬದಲಾಯಿತು. ಕಾರಂತರ ನಿರ್ದೇಶನ, ಕಾರ್ನಾಡರ ಅಭಿನಯ ಎಷ್ಟೊಂದು ಪರಿಣಾಮಕಾರಿಯಾಗಿತ್ತೆಂದರೆ ಇವರಿಗೆ ಇಂಗ್ಲಿಷ್ ಪರಕೀಯ ಭಾಷೆ, ತನ್ನಂಥವರಿಗೆ ಕನ್ನಡವೇ ಸರಿ ಎಂದು ಜ್ಞಾನೋದಯವಾಯಿತು. ಅಲ್ಲಿಂದ ಕನ್ನಡ ಸಿನಿಮಾದ ವ್ಯಾಕರಣ ಕಲಿಯುವುದಕ್ಕೆ ಆರಂಭ. ಸುಚಿತ್ರಾ ಫಿಲಂ ಸೊಸೈಟಿ ಒಡನಾಟದಿಂದ ಅದು ಸಾಧ್ಯವಾಯಿತು ಕೂಡಾ.

೭೦ರ ದಶಕದಲ್ಲಿ ಬಂದ ಮಾಡಿ ಮಡಿದವರು ಚಿತ್ರದಲ್ಲಿ ಪುಟ್ಟ ಪಾತ್ರದಲ್ಲಿ ಕಾಣಿಸಿಕೊಂಡ ಸುರೇಶ್ ಪ್ರೇಕ್ಷಕರಿಗೆ ಪರಿಚಿತರಾಗಿದ್ದು ಅಪರಿಚಿತ ಚಿತ್ರದ ಮೂಲಕ.



ಸುರೇಶ್ ಒಂದೆಡೆ ನಟ,
ಇನ್ನೊಂದೆಡೆ ನಿರ್ದೇಶಕ,
ನಿರ್ಮಾಪಕ. ಮೈಕ್ ಕೈಗಿತ್ತರೆ
ಗಾಯಕ ಕೂಡಾ.
ಸೆಟ್‌ನಿಂದೀಚೆ ಮೈಕ್ ಸಿಕ್ಕರೆ
ಸುರೇಶ್ ಪರಿಸರವಾದಿ.

ಕಾಶಿನಾಥ್ ನಿರ್ದೇಶನದ ಆ ಸಸ್ಪೆನ್ಸ್ ಚಿತ್ರದಲ್ಲಿ ಇವರು ಪತ್ತೇದಾರ. ಅಲ್ಲಿಂದ ಸಿನಿಮಾ ಮಾಧ್ಯಮದ ಒಳಹೊರಗನ್ನು ಅರಿಯುವ ಪತ್ತೇದಾರನಂತೆಯೇ ಸುರೇಶ್ ವೃತ್ತಿ ಬದುಕು ತಿರುವು ಪಡಕೊಂಡಿತು. ಕಂಕಣ ಚಿತ್ರದಿಂದ ನಿರ್ದೇಶಕರಾದರು. ಅದಕ್ಕೆ ರಾಷ್ಟ್ರಪ್ರಶಸ್ತಿಯೂ ಬಂತು. ನಿರ್ದೇಶಕರಾಗಿ ಸುರೇಶ್‌ಗೆ ಹೆಸರು ತಂದುಕೊಟ್ಟ ಚಿತ್ರಗಳೆಂದರೆ ಆಗಂತುಕ, ಕಾಡಿನ ಬೆಂಕಿ, ಪ್ರಥಮ ಉಷಾಕಿರಣ, ಆಘಾತ. ಈ ನಾಲ್ಕು ಚಿತ್ರಗಳಿಗೂ ಮನೋವೈಜ್ಞಾನಿಕ ಕಥಾವಸ್ತುವನ್ನೇ ಆಯ್ಕೆ ಮಾಡಿದ್ದು ಇವರ ಹೆಗ್ಗಳಿಕೆ.

ಆಗಂತುಕ ಚಿತ್ರದಲ್ಲಿ ಹೆಂಗಸರ ಬಗ್ಗೆ ಕಿಡಿಕಾರುವ ಸೈಕೋಪಾತ್ ಇದ್ದಾನೆ. ದೇವರಾಜ್‌ಗೆ ಬ್ರೇಕ್ ಕೊಟ್ಟ ಚಿತ್ರವಿದು. ಕಾಡಿನ ಬೆಂಕಿಯಲ್ಲಿ ಈಡಿಪಸ್ ಕಾಂಪ್ಲೆಕ್ಸ್‌ನ ಸಮರ್ಥ ಬಳಕೆಯನ್ನು ಕಾಣಬಹುದು. ಪತ್ನಿಯೊಡನೆ ಸಹಜ ಲೈಂಗಿಕ ಸಂಬಂಧವನ್ನು ಹೊಂದಲಾಗದ ವ್ಯಕ್ತಿ ಪರಸ್ತ್ರೀ ಬಳಿ ಆ ಸುಖವನ್ನು ಹೊಂದುತ್ತಾನೆ. ಸ್ವಲ್ಪವೇ ಯಾಮಾರಿದರೂ ಅಶ್ಲೀಲತೆಯ ಅಂಚು ಸ್ಪರ್ಶಿಸುವ ಅಪಾಯವಿದ್ದ ಈ ವಸ್ತುವನ್ನು ಹೆಬ್ಬಿಕರ್ ನಿಭಾಯಿಸಿದ ರೀತಿ ಮೆಚ್ಚುಗೆಗೆ ಪಾತ್ರವಾಯಿತು. ಅಂದಿನ ಸಂದರ್ಭದಲ್ಲಿ ಇದೊಂದು ಬೋಲ್ಡ್ ಚಿತ್ರವೇ ಆಗಿತ್ತು. ಪ್ರಥಮ ಉಷಾಕಿರಣದಲ್ಲಿ ಭಾರತೀಯ-ಪಾಶ್ಚಾತ್ಯ ಸಂಸ್ಕೃತಿಗಳ ತಾಕಲಾಟವನ್ನು ನಿರೂಪಿಸಿಲಾಗಿದೆ. ಅಮೆರಿಕನ್ ಸಂಸ್ಕೃತಿಯೇ ಶ್ರೇಷ್ಠವೆಂಬ ಭ್ರಮೆಯಲ್ಲಿರುವ ಅಪ್ಪನಿಂದಾಗಿ ಮಗ ಪರಕೀಯ ಪ್ರಜ್ಞೆ ಅನುಭವಿಸುತ್ತಾನೆ. ಕೊನೆಗೆ ಅಪ್ಪ ತನ್ನ ಬೇರಿಗೆ ವಾಪಸ್ಸಾಗುವಲ್ಲಿಗೆ ಚಿತ್ರ ಅಂತ್ಯ.

ಪ್ರಥಮ ಉಷಾಕಿರಣ ಚಿತ್ರ ಆ ವರ್ಷದ ಪನೋರಮಾಗೆ ಆಯ್ಕೆಯಾಗದಿದ್ದಾಗ ಸುರೇಶ್ ಆಯ್ಕೆ ಸಮಿತಿಯ ಮೇಲೆ ಕಿಡಿಕಾರಿದ್ದರು. ಮನೋವಿಕಲ್ಪ ಮಗುವೇ ಕೇಂದ್ರಪಾತ್ರವಾಗಿರುವ ಮಣಿರತ್ನಂ ಚಿತ್ರ 'ಅಂಜಲಿ' ಪನೋರಮಾಗೆ ಆಯ್ಕೆಯಾಗಿರು




ವಾಗ ತಮ್ಮ ಚಿತ್ರವೇಕೆ ತಿರಸ್ಕಾರಕ್ಕೊಳಗಾಯಿತು ಎನ್ನೋದು ಇವರ ಪ್ರಶ್ನೆ. ಅಂಜಲಿ ಕಮರ್ಷಿಯಲ್ ಚಿತ್ರವಾದರೆ ಉಷಾಕಿರಣ ಸೀರಿಯಸ್ ಚಿತ್ರ ಎನ್ನೋದು ಇವರ ವಾದವಾಗಿತ್ತು.

ಆಘಾತ ಚಿತ್ರದಲ್ಲಿ ಪ್ರೀತಿಸಿದವನ ಹೇಡಿತನದಿಂದಾಗಿ ಭ್ರಮನಿರಸನಗೊಂಡು ಮಾನಸಿಕ ರೋಗಿಯಾಗುವ ಹೆಣ್ಣು ಕೇಂದ್ರಪಾತ್ರ. ಅನಂತರ ಆಕೆ ಇನ್ನೊಬ್ಬ ಕಾರ್ಮಿಕ ನಾಯಕನನ್ನು ಪ್ರೀತಿಸುತ್ತಾಳೆ. ಆತ ಕೊಲೆಯಾಗುತ್ತಾನೆ. ಹಳೆಯ ಪ್ರೇಮಿ ಮತ್ತೆ ಹಾಜರಾಗಿ ಈಕೆಗೆ ಬಾಳು ಕೊಡುತ್ತಾನೆ, ಆಕೆ ಹೆಣ್ಣುಮಗುವಿನ ತಾಯಾಗುತ್ತಾಳೆ. ತನ್ನಂತೆ ಈಕೆಯೂ ಕಷ್ಟ ಅನುಭವಿಸುವುದು ಬೇಡ ಎಂದು ಆ ಮಗುವನ್ನು ಸಾಯಿಸುವಲ್ಲಿಗೆ ಚಿತ್ರ ಅಂತ್ಯ. ಚಿತ್ರದ ವಸ್ತು ಅದ್ಭುತವಾಗಿದ್ದರೂ ವರದಕ್ಷಿಣೆ, ಸ್ತ್ರೀ ಶೋಷಣೆ, ಮೊದಲಾದ ಇತರೇ ಕಾಳಜಿಗಳನ್ನು ಚಿತ್ರದಲ್ಲಿ ತುರುಕಿದ್ದರಿಂದ ಅದು ಹಾದಿ ತಪ್ಪಿತು. ಕಾಮಕೇಳಿಯ ದೃಶ್ಯ ಹಾಗೂ ಮಗವಿನ ಹತ್ಯೆಯ ದೃಶ್ಯಗಳಿಂದಾಗಿ ಮಧ್ಯಮವರ್ಗದ ಪ್ರೇಕ್ಷಕರು ಚಿತ್ರವನ್ನು ನೋಡಲಿಲ್ಲ. ಆ ಬಗ್ಗೆ ಸುರೇಶ್ ಪ್ರತಿಕ್ರಿಯೆ ಹೀಗಿತ್ತು : 'ವಿದೇಶಿ ಪ್ರೇಕ್ಷಕರಿಗಾಗಿ ಕಾಮಕೇಳಿಯ ದೃಶ್ಯ ಬೇಕಾಗಿತ್ತು'.

ಈ ನಡುವೆ ಚಮತ್ಕಾರ ಎಂಬ ಮರ್ಡರ್ ಮಿಸ್ಟರಿ ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿದ ಸುರೇಶ್ ಅದರಲ್ಲಿ ಅಪಾರ ನಷ್ಟವನ್ನು ಅನುಭವಿಸಿದರು. ಚಿತ್ರ ಸಿದ್ಧವಾದ ಬಳಿಕ ರೀಲು ತುಂಬಿದ್ದ ಡಬ್ಬವೇ ಕಾಣೆಯಾಗಿದ್ದು ಇನ್ನೊಂದು ಆಘಾತ.

ಕಮರ್ಷಿಯಲ್ ಚಿತ್ರರಂಗ ಯಾವತ್ತೂ ಸುರೇಶ್‌ನ್ನು ಸೀರಿಯಸ್ ಆಗಿ ಪರಿಗಣಿಸಿರಲಿಲ್ಲ. ಇನ್‌ಸ್ಪೆಕ್ಟರ್ ಪಾತ್ರಕ್ಕಷ್ಟೇ ಇವರು ಲಾಯಕ್ಕು ಎನ್ನುವುದು ನಿರ್ಮಾಪಕರ ಅನ್ನಿಸಿಕೆಯಾಗಿತ್ತು. ಇನ್ನೊಂದೆಡೆ ಹೊಸ ಅಲೆಯ ವಕ್ತಾರರೂ ಇವರನ್ನು ಗಮನಿಸಲಿಲ್ಲ. ಹೀಗೆ ತಮ್ಮಷ್ಟಕ್ಕೇ ಒಂದು ದ್ವೀಪವಾಗಿಬಿಟ್ಟ ಸುರೇಶ್‌ಗಿದ್ದ ನಂಬಿಕೆಯೆಂದರೆ ತನ್ನ ಚಿತ್ರಕ್ಕೆ ತನ್ನದೇ ಆದ ಪ್ರೇಕ್ಷಕ ವರ್ಗವಿದೆ. ಆದರೆ ಸುರೇಶ್ ನಿರ್ದೇಶಕನದ ಚಿತ್ರಗಳಾವುವೂ ಗಲ್ಲಾಪೆಟ್ಟಿಗೆಯಲ್ಲಿ ಕ್ರಾಂತಿ ಮಾಡಲಿಲ್ಲ. ಚಾಕಲೇಟ್ ಹೀರೋಗಳಿಗಿಂತ ಭಿನ್ನ ಮುಖಭಾವ, ಸದೃಢ ಮೈಕಟ್ಟು ಹೊಂದಿದ್ದ ಇವರು ಮನಸ್ಸು ಮಾಡಿದ್ದರೆ ಕನ್ನಡ ಚಿತ್ರರಂಗದಲ್ಲಿ ತಮ್ಮದೇ ಆದ ಸ್ಥಾನ ಹೊಂದಬಹುದಿತ್ತು. ಅದು ಸಾಧ್ಯವಾಗಲಿಲ್ಲ ಯಾಕೆಂದರೆ ಹಾಲಿ 'ವುಡ್' ಸಮಸ್ಯೆ ಜೊತೆಗೆ ಎಲ್ಲದಕ್ಕೂ ಕೈಚಾಚುವ ಉತ್ಸಾಹ.

ಈ ಎಲ್ಲಾ ಮಿತಿಗಳ ನಡುವೆಯೂ ಸುರೇಶ್ ಆಗಾಗ ಸುದ್ದಿ ಮಾಡುವ ಕಾಯಕ ಬಿಡಲಿಲ್ಲ. ಬಣ್ಣದ ಲೋಕದಲ್ಲಿದ್ದರೂ ಪರಿಸರ, ವನ್ಯ ಸಂರಕ್ಷಣೆ ಮೊದಲಾದ ಇಶ್ಯೂಗಳ ಬಗ್ಗೆ ತಮ್ಮ ಕಾಳಜಿಯನ್ನು ಭಾಷಣ, ಲೇಖನ, ಸೆಮಿನಾರ್‌ಗಳ ಮೂಲಕ ಹರಿಯಬಿಡುತ್ತಲೇ ಇದ್ದರು. ಇಕೋವಾಚ್ ಎಂಬ ಚಳವಳಿಯನ್ನು ಹುಟ್ಟುಹಾಕಿದರು. ರಾಜ್ಯಾದ್ಯಂತ ಪ್ರವಾಸ ಮಾಡಿ ವಿದ್ಯಾರ್ಥಿಗಳಲ್ಲಿ ಕಾಡು, ಮರಗಿಡಗಳ ರಕ್ಷಣೆ ಬಗ್ಗೆ ಹಾಗೂ ಶಿಕ್ಷಣ, ಸ್ವಚ್ಛತೆ, ಆರೋಗ್ಯದ ಬಗ್ಗೆ ಅರಿವನ್ನುಂಟು ಮಾಡುವುದು ಇದರ ಉದ್ದೇಶ. ಅದು ಆಮೇಲೆ ಏನಾಯಿತು ಎನ್ನುವುದನ್ನು ಅವರೇ ಹೇಳಬೇಕು. ಬೆಂಗಳೂರಲ್ಲಿ ಕೆರೆಗಳು ಕಣ್ಮರೆಯಾಗುತ್ತಿರುವದರ ಬಗ್ಗೆಯೂ ಸುರೇಶ್ ಆಗಾಗ ಪ್ರತಿಭಟನೆ ನಡೆಸಿದ್ದು ಪತ್ರಿಕೆಗಳಲ್ಲಿ ವರದಿಯಾಗುತ್ತಲೇ ಇತ್ತು. ರಾಜಕೀಯವನ್ನೂ ಸುರೇಶ್ ಬಿಡಲಿಲ್ಲ. ೮೯ರ ಚುನಾವಣೆಯಲ್ಲಿ ಶಿವರಾಮ ಕಾರಂತರ ಪರ ಕಾರವಾರದಲ್ಲಿ ಪ್ರಚಾರ ನಡೆಸಿದ್ದುಂಟು.

ಸುರೇಶ್ ಸಾಹಸಗಳೆಲ್ಲವೂ ವ್ಯಕ್ತಿಗತ ನೆಲೆ ಬಿಟ್ಟು ಈಚೆ ಬಾರದೇ ಇದ್ದುದೇ ಅವುಗಳ ವೈಫಲ್ಯಕ್ಕೆ ಕಾರಣವಾಯಿತು. ಬಹುಶಃ ಅವರ ಬಹುಮುಖ ವ್ಯಕ್ತಿತ್ವವೇ ಅವರಿಗೆ ತೊಡಕಾಯಿತು. ಇಂದಿಗೂ ಸುರೇಶ್ ಆಗಾಗ ಸುದ್ದಿ ಮಾಡುತ್ತಾರೆ. ಜನ ಅದನ್ನು ನೋಡಿ ಸುಮ್ಮನಾಗುತ್ತಾರೆ. ಆದರೆ ಚಿತ್ರರಂಗದಲ್ಲಿ ಸುರೇಶ್ ಒಂದಷ್ಟು ಸಾಧನೆ ಮಾಡಿದ್ದಂತೂ ನಿಜ. ಇನ್ನೂ ಒಂದಷ್ಟು ಕೆಲಸ ಮಾಡುವುದಕ್ಕೆ ಕಾಲಾವಕಾಶವೂ ಇದೆ.

**○ ಕೇಶವ ನಾಡಕರ್ಣಿ**




ವೀರಪ್ಪನ್ ಹಿಡಿಯಲು 40 ಕೋಟಿ ಖರ್ಚಾಗಿದೆ-ಸುದ್ದಿ
ನೋಡ್ರೀ. ನಾನೂ ಮುಂದೆ ವೀರಪ್ಪನ್ ಥರ ಆಗ್ಬೇಕೂಂ-
ತಿದೀನಿ. ಸರ್ಕಾರಕ್ಕೆ ವೃಥಾ ಖರ್ಚು. ಕೋಟಿ ಲಂಚ
ಕೊಟ್ಟರೆ ಪೆಡಿಯಾ
ಬಿಟ್ಟು ಬಿಡ್ತೀನಿ.
ಮು. ಮಂತ್ರಿ


ನಿನಗಾಗಿ ನಾವು ರಾತ್ರಿ ಹಗಲು ಅನ್ನದೆ ಧರಣಿ ಮಾಡಿದೆವು.
ಅವರು ಬೆಲೆ ಇಳಿಸದಿದ್ದರೆ ನಮ್ಮ ತಪ್ಪಾ?
ವಿರೋಧ ಪಕ್ಷ


ಮುಂದೆ ಭಾರಿ ಹೆಸರು ಮಾಡ್ತಾನಂತೆ, ದಿನವೂ
ಪತ್ರಿಕೇಲಿ ಹೆಸರು ಬರಬೇಕಂತೆ
ಏನಾಗ್ತೀಯೋ ಅಂದರೆ ವೀರಪ್ಪನ್ ಥರ
ಆಗ್ತೀನಿ ಅಂತಾನೆ... ನೋಡ್ರೀ...




..ಮೊದಲು ಮಿಲಿಟರಿಯವರಿಗೆ ರಕ್ಷಣೆ
ಕೊಟ್ರೆ ಬಿಹಾರಕ್ಕೆ ಬರ್ತೀವಿ ಅಂತಿದ್ರಂತೆ
ಕಣೇ...


ದಳ ರಾಷ್ಟ್ರೀಯ ಮಂಡಲಿ
ಸಭೆಯಲ್ಲಿ ಗದ್ದಲ
-ಸುದ್ದಿ
ಜನತಾ ದಳ
ಕೇಂದ್ರ
ಸರ್ಕಾರ

# ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ

## ಕರ್ನಾಟಕ

ಎಲೆಕ್ಟ್ರಾನಿಕ್ ಕ್ಷೇತ್ರ, ಕಂಪ್ಯೂಟರ್‌ಗಳು ಮತ್ತು ದೂರವಾಣಿ-ಸಂಪರ್ಕ ಕೈಗಾರಿಕೆಗಳಿಗಾಗಿ ಪ್ರಮುಖ ನಿವೇಶನ. ಸಾವಿರಾರು ಬೃಹತ್, ಮಧ್ಯಮ ಮತ್ತು ಸಣ್ಣ ಕೈಗಾರಿಕೆಗಳ ಅಚ್ಚುಮೆಚ್ಚಿನ ತಾಣ. ಸಿಮೆಂಟ್, ಉಕ್ಕು, ಔಷಧ ಸಾಮಗ್ರಿಗಳು, ಮೋಟಾರ್ ಬಿಡಿಭಾಗಗಳು, ಯಂತ್ರೋಪಕರಣಗಳು, ಏರೋ-ಸ್ಪೇಸ್ ಮತ್ತು ಪ್ರಿಸಿಷನ್ ಇಂಜನಿಯರಿಂಗ್‌ಗಳ ಯಶೋಗಾಥೆ. ವಿಪುಲ ನೈಸರ್ಗಿಕ ಸಂಪನ್ಮೂಲಗಳು, ಶಿಸ್ತು ಮತ್ತು ದಕ್ಷತೆಯನ್ನು ಮೈಗೂಡಿಸಿಕೊಂಡಿರುವ ಕಾರ್ಯಪಡೆ, ಆರೋಗ್ಯಕರ, ಮಾಲಿನ್ಯರಹಿತ ವಾತಾವರಣ, ಪ್ರಗತಿಪರ ಕೈಗಾರಿಕಾ ಧೋರಣೆ, ಅಭಿವೃದ್ಧಿಗೆ ಪೂರಕವಾದ ಉತ್ತಮ ಸಂಸ್ಥೆಗಳು, ಸಹಕಾರಿ ಹಣಕಾಸು ಸಂಸ್ಥೆಗಳು ಮತ್ತು ಮೂಲ ವ್ಯವಸ್ಥೆಗಳ ಅತ್ಯುತ್ಕೃಷ್ಟ ಸೌಲಭ್ಯಗಳ ಕಾರಣ, ಕರ್ನಾಟಕವು ಸಣ್ಣ ಕೈಗಾರಿಕೆಗಳ ಸ್ಥಾಪನೆಗೆ ಕೇಂದ್ರ ಬಿಂದುವಾಗಿದೆ.

## ನಿಗಮ

ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ 1960ರಿಂದ ಸಣ್ಣ ಕೈಗಾರಿಕಾ ವಲಯದ ಪೋಷಣೆ ಮತ್ತು ಅಭಿವೃದ್ಧಿಗಾಗಿ ಸತತವಾಗಿ ಶ್ರಮಿಸಿದೆ.

## ಧ್ಯೇಯೋದ್ದೇಶಗಳು

ರಾಜ್ಯದಲ್ಲಿ ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಮೂಲ ಸೌಲಭ್ಯಗಳನ್ನು ಒದಗಿಸುವುದು.

## ಸವಲತ್ತುಗಳು

ಕೆ.ಎಸ್.ಎಸ್.ಐ.ಡಿ.ಸಿ. ರಾಜ್ಯದಲ್ಲಿ ಸಣ್ಣ ಕೈಗಾರಿಕಾ ಘಟಕಗಳಿಗೆ ಒದಗಿಸುವ ಒಟ್ಟಾರೆ ಸೇವೆಗಳಲ್ಲಿ ಈ ಕೆಳಗಿನವು ಸೇರಿವೆ.

- ಕೈಗಾರಿಕಾ ವಸಾಹತುಗಳು
- ಕೈಗಾರಿಕಾ ಮಳಿಗೆಗಳು
- ಕೈಗಾರಿಕಾ ನಿವೇಶನಗಳು
- ಕೈಗಾರಿಕಾ ಕಚ್ಚಾ ಸಾಮಗ್ರಿಗಳು
- ಸಣ್ಣ ಉದ್ಯಮಶೀಲರಿಗೆ ಆಡಳಿತದಲ್ಲಿ ಮಾರ್ಗದರ್ಶನ
- ತಾಂತ್ರಿಕ ಗ್ರಂಥಾಲಯ ಸೌಲಭ್ಯ
- ವ್ಯಾಪಾರ ಕೇಂದ್ರಗಳು

## ಯಶಸ್ಸಿನ ಹಾದಿ

ಕೆ.ಎಸ್.ಎಸ್.ಐ.ಡಿ.ಸಿ. ಸಣ್ಣ ಕೈಗಾರಿಕೆಗಳಿಗಾಗಿ ಈಗಾಗಲೇ ಅಸ್ತಿತ್ವದಲ್ಲಿರುವ ಮೂಲ ವ್ಯವಸ್ಥೆಗೆ ಶೇಕಡ 60ರಷ್ಟು ಕೊಡುಗೆ ನೀಡಿದೆ. 125 ಕೈಗಾರಿಕಾ ವಸಾಹತುಗಳನ್ನು ಸ್ಥಾಪಿಸಿದೆ ಮತ್ತು 5230ಕ್ಕೂ ಅಧಿಕ ಕೈಗಾರಿಕಾ ಮಳಿಗೆಗಳನ್ನು ನಿರ್ಮಿಸಿದೆ.

126 ಎಲೆಕ್ಟ್ರಾನಿಕ್ ಘಟಕಗಳಿಗೆ ಆಸರೆ ನೀಡಿರುವ 3 ಬಹುಮಹಡಿ ಕಟ್ಟಡಗಳನ್ನೂ ಸಹ ನಿರ್ಮಿಸಿದೆ. ಪೀಣ್ಯ ಒಂದನೆಯ ಹಂತದಲ್ಲಿ ಭಾರತೀಯ ಮಾನಕ ಕಾರ್ಯಾಲಯಕ್ಕಾಗಿ ಕೇಂದ್ರೀಯ ಪರೀಕ್ಷಾ ಪ್ರಯೋಗಾಲಯದ ಸ್ಥಾಪನೆಯಲ್ಲಿ ನಿಗಮದ ಪಾತ್ರವೂ ಇದೆ. ರಾಜಾಜಿನಗರದಲ್ಲಿ ಸಿದ್ಧ ಉಡುಪುಗಳ ಸಂಕೀರ್ಣವನ್ನು ಅಭಿವೃದ್ಧಿಪಡಿಸಿದೆ. ಗುಲ್ಬರ್ಗಾದಲ್ಲಿ ಒಂದು ಅದ್ವಿತೀಯ ತಾಂತ್ರಿಕ-ಕೈಗಾರಿಕಾ ಸಮುಚ್ಚಯ ನಿರ್ಮಾಣವಾಗಿದೆ. ಇಂತಹುದೇ ಸಮುಚ್ಚಯವನ್ನು ಪೀಣ್ಯದಲ್ಲಿ ನಿರ್ಮಿಸುವ ಮಹತ್ವಾಕಾಂಕ್ಷೆಯನ್ನೂ ಸಹ ನಿಗಮವು ಹೊಂದಿದೆ.

ಪೀಣ್ಯ 1, 2 ಮತ್ತು 3ನೆಯ ಹಂತಗಳಲ್ಲಿ ಕ್ರಮವಾಗಿ 12, 14 ಮತ್ತು 12 ಲಘು ಕೈಗಾರಿಕಾ ಘಟಕಗಳಿಗೆ ಆಸರೆ ನೀಡಿರುವ 3 ಬಹುಮಹಡಿ ಕಟ್ಟಡಗಳನ್ನು ನಿರ್ಮಿಸಿದೆ.

ಕಲ್ಲುಗಳನ್ನು ಕತ್ತರಿಸುವ ಹಾಗೂ ಮೆರುಗು ಮಾಡುವ ಕೈಗಾರಿಕೆಗಳಿಗಾಗಿ ವಿವಿಧ ಅಳತೆಗಳ 31 ಪ್ಲಾಟುಗಳುಳ್ಳ ಒಂದು ವಿಶೇಷ ಮಾದರಿಯ ವಸಾಹತನ್ನು ಚಿತ್ತಾಪುರ-ಗುಲ್ಬರ್ಗಾದಲ್ಲಿ ಸ್ಥಾಪಿಸಿದೆ.

ಸರ್ಕಾರದ ಹೊಸ ಕಾರ್ಯನೀತಿಯಡಿಯಲ್ಲಿ ಹಾಸನ, ಧಾರವಾಡ ಮತ್ತು ರಾಯಚೂರುಗಳಲ್ಲಿ ಬೆಳವಣಿಗಾ ಕೇಂದ್ರಗಳನ್ನು ಅಭಿವೃದ್ಧಿಪಡಿಸಲು ಪರಿಗಣಿಸಲಾಗಿದೆ.

## ಒಂದು ಅಪೂರ್ವ ಕಾರ್ಯಕ್ರಮ

ಭಾರತರತ್ನ ಡಾ॥ ಬಿ.ಆರ್. ಅಂಬೇಡ್ಕರ್‌ರವರ ಜನ್ಮ ಶತಮಾನೋತ್ಸವ ಕಾರ್ಯಕ್ರಮದಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕೈಗಾರಿಕೋದ್ಯಮಿಗಳ ಹಿತಕ್ಕೋಸ್ಕರ ಜಿಗಣಿಯಲ್ಲಿ 17.04 ಎಕರೆ ವಿಸ್ತಾರದ ಕೈಗಾರಿಕಾ ವಸಾಹತುವಿನಲ್ಲಿ ವಿವಿಧ ಅಳತೆಗಳ 100 ಕೈಗಾರಿಕಾ ಮಳಿಗೆಗಳನ್ನು ಮತ್ತು 84 ಪ್ಲಾಟ್‌ಗಳನ್ನು ನಿರ್ಮಿಸಿದ್ದು ಹಂಚಿಕೆಯನ್ನೂ ಸಹ ಮಾಡಲಾಗಿದೆ. ಈ ಅವಕಾಶ ಪಡೆಯುವ ಫಲಾನುಭವಿಯು ವೆಚ್ಚದ ಶೇಕಡಾ 40 ಭಾಗವನ್ನು ಮಾತ್ರ ತುಂಬಬೇಕಾಗಿದ್ದು ಉಳಿದ ಶೇಕಡಾ 60 ಭಾಗವು ಕರ್ನಾಟಕ ಸರ್ಕಾರದ ಸಹಾಯಧನವಾಗಿರುತ್ತದೆ.

ಅಲ್ಲದೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕೈಗಾರಿಕೋದ್ಯಮಿಗಳ ಹಿತಕ್ಕೋಸ್ಕರ ವಿವಿಧ ಸ್ಥಳಗಳಲ್ಲಿ 60 ಸೂಪರ್ ಮಿನಿ ಕೈಗಾರಿಕಾ ಮಳಿಗೆಗಳನ್ನು ನಿರ್ಮಿಸಿದೆ. ಈ ಅವಕಾಶ ಪಡೆಯುವ ಫಲಾನುಭವಿಗಳು ವೆಚ್ಚದ ಶೇಕಡಾ 60 ಭಾಗವನ್ನು ಮಾತ್ರ ತುಂಬಬೇಕಾಗಿದ್ದು ಉಳಿದ ಶೇಕಡಾ 40 ಭಾಗವು ಸರ್ಕಾರದ ಸಹಾಯಧನವಾಗಿರುತ್ತದೆ.

## ನಮ್ಮ ಆಕಾಂಕ್ಷೆಗಳು

- ವಿಶೇಷ ಘಟಕ ಯೋಜನೆಯಡಿ ಗ್ರಾಮೀಣ ಉದ್ಯಮಶೀಲರಿಗೆ ಕಡಿಮೆ ವೆಚ್ಚದಲ್ಲಿ ಕೈಗಾರಿಕಾ ಮಳಿಗೆಗಳ ನಿರ್ಮಾಣ.
- ಎಲ್ಲಾ ಜಿಲ್ಲಾ ಪ್ರಧಾನ ಕಛೇರಿಗಳಲ್ಲಿ ಬಹುಮಹಡಿ ಕಟ್ಟಡಗಳ ನಿರ್ಮಾಣ.
- ಔಷಧ ಸಾಮಗ್ರಿಗಳು ಮತ್ತು ಔಷಧಿಗಳು ಮುಂತಾದ ಉತ್ಪನ್ನಗಳಿಗಾಗಿ ಕೈಗಾರಿಕಾ ವಲಯಗಳ ಸ್ಥಾಪನೆ.
- ರಾಜ್ಯದಲ್ಲಿ ಖಾಸಗಿ ವಲಯ ಮತ್ತು ಸಣ್ಣ ಕೈಗಾರಿಕಾ ವಲಯಗಳ ನಡುವೆ ವ್ಯಾಪಾರ ಸಂಪರ್ಕಕ್ಕಾಗಿ ಅಧೀನ ಸಂಸ್ಥೆಗಳ ಅಭಿವೃದ್ಧಿ.





ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ

ಕಾರ್ಪೊರೇಟ್ ಆಫೀಸ್: ಕೈಗಾರಿಕಾ ವಸಾಹತು, ರಾಜಾಜಿನಗರ, ಬೆಂಗಳೂರು - 560 044

ದೂರವಾಣಿ : **3407011** ರಿಂದ **25** ಫ್ಯಾಕ್ಸ್ : **3389526, 3389070**

BISILA BADUKU Kannada Monthly No.MAG (2) PRB.DECL / 3 / 97-98 SEPTEMBER 1997 Regd. BGW/394